# ಪೀಠಿಕೆ.

ಈ ಪುಸ್ತಕವು ಕಲ್ಕತ್ತಾ ನಗರದಲ್ಲಿ ಪ್ರಕಟವಾಗುತಿರುವ "ಭಾರತಿ" ಎಂಬ ವಂಗ (ಬೆಂಗಾಳೀ) ಭಾಷೆಯ ಸುಪ್ರಸಿದ್ಧ ಮಾಸ ಪತ್ರಿಕಾ ಸಂಪಾದಕಿ, ವಂಗ ವಿದುಷೀಮಣಿಯಾದ ಶ್ರೀಮತಿ, ಸ್ವರ್ಣ ಕುಮಾರಿ,ದೇವಿಯಿಂದ ರಚಿತವಾದುದು. ಆಂಗ್ಲ ಭಾಷೆಯಲ್ಲಿರುವ "Fatal Garland" ಎಂಬ ಪುಸ್ತಕವನ್ನು ತದ್ಭಾಷಾ ವಿದರನೇಕರೋದಿರ ಬಹುದು. ಇದಕ್ಕೆ ವಂಗ ಭಾಷೆಯಲ್ಲಿ "ಫುಲೇರ್ ಮಾಲಾ" ಎಂದು ಹೆಸರು. ಈ ಗ್ರಂಥವು ಅತ್ಯಲ್ಪ ಕಾಲದಲ್ಲಿ ಅನೇಕ ಭಾಷೆಗಳಿಗೆ ಪರಿವರ್ತನವಾಗಿರುವಿಕೆಯು ಇದರ ಪ್ರಾಶಸ್ತ್ಯವನ್ನು ಸೂಚಿಸುತಿದೆ.

ನಾನು ಕೇವಲ ಸ್ವಪರಿಶ್ರಮದಿಂದ ವಂಗ ಭಾಷೆಯನ್ನುಅಭ್ಯಾಸವಾಡುತ ಓದಿದಪುಸ್ತಕಗಳಲ್ಲಿ ಈ ಗ್ರಂಥ ರಚನೆಯು ನವೀನವಾಗಿಯೂ ಸರ್ವಜನ ಮನೋರಂಜಕವಾಗಿಯೂ ಇರುವುದೆಂದು ತೋರಿ,ದೇಶಭಾಷೆಗೆ ಪರಿವರ್ತನೆ ಮಾಡಲು ಪ್ರಯತ್ನಿಸಿದೆನು.ಈ ತೆರನ ಮಹತ್ಕಾರ್ಯದಲ್ಲಿ ಹೆಜ್ಜೆ ಯಿರಿದ ನನಗೆ ಮೊತ್ತ ಮೊದಲಲ್ಲಿ ಕನ್ನಡ ಭಾಷೆಯಲ್ಲೂ ವಂಗ ಭಾಷೆಯಲ್ಲೂ ಪರಿಚಯ ಕಡಮೆ ಎಂಬ ನನ್ನ ಅಶಕ್ತತೆಯನ್ನು ಸಂಕೋಚವಿಲ್ಲದೆ ಹೇಳಿಡುವೆನು. ಆದರೂ ಸ್ವಶಕ್ತಿಯುಳ್ಳಷ್ಟು ಇಂತಹ ಗ್ರಂಥಗಳನ್ನು ಪರಿವರ್ತಿಸುವುದರ ಮೂಲಕ ನನಗೆ ಉಭಯ ಭಾಷೆಯಲ್ಲೂತಕ್ಕಷ್ಟು ಪರಿಚಯ ಉಂಟಾಗುವುದರಜೊತೆಗೆ ಅಲ್ಪಸ್ವಲ್ಪ ದೇಶಭಾಷಾ ಮಾತೆಯಸೇವೆಯಾದೀತೆಂಬ ಊಹೆಯೂ,ಗ್ರಂಥಸಂಪಾದಕಿಯ ಕೌಶಲ

ವೂ, ನನ್ನನ್ನು ಈ ಕಾರ್‍ಯದಲ್ಲಿ ಮುಂದು ನುಗ್ಗುವಂತೆ ಪ್ರೋತ್ಸಾಹಪಡಿಸಿದುದರಿಂದ ಸಾಧ್ಯವಾದ ಮಟ್ಟಿಗೂ ಮೂಲ ಗ್ರಂಥದ ಆಶಯುವನ್ನು ಬಿಡದೆ ಭಾಷಾಂತರ ಮಾಡಿದೆನು. ನಾನು ಬರೆದ ಈ ಪುಸ್ತಕವನ್ನು ಓದಿಸಿ ಕೇಳಿದ ನನ್ನ ಮಿತ್ರಮಂಡಲಿಯು ಮತ್ತಷ್ಟು ಪ್ರೋತ್ಸಾಹಪಡಿಸಿದುದರಿಂದ ವಂಗ ಭಾಷೆಯು ಇತರ ಅನೇಕ ನಾವಲುಗಳನ್ನು ಭಾಷಾಂತರ ಮಾಡಿಯೂ, ಮಾಡುತಲೂ, ಇರುವೆನು.

ಬರೆಮಾದ ಪುಸ್ತಕಗಳೆಲ್ಲವೂ ದೇಶೀಯರ ಕೈಗೆ ಸಕಾಲದಲ್ಲಿ ದೊರೆಯುವಂತೆ ಪ್ರಕಟವಾಗುವುದನ್ನು ಕುರಿತು ತಕ್ಕ ಸಹಾಯ ಸಂಪತ್ತಿಲ್ಲದೆ ಯೋಚಿಸುತಿರುವಲ್ಲಿ ನನಗೆ ಪರಮ ಮಿತ್ರರೂ ಹಿತಚಿಂತಕರೂ ದೇಶಭಾಷಾಭಿಮಾನ ಮಾನನೀಯರೂ ಆದ ಶ್ರೀಯುತ ವಾಜಪೇಯಂ ಕೃಷ್ಣಯ್ಯನವರು ಸ್ವಕೀಯ ಮುದ್ರಣಾಲಯದಲ್ಲಿ ಈ ಗ್ರಂಥಮಾಲೆಯನ್ನು ಸ್ವಪರಿಶ್ರಮದಿಂದ ಪ್ರಕಟಿಸುವುದಾಗಿ ವಾಗ್ದಾನಮಾಡಿದರು. ವಿದ್ಯುಚ್ಛಕ್ತಿಯಸಹಾಯದಿಂದ ಈ ನವನಾಗರಿಕತೆಯಕಾಲಾನುಸಾರವಾಗಿ ನಡೆಯುವ ಈ ಕಾರ್‍ಯದಿಂದ ಭಾಷೆಗೂ ದೇಶಕ್ಕೂ ಆಗುವ ಮಹೋಪಕಾರ ಭಾರವನ್ನು ಈ ಮಹನೀಯರು ಯಲ್ಲಬಗೆಯಿಂದಲೂ ವಹಿಸಿದುದರಿಂದ ನನ್ನ ಭವಿಷ್ಯತ್ಕಾರ್‍ಯಗಳಿಗುಂಟಾದ ಸಹಾಯವಿಷ್ಟೆಂದು ಶೃತಪಡಿಸಲಾರೆನು. ಮಹತ್ಕಾರ್‍ಯಗಳು ಮಹದಾಶ್ರಯ ದೊರೆತಲ್ಲದೆ ಪೂರೈಸದು. ಈ ಅಂಶದಲ್ಲಿ ವಾಗ್ದಾನರೂಪವಾಗಿ ಅರ್ಥಭಾರವನ್ನೂ ಸಮಸ್ತಸ್ವಾತಂತ್ರ್ಯದೊಡನೆ ಕಾರ್‍ಯಭಾರವನ್ನೂ, ನಂನ ಮಿತ್ರರು ವಹಿಸಿದುದರಿಂದ ನನ್ನ ಉದ್ದೇಶ್ಯಗಳೆಲ್ಲವೂ, ಸಾಕಾರದಷ್ಟು

ಕ್ಷೇತ್ರದಲ್ಲಿ ಈಡೇರುವುದೆಂಬ ನಂಬುಗೆ ಯುಂಟಾಯಿತೆಂದು ನನ್ನ ಆಶ್ರಯದಾತರೆಲ್ಲರಿಗೂ ಸಂತೋಷದಿಂದ ಕೃತಪಡಿಸುತ್ತೇನೆ.

ಈ ಕಥೆಯಲ್ಲಿ ನಾಯಿಕೆಯು ಶಕ್ತಿಯು. ನಾಯಕನು ಗಣೇಶದೇವನು. ಇಂಗ್ಲಿಷ್ ಭಾಷೆಯಲ್ಲಿ ಶಕ್ತಿಗೆ ಶೋಕ್ಟಿ (Sokti) ಯೆಂಬ ಹೆಸರುಂಟು. ಕನ್ನಡದಲ್ಲಿ ನಾಯಿಕೆಯಾದ ಶಕ್ತಿಯ ಹೆಸರನ್ನೆ ಪುಸ್ತಕಕ್ಕೆ ಬಳೆಸುವದು ಯುಕ್ತವೆಂದು ಸನ್ಮಿತ್ರರು ಅಭಿಪ್ರಾಯಪಟ್ಟದ್ದರಿಂದ ಅದನ್ನೆ ಅಂಗೀಕರಿಸಿದೆನು.

ಇದರಲ್ಲಿ ಮಹಮದೀಯ ಸಾಮ್ರಾಜ್ಯ ಸಿಂಹಾಸನಾಸೀನರಾದ ಸಿಕಂದರಷಾ ಗಯಾಜುದ್ದೀನನೆಂಬ ತಂದೆಮಕ್ಕಳ ಘೋರ ಯುದ್ಧಪ್ರಕ್ರಿಯೆಯೂ, ಚಕ್ರವರ್ತಿ ಗಯಾಜುದ್ದೀನನಿಗೂ ಸಾಮಂತ ರಾಯನಾದ ಗಣೇಶದೇವನಿಗೂ ನಡೆದ ಸಂಗ್ರಾಮದಲ್ಲಿ ರಾಜ ಪುತ್ರ ಸಾಮಂತರಾಜನು ಸಾರ್ವಭೌಮ ಸಿಂಹಾಸನವನ್ನೇರುವಿಕೆಯೂ ರಾಜಪುತ್ರಸ್ತ್ರೀಯು ಮಹಮ್ಮದೀಯ ಯುವಕನೊಡನೆ ಕಲೆಯುವಿಕೆಯೂ, ರಾಜಪುತ್ರಯುವಕನೋರ್ವನು ಮಹಮ್ಮದೀಯಾಂಗನೆಯ ಪಾಣಿಗ್ರಹಣವಮಾಡಿ ಚಕ್ರವರ್ತಿಯಾದುದೇ ಮೊದಲಾದ ಪೂರ್ವೇತಿಹಾಸ ಪ್ರಸಂಗವೂ,ಹಿಂದೂ ಮಹಮ್ಮದೀಯ ಜಾತ್ಯೈಕ್ಯತೆಯೂ, ಅತ್ಯದ್ಭುತ ವರ್ಣನೀಯವು. ಕಥಾನಾಯಿಕೆಯಾದ ಶಕ್ತಿಯ ಧೈರ್ಯಸ್ಥೈರ್ಯ ಸಾಹಸಗುಣಗಳು ಯೆಂತಹರ ಮನವನ್ನಾದರೂ ಆಕರ್ಷಿಸದಿರದು. ಕಾಲೋಚಿತವಾಗಿ ಅನುರಾಗವಿಹೀನವಾದ ದಾಂಪತ್ಯದ ಪರಿಣಾಮ ಫಲವು ಚಿತ್ರಿತವಾಗಿ ಸ್ವೈಜಾನುರಾಗವುಳ್ಳ ದಾಂಪತ್ಯದ ಪರಿಣಾಮವನ್ನೂ ಸೂಚಿಸುತಿರುವುದರಿಂದ ಆಬಾಲವೃದ್ಧ ಸ್ತ್ರೀಪುರುಷರೆಲ್ಲರೂ ಅಗತ್ಯವಾಗಿ ಓದತಕ್ಕದು.

ಈ ಗ್ರಂಥಮಾಲೆಯ ಯೆರಡನೆಯ ಪುಸ್ತಕವು "ಸಂಯುಕ್ತೆ" ಯೆಂಬ ಹೆಸರಿನಿಂದ ಕ್ಷಿಪ್ರದಲ್ಲಿ ಪ್ರಕಟವಾಗುವುದು. ಅನುಕ್ರಮವಾಗಿ ಕೈ. ಬಂಕಿಂಚಂದ್ರಚಟ್ಟೋಪಾಧ್ಯಾಯ ಅವಿನಾಶಚಂದ್ರದಾಸ ಎಂ, ಎ, ಕವಿಸಾರ್ವಭೌಮ ಬಿರುದಾಂಕಿತ ಶ್ರೀಯುತ ರವೀಂದ್ರನಾಥಟಾಗೋರ್ ಮುಂತಾದ ಪ್ರಮುಖರ ಮುಖೋದ್ಗತವಾದ ವಂಗಭಾಷೆಯ ಪ್ರಮುಖೋಪನ್ಯಾಸಗಳೂ ಡಿಟೆಕ್ಟಿವ್ ನಾವಲುಗಳೂ, ಸಾಮಾಜಿಕ ನಾಟಕಗಳೂ, ಯೆರಡು ತಿಂಗಳಿಗೊಂದರಂತೆ ಗ್ರಂಥರೂಪವಾಗಿ ಸುಪಾಠ್ಯವಾದ ಕನ್ನಡ ಗದ್ಯಶೈಲಿಯಲ್ಲಿ ಪ್ರಕಟವಾಗುವುವು.

ಈ ಮುದ್ರಣವು ಅನೇಕ ಕಾರ್ಯ ಗೌರವದಿಂದ ಅವಸರದೊಳು ಅಚ್ಚಾದುದರಿಂದ ಅಲ್ಲಲ್ಲಿ ಅಕ್ಷರ ಸ್ಖಾಲಿತ್ಯಗಳಿರಬಹುದಾದರೂ ಪ್ರಮಾದದೋಷಗಳಾವುವೂ ಇರಲಾರವೆಂಬ ಭರವಸೆ ಇದೆ. ಗುಣೈಕಪಕ್ಷಪಾತಿಗಳಾದ ಪಂಡಿತರೂ, ಗ್ರಾಹಕರೂ, ದಯೆಯಿಟ್ಟು ಲೋಪಗಳನ್ನು ತಿಳಿಸಿದಪಕ್ಷದಲ್ಲಿ ಉಚಿತ ರೀತಿಯಿಂದ ತಿದ್ದುವೆನು.

ಈ ಕಾರ್ಯದಲ್ಲಿ ನನಗೆ ಪ್ರೋತ್ಸಾಹಕರೂ ಸಹಾಯಕರೂ ಆದ ಮಿತ್ರಮಂಡಲಿಗೆ ಕೃತಜ್ಞತೆಯೊಡನೆ ವಂದಿಸುತ ಭವಿಷ್ಯದ್ಗ್ರಂಥಗಳಲ್ಲಿ ಮರಳಿ ನೋಡುವೆನೆಂಬ ಬಯಕೆಯುಳ್ಳ

ಸಜ್ಜನ ವಿಧೇಯ,

1914 ಜನವರಿ. ಭಾರತಿ ಸಂಪಂಗಿರಾಮ.

ಬೆಂಗಳೂರು ಸಿಟಿ.



# ಶಕ್ತಿ

## ೧ನೇ ಪ್ರಕರಣ.

ನಿರ್ಮಲೋದಕ ಪರಿಪೂರಿತವಾದ ಮಹೀಪಾಲ ಸರೋವರವು ಶೋಭಿಸುತಿದೆ. ಉನ್ನತವಾದ ವಕುಳವೃಕ್ಷ ಪಂಕ್ತಿಗಳಾ ಸರಸ್ಸಿಗೆ ಸುತ್ತಲೂ ಒತ್ತಾಗಿ ನೀರಿನ ಬಳಿಗೆ ಬಾಗಿರುತ್ತವೆ. ದಡದಮೇಲೆ ಬಾಲಿಕೆಯರಿಬ್ಬರು ವೊಬ್ಬರನ್ನೊಬ್ಬರು ಹಿಂಬಾಲಿಸಿ ತಟಿನೀತೀರ ಸಮೀಪವನ್ನು ಸೇರಿ ಸಮಾನವಾಗಿ ಹೋಗುತಿರುವರು. ಆ ಸರಸ್ಸಿನೊಳಗಿನ ನೀರಿನ ಸಹಜವಾದ ಶೈತ್ಯವು ತೀರದಲ್ಲಿದ್ದ ಗಿಡಗಳ ದೆಸೆಯಿಂದ ಮತ್ತಷ್ಟು ದಟ್ಟವಾಗುತಿದ್ದಿತು. ಸ್ವಲ್ಪ ದೂರದಲ್ಲಿ ನಾವೆಯೊಂದು ಲಂಗರು ಹಾಕಲ್ಪಟ್ಟು ಗಾಳಿಯ ದೆಸೆಯಿಂದ ನೀರೊಳಗೆ ಈಕಡೆಯಿಂದಾಕಡೆಗೆ ಆಕಡೆಯಿಂದೀಕಡೆಗೆ ಅಲ್ಲಾಡುತ್ತ ತನ್ನ ಬಂಧನಗಳನ್ನು ಬಿಡಿಸಿಕೊಂಡು ಸ್ವೇಚ್ಛಾವಿಹಾರ ಮಾಡಪ್ರಯತ್ನಿಸುತಿರುವುದೋ ಎಂಬಂತಿದ್ದಿತು. ರಾಣಿವಾಸದ ಸ್ತ್ರೀ ಸಮುದಾಯದ ಅಭಿಲಾಷೆಗಳು ಆ ಅಂತಃಪುರದ ಗೋಡೆಗಳನ್ನು ದಾಟಿ ಹೋಗಲಾರದೆ ಅದರೊಳಗಿನ ಜಾಲಕದಿಂದ ಸಿಕ್ಕಿದ ಅವಕಾಶದ ಮಟ್ಟಿಗೆ ಲೋಕವನ್ನು ನೋಡಿ ತೃಪ್ತಿಗೊಳಬೇಕಾಗಿದ್ದಂತೆ ಸ್ಥಿಮಿತತೆ ಯಿಲ್ಲದ ಈ ಯಾನ ಪಾತ್ರವೂ ಅದರ ನಿಯಮಿತಸ್ಥಳದಲ್ಲಿ ಮಾತ್ರವೇ ವಿಹರಿಸುತಿದ್ದಿತು. ಅಷ್ಟರೊಳು ಆ ಬಾಲಿಕೆಯರಿಬ್ಬರೂ ದಡಕ್ಕೆ ಬಂದು ಗಿಡಗಳ ನೆಳಲಲ್ಲಿ ನಿಂತು ವಿಚಾರಕರವಾಗಿ ದೋಣಿಯ ಕಡೆಗೆ ನೋಡಿದರು. ಅಲ್ಲಿ ತೆಪ್ಪವೊಂದುಮಾತ್ರ ವಿದೆಯೆ ಅಲ್ಲದೆ ಅದರಲ್ಲಿ ಯಾರೂ ಇಲ್ಲ. ಅವರಲ್ಲಿ ವೊಬ್ಬ ಬಾಲಿಕೆಯು "ಅಕ್ಕಾ! ರಾಜಕುಮಾರ ನಿನ್ನೂ ಬರಲಿಲ್ಲವೇ?" ಎಂದು ಕೇಳಿದಳು. ಹೀಗೆ ಕೇಳಿದವಳು ನಿರುಪಮೆ. ಆಕೆಯ ವಯಸ್ಸು ಹತ್ತೇ ವರುಷ. ಚಿಕ್ಕ ಮಕ್ಕಳ ಮಾತುಗಳಹಾಗೆ ಆಕೆಯ ಮಾತುಗಳೂ ಮುದ್ದಾಗಿರುತಿದ್ದಿತು. ಆಕೆಯ ಸಖಿಯರು ಆನಂದ ಪರವಶರಾಗಿ ಆಮಾತುಗಳನ್ನು ಮತ್ತೊಮ್ಮೆ ಕೇಳಬೇಕೆಂದು ತವಕ ಪಡುತಿರುವರು. ಶಕ್ತಿ ಯೊಬ್ಬಳಿಗೆ ಮಾತ್ರ ಆಕೆಯ ಮಾತುಗಳು ಕಠೋರತಮವಾಗಿರುವದು. ಈಗ ನಿರುಪಮೆಯ ಮಗ್ಗುಲೊ

ಳು ನಿಂತಿರುವಾಕೆಯು ಆ ಶಕ್ತಿಯೆ. ನಿರುಪಮೆಯು ಆವಾಗ ಮಾತಾಡಿದರೂ ಶಕ್ತಿಯು ಪರಿಹಸಿಸುತಿರುವಳು. ಆದುದರಿಂದ ನಿರುಪಮೆಯು ಶಕ್ತಿಯಿರುವಾಗ ಮಾತಾಡುವುದಕ್ಕೆ ಭಯಪಡುತ ಆಕೆಯ ಸಮೀಪದಲ್ಲಿರುವುದಕ್ಕೆ ಯಿಷ್ಟವಿಲ್ಲದವಳಾಗಿರುವಳು. ಆದರೂ ಅವರಿಬ್ಬರೂ ಯಾವಾಗಲೂ ಕತ್ತಲು ಬೆಳಕುಗಳಹಾಗೆ ಒಬ್ಬರನ್ನೊಬ್ಬರು ಅಗಲದೆ ಯಿರುವರು. ಅದಾವ ಮಹಿಮೆಯಿಂದಲೋ ತಿಳಿಯುವದಿಲ್ಲವಾದರೂ ನಿರುಪಮೆಯು ಶಕ್ತಿಯಿಂದಾಕರ್ಷಿಸಲ್ಪಟ್ಟು ಸರ್ವದಾ ಆಕೆಯ ಜೊತೆಯಲ್ಲಿರುವಳು.

ಆಸರಸ್ತೀರದಲ್ಲಿರುವ ಉದ್ಯಾನ ವನದೊಳಗೆ ಶಕ್ತಿಗಿಂತಲೂ ಮುಂಚಿತವಾಗಿ ಬರುವವರಾದರೂ, ಹೋಗುವವರಾದರೂ, ಯಾರೂಯಿಲ್ಲ. ನಿರುಪಮೆಯು ಮಾತ್ರ ಆಕೆಯ ಜೊತೆಯಲ್ಲಿ ಸಹಜವಾಗಿ ಹೋಗುತಿರುವಳು. ಅವರಿಬ್ಬರಿಗೂ ಅನುದಿನವೂ ಅಲ್ಲಿಗೆ ಬರುವ ರಾಜಕುಮಾರನನ್ನು ನೋಡಬೇಕೆಂಬುದೊಂದೇ ಕೋರಿಕೆಯು. ಆ ಉದ್ಯಾನವನವು ರಾಜನದು. ಅದು ದೊಡ್ಡ ದೊಡ್ಡ ಶ್ರೀಮಂತ ಕುಟುಂಬಿಗರ ಹೆಣ್ಣುಮಕ್ಕಳಿಗೆ ಖೇಲನಾರಂಗವಾಗಿ ಬಿಡಲ್ಪಟ್ಟಿದ್ದಿತು.

ಆ ಕ್ಷಣದಲ್ಲಿದ್ದ ಸ್ಥಿತಿಯಲ್ಲಿ ನಿರುಪಮೆಯು ಆತುರದಿಂದ ಮಾತಾಡಿದಳಲ್ಲದೆ, ಹಿಂದೆಯೇ ನಾಚುಗೆಯಿಂದ ನಿಶ್ಚಯವಾಗಿಯೂ ಶಕ್ತಿಯಿಂದ ಬರುವುದಕ್ಕಿರುವ ಪರಿಹಾಸಕ್ಕೆ ಭಯಪಡುತಿದ್ದಳು. ಆದರೆ ಎಲೆಗೆ ಹೇಡಿಬಾಲಿಕೆಯೆ! ಈಗ್ಗೆ ನಿನ್ನ ಮನೋಹರವಾದ ಮುದ್ದು ಮಾತುಗಳಿಗೆ ಪರಿಹಾಸವು ತಪ್ಪಿ ಹೋಯಿತೆನ್ನೇಳು. ಶಕ್ತಿಗೆ ಆಮಾತು ಕಿವಿಯಲ್ಲಿ ಬಿದ್ದಂತಿಲ್ಲ. "ಬಾ—ಸರಸ್ಸಿನಲ್ಲಿಳಿದು ತಾವರೆಯನ್ನು ಕುಯ್ದುಕೊಳ್ಳೋಣ." ಎಂದುಮಾತ್ರ ಶಕ್ತಿಯು ನಿರುಪಮೆಗೆ ಪ್ರತ್ಯುತ್ತರವನ್ನಿತ್ತಳು. ಕೊಳದಲ್ಲಿಳಿಯುವುದಕ್ಕೆ ನಿರುಪಮೆಯು ಭಯಚಕಿತಳು. ಅವಳು ಯಿಳಿಯಲಾರಳು. ಆದರಿಂದ "ನೀರೊಳಿಳಿಯಲಾರೆನು, ನಾನು ಬಿದ್ದೇನು; ನಾನಿಲ್ಲಿಯೇ ಕುಳಿತು ವಕುಳಮಾಲೆಯನ್ನು ಹೆಣೆಯುವೆನು" ಯೆಂದು ಭಯಪಡುತ ಹೇಳಿದಳು. ಶಕ್ತಿಯು ತಾನು ಹೇಳಿದ ಮಾತಿಗೆ ನಿರುಪಮೆಯು ನಿರಾಕರಿಸುವುದೆಂದಿಗೂ ಕಾಣಳಾದುದರಿಂದ ಮು

ಖವನ್ನು ಗಂಟಿಕ್ಕಿ “ ನೀನು ತಪ್ಪದೆ ಬರತಕ್ಕದೆಂದು ” ಧೂರ್ತತೆಯಿಂದ
ಹೇಳಿದಳು. ಅವಳು ನಿರುಪಮೆಗಿಂತಲೂ ಎರಡು ವರುಷ ಮಾತ್ರ ದೊಡ್ಡ
ವಳು. ಆದರೂ ನಿರುಪಮೆಗೆ ಆಕೆಯ ಬಳಿ ಎಷ್ಟೋ ಭಯವು. ಆದಾಗ್ಯೂ
ಮೊದಲು ಹೇಳಿದ ಮಾತುಗಳ ಪ್ರತಿಧ್ವನಿಯಂತೆಯೇ “ನಾನು ಬರಲಾರೆ”
ನೆಂಬ ಮಾತು ನಿರುಪಮೆಯ ತುಟಿಗಳಿಂದ ಹೇಗೋ ಜಾರಿಬಿಟ್ಟಿತು. ಈ ಬದು
ಲನ್ನೊಪ್ಪಿಕೊಳ್ಳಲಾರದವಳಾಗಿ ಶಕ್ತಿಯು ಕೋಪದಿಂದ ಇಲ್ಲಿಂದ
ಲ್ಲಿಗೆ ಹಾರುತ ಪರಿಭವಿಸಲ್ಪಟ್ಟ ರಾಜ್ಞಿಯಂತೆ “ ನೀನು ಬರಲಾರೆಯ
ಲ್ಲವೆ; ” ಎಂದು ಕಠಿಣವಾಗಿ ಕೇಳಲು “ ಬರಲಾರೆ ” ನೆಂದು ಹೇಡಿಯಾದ
ನಿರುಪಮೆಯು ಮೆಲ್ಲನೆ ನಡನಡುಗುತ ನುಡಿದಳು. “ ಬರಲಾರೆಯೇನು?
ಬಾರದೆ ತಪ್ಪದೆಂದು ” ಶಕ್ತಿಯು ಭಯಪಡುತಿದ್ದವಳ ಕೈಹಿಡಿದೆಳೆ
ದಳು. ಆ ಬಾಲಿಕೆಯು ನಿರಾಶೆಯಿಂದ ಬಿಡಿಸಿಕೊಳುವುದಕ್ಕೆ ಪ್ರಯತ್ನಿಸುತ
“ ನಾನು ಬರಲಾರೆ ” ನೆಂದು ರೋದಿಸುತಿದ್ದಳು. ಆಗ ಇನ್ನಿಬ್ಬರು
ಬಾಲಿಕೆಯರು ಗಿಡಗಳ ಮರೆಯಲ್ಲಿ ಕಾಣಬಂದರು. ಅವರಿದನ್ನು ನೋಡಿ
“ ಶಕ್ತೀ! ನಿರುಪಮೆಯನ್ನು ಎಲ್ಲಿಗೆಳೆಯುತಿರುವೆ? ವಿತರವಿದು ? ,, ಎಂದು
ಕೂಗಿಕೊಂಡರು.

ನಂತರ ಶಕ್ತಿಯು ನಿರುಪಮೆಯ ಕೈಬಿಟ್ಟು ಬಿಟ್ಟು “ ಏನೂ
ಇಲ್ಲ. ವಿನೋದಕೋಸ್ಕರ ಆಕೆಯನ್ನು ಕೂಡ ಕೊಳದಲ್ಲಿಳಿದು ತಾವರೆ
ಹೂಗಳನ್ನು ಕುಯ್ಯಬೇಕೆಂದು ಬರಹೇಳುತಿರುವೆನು. ಅವಳು ಬರುವುದಿಲ್ಲ
ವಂತೆ” ಎಂದು ಸಂಕೋಚದಿಂದ ಬದುಲು ಹೇಳಿದಳು. ಪಾಪ! ನಿರುಪ
ಮೆಗೆ ಧೈರ್ಯವು ಎಳ್ಳಷ್ಟಾದರೂ ಇಲ್ಲ. ಅವಳು ತನ್ನ ಸಖಿಯರಿಬ್ಬರನ್ನೂ
ನೋಡಿ ನಾನು ಬೀಳುವೆನೆಂದು ದೀನಳಾಗಿ ಗೋಣಗುಟ್ಟಿದಳು.

ಆದನ್ನು ಕೇಳಿ ಶಕ್ತಿಯು. “ಪಾಪ ! ಎಳೆಯಮಗು! ಬಿದ್ದುಹೋ
ಗುವುದು ನಿಜವೆ.” ಎಂದು ನಕ್ಕಳು.

“ ಅವಳು ನಿಜವಾಗಿಯೂ ಸಣ್ಣ ಹುಡುಗಿಯೆ, ಅವಳನ್ನು ಬಿ
ಟ್ಟುಕೊಡು ! ಬಾ ! ನಾನು ಹಿಂಬಾಲಿಸುವೆನು, ಹೂ ಕುಯ್ಯುವುದಕ್ಕೆ.”

ಎಂದು ಹೊಸತಾಗಿ ಬಂದವರಿಬ್ಬರಲ್ಲಿ ವೊಬ್ಬಳಾದ ಕುಸುಮಕುಮಾರಿಯೆಂಬವಳೆಂದಳು.

ಹೀಗೆ ಕುಸುಮಕುಮಾರಿಯೂ, ಶಕ್ತಿಯೂ, ಪದ್ಮಗಳನ್ನು ಕುಯ್ಯಲು ನೀರೊಳಗಿಳಿದರು. ಕಾಮಿನಿಯು, ಭಯದಿಂದಿದ್ದ ನಿರುಪಮೆಯ ಕಣ್ಣಳನ್ನೊರಸಿ ಬುಜ್ಜಗಿಸಿ "ನೋಡಿದೆಯಾ! ಈ ಕೆಳಗೆ ವುದುರಿರುವ ವಕುಳ ಪುಷ್ಪಗಳ ದೆಸೆಯಿಂದ ಈ ನೆಲವು ಎಷ್ಟು ರಮಣೀಯವಾಗಿರುದೋ? ಇಲ್ಲಿ ಬಾ! ಹೂಗಳನ್ನಾರಿಸೋಣ" ಎಂದಳು.

ಅಷ್ಟಕ್ಕೆ ಕಣ್ಣೀರು, ಸುರಿಯುತಿದ್ದಂತೆಯೇ ನಿರುಪಮೆಯ ಮುಖದಲ್ಲಿ ಕಿರುನಗೆಯು ಹುಟ್ಟುತಿರಲು ತನ್ನ ಯೆಡಗೈಯ್ಯನ್ನು ನೀಡಿ, "ಇದು ನೋಡು ನಾನೊಂದು ದಾರದುಂಡೆಯನ್ನು ತಂದಿರುವೆನು. ಇದರಿಂದೊಂದು ವಕುಳ ಮಾಲೆಯನ್ನು ಹೆಣೆದು ರಾಜಕುಮಾರನಿಗೆ ಸಮರ್ಪಿಸುವೆನು" ಎಂದು ಸಂತೋಷಾತಿಶಯದಿಂದ ನುಡಿದಳು.

ಅದು ಫಾಲ್ಗುಣ ಮಾಸವು. ಸ್ವಲ್ಪ ಚಳಿಯುಂಟಾಗಿಸಲು ಪ್ರಯತ್ನಿಸುವುದಾಗಿಯೂ ವಂಗವಾಸಿಗಳು ಸೀತಕಾಲವೆಂದು ಹೇಳಿಕೊಳ್ಳತಕ್ಕುದಾಗಿಯೂ, ಇರುವ ಹ್ರಸ್ವಕಾಲವು ಆಗತಾನೆ ಗತಿಸಿರುವುದು. ನವೀನವಸಂತವು ತಲೆದೋರಿ ಚೂತಪ್ರಸೂನಗುಚ್ಛಗಳು ದಟ್ಟಗಳಾಗಿ ಜೋಲಾಡುತಿದ್ದುವು. ಅವುಗಳ ಮೃದುಲ ಪಲ್ಲವಗಳ ಸುಗಂಧವು ಆ ಉದ್ಯಾನವನಕ್ಕೆ ಬರುವವರೆಲ್ಲರಿಗೂ ಸ್ವಾಗತ ಸತ್ಕಾರವನೀಯುತಿದ್ದಿತು. ದೂರದಿಂದ ಕೋಗಿಲೆಗಳು ಕೂಗುತ ಭುವಿಯನ್ನು ಅಲಂಕರಿಸುವುದಕ್ಕೋ, ಎಂಬಂತೆ ಸಮೃದ್ಧಿಯಾಗಿ ವುದುರಿರುವ ಕುಸುಮರಾಶಿಯ ಪರಿಮಳದಿಂದ ತಮ್ಮ ಮಧುರ ಗೀತವನ್ನು ಸಮ್ಮೇಳನ ಮಾಡುತಿದ್ದಿತು. ಇಂತಹ ಗೀತ ಸೌರಭ ಶೋಭಿತವಾದ ಆ ಕೊಳನಲ್ಲಿ ವಿಹರಿಸಿ ಆ ಬಾಲಿಕಾಮಣಿಯರು ತಮ್ಮ ಸೀರೆಯ ಸೆರಗಿನ ತುಂಬ ಆಗತಾನೇ ವುದುರಿದ ಹವಳದ ಹೂವನ್ನಾರಿಸಿ ಸರಸ್ತೀರಕ್ಕೆ ಬಂದು ಅಲ್ಲಿ ಸ್ತಿಮಿತವಾಗಿ ಕುಳಿತು ವಸಂತ ಕುಸುಮ ಮಾಲಿಕೆಗಳನ್ನು ಪೋಣಿಸುವುದಕ್ಕೆ ವೊದಲಿಟ್ಟರು.



## ಪ್ರಕರಣ ೨.

ಆ ಸಮಯದಲ್ಲಿ ಅಸ್ತಂಗತನಾದ ಸೂರ್ಯನು ಲೋಕವೆಲ್ಲಕ್ಕೂ ಕತ್ತಲನ್ನು ಕಳುಹುವ ತರುಣವು ಸಂಧಿಸಿ ಕಣ್ಬೆಳಕನ್ನೂ ಕಗ್ಗತ್ತಲನ್ನೂ ಸಂಧಿಸುವಂತೆ ಮಾಡುವ ಸಂಧ್ಯಾರಾಗವು ಸನ್ನಿಹಿತವಾಯಿತು. ಪಶ್ಚಿಮ ದಿಸೆಯೊಳು ಸ್ವರ್ಣಚ್ಛಾಯೆಯು ಮಹೀಪಾಲ ಪುಷ್ಕರಿಣೀ ಜಲಗಳನ್ನು ಮುತ್ತಿಟ್ಟುಕೊಳುತಿದ್ದಿತು. ಹೀಗೆ ಅವತರಿಸುವ ಕಿರಣಗಳಿಗೆ ಮನೋಹರವಾದ ವಸ್ತುಗಳೆರಡು ಸರಸ್ಸಿನಲ್ಲಿ ಕಾಣಿಸಲು ಅವುಗಳನ್ನು ಅವು ನಿಂತು ನೋಡುತಿದ್ದಂತೆ ತೋರಿತು. ಮೃದುಲ ಸಲಿಲಪ್ರಸೂನಗಳ ನಡುವೆ ಇಬ್ಬರು ಕನ್ಯಕಾಮಣಿಯರು ಖೇಲನೋತ್ಸುಕತೆಯಿಂದಲೂ, ಪದ್ಮಕಾಂತಿಯನ್ನು ಪರಿಹಸಿಸುವ ತಮ್ಮ ಮುಖಕಮಲಗಳಲ್ಲಿ ತುಳುಕಾಡುವ ಯೌವನಾಂಕುರಗಳಿಂದಲೂ, ನೋಡುವವರಿಗೆ ಯಿಂಪಾಗಿರುವಂತೆ ಯೊಡಾಡುತಿದ್ದರು. ಆ ಹೂಗಳಕಾಂತಿಗಳು ತಮ್ಮ ನಡುವೆ ವಿಹರಿಸುತಿರುವ ಆ ಕೋಮಲಾಂಗಿಯರ ಮುಖಗಳೊಂದಿಗೆ ಪಂತವಾಡುತಿದ್ದುವು. ಆ ಕನ್ನೆಯರೆಲ್ಲಿ ಹೋದರೆ ಅಲ್ಲಲ್ಲಿ ಆಸರಸ್ಸು ನಗುತಿದ್ದಂತೆ ತೋರುತಿದ್ದಿತು.

ಸನಾತನ ಸದ್ವಂಶಜರಾದ ಆ ಕುವರಿಯರು ರಾಜಕುಮಾರನಿಗೆ ತಕ್ಕವರೆಂದು ಕಾಣುತಿದ್ದರು. ಅವರಿನ್ನೂ ಯೆಳೆಯ ಹರೆಯದವರಾದರೂ ಅವರ ಆಭಿಜಾತ್ಯವು ಹಣೆಯಲ್ಲಿ ಮುದ್ರಿಸಲ್ಪಟ್ಟು ಅವರಕುಸುಮಕೋಮಲಾಕಾರಗಳಲ್ಲಿಯೂ, ಹಾವಭಾವಚೇಷ್ಟೆಗಳಲ್ಲಿಯೂ, ಪ್ರಕಾಶಿಸುತಿದ್ದಿತು. ಅವರು ಜಾತಿಯಿಂದಲೂ ರಾಯನಿಗೆ ಕಡಮೆಯವರಾಗಿಲ್ಲ. ಅವರತಂದೆಯು ರಾಜಾಸ್ಥಾನದಲ್ಲಿ ಮಂತ್ರಿಯು. ಶಕ್ತಿಯ ತಂದೆಯು ಅಷ್ಟು ಐಶ್ವರ್ಯವಂತನಾಗಿದ್ದಂತೆ ತೋರದು. ಆತನು ಆಯುಧ ಪರಿಶೀಲನಾಧಿಕಾರಿಗಳಲ್ಲಿ ವೊಬ್ಬಾತನು, ಆದರೆ ಆತನು ಯೋಧಪುರದ ಅರಸರ ವಂಶಜನೆಂಬದಾಗಿಯೂ, ತನ್ನ ರಕ್ತನಾಳಗಳಲ್ಲಿ ಅರಸರ ರಕ್ತವು ಪ್ರವಹಿಸುತಿರುವುದೆಂಬದಾಗಿಯೂ, ಹೇಳಿಕೊಳುತಿರುವನು. ಚಿರಕಾಲದ ಕೆಳಗೆ ವೊಂದು ವೇಳೆಯಲ್ಲಿ ಯೋಧಪುರ ವಂಶಸ್ಥರಿಗೆ ವಿಪತ್ತು ಸಂಭವಿಸಿರಲು ಅದರಲ್ಲಿನ ಅರಸರು ಕೆಲವರು ಶರಣಾರ್ಥಿಗಳಾಗಿ ದಿನಾಜಪುರವನ್ನು ಸೇರಿ ಅವರಿಗೆ

ಆಧಿಪತ್ಯವು ದೊರೆತುದರಿಂದ ಅಲ್ಲಿ ನೆಲೆಗೊಂಡರು. ತರುವಾಯ ಕೆಲವು ಕಾಲಕ್ಕೆ ಆ ರಾಜಕುಟುಂಬಗಳೆರಡಕ್ಕೂ ಕೈಗೂಡುವ ಸಮಯ ಸಂಧಿಸಿತು. ಆದುದರಿಂದ ಆಸ್ಥಾನದಲ್ಲಿ ತನ್ನ ಪದವಿಯು ಸ್ವಜಾತೀಯರೊಂದಿಗೆ ಸಮಾನವಾಗಿಲ್ಲದಿದ್ದರೂ ಶಕ್ತಿಯ ತಂದೆಯು ಅವರಾರಿಗೂ ಕಡಮೆಯೆನಿಸದೆ ತಲೆಯೆತ್ತಿ ತಿರುಗುತ ಜನ್ಮದಿಂದ ತಾನು ತನ್ನ ಯಜಮಾನನಾದ ರಾಯನಿಗೂ ಕೂಡ ಯೆಳ್ಳಷ್ಟಾದರೂ ಕಡಮೆಯಾಗಲಾರೆನೆಂದು ಹೇಳಿಕೊಳುತಿರುವನು.

ಈವೊಳಗೆ ವಕುಳಕುಸುಮಗಳನ್ನು ಶೇಖರಿಸುತಿದ್ದ ಆ ಕನ್ನೆಯರು ಇನ್ನೂ ಸರಗಳನ್ನು ಪೋಣಿಸುತಲೇ ಇದ್ದರು. ಕಾಮಿನಿಯು, ನಡುನಡುವೆ ಜಲಾಶಯದಕಡೆಗೆ ನೋಡುತಿದ್ದಳು. ನಿರುಪಮೆಯಾದರೋ ತದೇಕದೃಷ್ಟಿಯಿಂದ ತನ್ನ ಕೆಲಸವನ್ನೇ ಮಾಡುತಿದ್ದಳು. ಸ್ವಲ್ಪಹೊತ್ತಿಗೆ ತಾವರೆಗಳನಡುವೆ ಈಜಾಡುತಿದ್ದ ಕೋಮಲೆಯರೀರ್ವರೂ ತಮ್ಮತಮ್ಮ ವಿಲಾಸವಿಹಾರಗಳನ್ನು ಸಾಕುಮಾಡಿ, ಸಂಧ್ಯಾರಾಗದಲ್ಲಿ ತಮ್ಮ ಕಪ್ಪಾದ ಗುರುಳ್ಗಳು ಮೆರುಗುಗಳನ್ನು ಹಡೆಯುತಿರೆ ತಾವು ಕುಯ್ದ ಮನೋಹರ ಪುಷ್ಪಭಾರವು ಅವರ ಸಹಜ ಮಂದಗಮನಗಳ್ಗೆ ಮತ್ತಷ್ಟು ಮಾಂದ್ಯವನ್ನುಂಟಾಗಿಸೆ ಮಾನಸಸರೋವರದಿಂದ ಹೊರಹೊರಡುವ ದೇವಕನ್ನೆಯರಂತೆ ಹೊರಗೆ ಬಂದು ದಡದಲ್ಲಿದ್ದ 'ತಮ್ಮ ಸಖಿಯರಬಳಿ ಸೇರಿ ತಮ್ಮ ತಮ್ಮ ಪುಷ್ಪಭಾರಗಳನ್ನಿಳುಹಿದರು.

ಅವುಗಳನ್ನು ನೋಡಿ ನಿರುಪಮೆಯು "ಆಹಾ! ಅವೆಷ್ಟು ರಮಣೀಯವಾಗಿರುವುವು; ಇವುಗಳಲ್ಲಿ ವೊಂದನ್ನು ನಾನು ತೆಗೆದುಕೊಂಡು ರಾಜಕುಮಾರನಿಗೆ ಸಮರ್ಪಿಸುವೆನು" ಅಂದಳು. ಶಕ್ತಿಯು ಕೋಪದಿಂದ" ಹಾಗೇನು ? ನಾವು ಕಷ್ಟಪಟ್ಟು ಕುಯ್ದು ತಂದರೆ ನೀನು ರಾಜಕುಮಾರನಿಗೆ ಬೇಬೇಗ ಕೊಡಬಲ್ಲೆಯೇನೋ: ಪಾಪ! ಕಷ್ಟಪಡುವವರಾರಾದರೂ ಇದ್ದರೆ ಅದರ ಫಲಾನುಭವಕ್ಕೆ ಮಾತ್ರ ಸಾಕಾದಷ್ಟು ಧೈರ್ಯವು ನಿನಗುಂಟು. ಈಗ ಅವರೊಳೊಂದು ಹೂವಾದರೂ ನಿನಗೆ ದೊರೆಯಲಾರದು" ಎಂದು

ಗದರಿಸಿದಳು. ಅದರಮೇಲೆ ಪಾಪ! ನಿರುಪಮೆಯು ಖಿನ್ನಮಾನಸಳಾಗಿ ತಲೆಬಗ್ಗಿಸಿ ಕುಳಿತಳು.

ಕಾಮಿನಿಯ ಮನಸ್ಸು ಮತ್ತೊಂದು ಬಳಿಯಲ್ಲಿದ್ದಿತು. ಆಕೆಯು "ಸಖಿಯರಾದ ನೀವು ಬಹಳ ಹೂಗಳನ್ನು ತಂದಿರಿ. ನಾಳೆಯ ಪೂಜೆಗೆ ನಮ್ಮ ರಾಜ್ಞಿಗೆ ಹೂಗಳು ಸಾಲಲಾರವೆಂದು ತೋರುತಿದೆ, ಯೇನಾದೀತೋ?"

ಶಕ್ತಿ:-"ಹೂಗಳನ್ನಾರು ಕುಯ್ದರೆಂಬುದು ಆಕೆಗೆ ತಿಳಿಯದು"

ಕಾಮಿನಿಯು ಈ ಮಾತುಗಳನ್ನು ಕೇಳಿಸಿಕೊಳ್ಳದೆ "ಪ್ರತಿದಿನವೂ ಶತಪತ್ರಶತದಿಂದ ಶಿವಾರಾಧನೆ ಮಾಡಿದರೆ ಪತಿಯು ವಶವರ್ತಿಯಾಗುವನೆಂಬುವುದು ನಿಶ್ಚಯವೇನೇ? ಎಂಬುದು ನನಗೆ ಸೋಜಿಗವಾಗಿದೆ."

ಕುಸುಮೆ ಕಾಮಿನಿಯರು ಹದಿಮೂರು ಹದಿನಾಲಕು ವರುಷದ ಹುಡುಗಿಯರೇ ಆದರೂ ಅವರಿಬ್ಬರಿಗೂ ಮದುವೆಗಳಾಗಿವೆ. ಕುಸುಮೆಯು ತೊಂದಲಿಸುತ್ತ "ಶಿವಲಿಂಗಕ್ಕೆ ಅನುದಿನವೂ ನೂರು ಪದ್ಮಗಳಿಂದ ಪೂಜಿಸಿದುದರಿಂದ ರಾಣಿಯಲ್ಲಿ ಪ್ರಭುವಿಗೆ ಅನುರಾಗವು ಕುದುರಿತೆಂದು ಆ ತಾಯಿಯು ಹೇಳಿರುವಳು. ಕೆಲವು ದಿನಗಳ ಕೆಳಗೆ ರಾಯನಿಗೆ ಆಕೆಯನ್ನು ಕಂಡರಾಗದಿದ್ದಿತಂತೆ. ಆದರೆ, ಈ ಪದ್ಮಪೂಜೆಯನ್ನಾರಂಭಿಸಿದಂದಿನಿಂದಲು ಆಕೆಯು ತನ್ನ ಪ್ರಭುವನ್ನು ಸೆರಗಿನಲ್ಲಿ ಮುಡಿಯಿಟ್ಟು ತಿರುಗುತಿರುವಳು. ಎಲೆಗೆ ಕಾಮಿನೀ! ನಿನ್ನ ಸೋದರಿಯು ನಿಮ್ಮ ತಂದೆಯ ಮನೆಯಲ್ಲಿಯೇ ಇರುತಿರುವುದರಿಂದ ಪತಿಗೆ ಆಕೆಯಲ್ಲಿ ಅನುರಾಗವಿಲ್ಲೆಂದೇ ಗೊತ್ತಾಯಿತು. ಆಕೆಯು ಮಹಾದೇವನನ್ನು ಪೂಜಿಸಬಾರದೇ? ಪ್ರಭುವು ಆಕೆಯು ಮಾಡಿದುದೆಲ್ಲಕ್ಕೂ ಒಪ್ಪಿಕೊಳ್ಳುವನು."

ಕಾಮಿನಿ:-ಆಕೆಗೆ ಪ್ರತಿದಿನವೂ ನೂರುಪದ್ಮಗಳು ದೊರೆಯುವುದೆಂತು? ಅಷ್ಟೇ ಅಲ್ಲದೆ ರಾಣಿಯು ಪ್ರತಿದಿನವೂ ಶಿವನನ್ನು ಪೂಜಿಸುವುದಕಿನ್ನೊಂದು ಕಾರಣವೂ ಉಂಟು. ಜ್ಯೋತಿಷ್ಕರು ರಾಜಕುಮಾರನಿಗೆ ಗಂಡವಿರುವುದೆಂದು ಹೇಳಿರುವರು. ಅದನ್ನು ತಪ್ಪಿಸುವುದಕ್ಕೆ ರಾಣಿಯು ಹೀಗೆ

ಪೂಜಿಸುತಿರುವಳು. ಈ ಕಾರಣದಿಂದಲೇ ಆತನಿಗೆ ಯಾವರಿಗೆ ಮದುವೆ ಮಾಡಲಿಲ್ಲ. ಈ ವರುಷದಲ್ಲಿ ಆ ಗಂಡವು ತಪ್ಪಿ ಹೋಗುವುದು.''

ಆ ಹುಡುಗಿಯರು ಗಂಡದ ವಿಷಯವಾಗಿ ಬಹಳ ಹೊತ್ತು ಪ್ರಸ್ತಾಪಿಸಲಿಲ್ಲ! ಕುಸುಮೆಯು ಉಲ್ಲಾಸದಿಂದ ''ನಮಗೆ ಹೊಸರಾಣಿಯು ಬಂದರೆಷ್ಟು ಚೆನ್ನಾಗಿರುವುದೋ? ಆಕೆಯು ಹೇಗಿರುವಳೋ? ಎಂದು ಅಚ್ಚರಿಗೊಳುತಿರುವೆನು.''

ಕಾಮಿನಿ:-ನಸುನಗುತ '' ಆಕೆಯು ನಮ್ಮ ನಿರುಪಮೆಯು ಹಾಗಿದ್ದರೆ ಸಂತೋಷವಾಗಿರಲಾರದೇ?,,

''ಅಕ್ಕಾ! ಅಹುದು. ನಾನು ರಾಣಿಯಾಗುವೆನು.'' ಎಂದು ನಿರುಪಮೆಯು ಶೈಶವಚಾಪಲ್ಯದಿಂದ ನುಡಿದಳು, ಕಾಮಿನಿಯು ಅವಳನ್ನು ಮುತ್ತಿಟ್ಟು ನಕ್ಕು '' ಸರಿಯೇ! ಹಾಗಾದರೆ ನೀನೇ ರಾಣಿಯಾಗಬೇಕು. ರಾಜಾರಾಣಿಯ ಆಟಗಳನ್ನಾಡಿಕೊಳ್ಳುವ ಬಾ! ನೀನು ರಾಣಿಯು, ನಾನು ರಾಣಿಯ ತಾಯಿಯು, ಕುಸುಮೆಯು ಸಖಿಯು ಮತ್ತೆ''-ಅನ್ನುತಿರುವಾಗ ಅರ್ಧೋಕ್ತಿಯಲ್ಲಿ ಶಕ್ತಿಯು '' ನಾನೇನು ಆಗಬೇಕು?'' ಎಂದು ಕೇಳಿದಳು. ''ನೀನು ದಾದಿಯಾಗಿರುವೆಯೇಳು'' ಎಂದು ಕಾಮಿನಿಯು ನಸುನಗುತ ಸಮಾಧಾನವನ್ನು ಹೇಳಿದಳು.

ಅದಕ್ಕೆ ಶಕ್ತಿಯು ತನ್ನ ಸುಂದರವದನಾರವಿಂದವನ್ನು ಗಂಟಿಕ್ಕಿ ಕಣ್ಣುಗಳಲ್ಲಿ ಕೆಂಡಗಳನ್ನು ದುರಿಸುತ ಯೌವನ ಗರ್ವಭಾರದಿಂದ ತಲೆಯೆತ್ತಿ 'ಹಾಗಾಗದು' ನಾನೇ ರಾಣಿಯಾಗುವೆನು. ನಿರುಪಮೆಯೇ ದಾಸಿಯಾಗಬಹುದು.'' ಅಂದಳು. ಪಾಪ! ಸಣ್ಣವಳಾದ ನಿರುಪಮೆಯು ತುಟಿಯಲ್ಲಾಡಿಸಿ ಮೆಲ್ಲಗೆ ''ನನ್ನಿಂದಾಗದೆಂದು,,ಹೇಳಹೋಗುತಿರಲು, ದೂರದಲ್ಲಿ ವೇಣುನಾದವು ಕೇಳಿಸಿತು. ಅದರಮೇಲೆ ಆಕೆಗೆ ಮೈಯುಬ್ಬಿ ''ಅದೋ! ರಾಜಕುಮಾರನು ಹೀಗೆಯೇ ಬರುತಿರುವನೆಂದು'' ಕೇಕೆಹಾಕಿದಳು. ಆಗ ಆಸುಮಕೋಮಲೆಯರೆಲ್ಲರೂ ರಾಜಕುಮಾರನು ವೇಣುವಿನಮೇಲೆ ಹಾಡುತಿರುವ ಹಾಡನ್ನೇ ಅನುಸರಿಸಿ ಒಬ್ಬರಕೈಯೊಬ್ಬರು ಹಿಡಿದು ತಳಿರಂತೆ ಕೆಂಪಗಿ

ಳುವ ಮೃದು ಪಾದತಲಗಳಿಂದ ಅದಕ್ಕೆ ತಕ್ಕಂತೆ ನಾಟ್ಯವಾಡಲು ಆರಂಭಿಸಿದರು.

ಆ ಸಂಗೀತಸಮಾರಂಭವಾದ ತರುವಾಯ ಕುಸುಮೆಯು "ಸರಿಯೇ ಹಾಗಾದರೆ ರಾಜಕುಮಾರನೇ, ತನ್ನ ರಾಣಿಯನ್ನು ವರಿಸಿಕೊಳಲಿ" ಅಂದಳು. ಅದನ್ನು ಕೇಳಿ ಕಾಮಿನಿಯು "ಅದೀಗ ಅತ್ಯುತ್ತಮವಾದ ಕಟ್ಟಳೆಯು" ಗೀತಗಳು ಮುಗಿದನಂತರ ಹದಿನಾರುವರುಷ ವಯಸ್ಸಿನ ಶುಭಲಕ್ಷಣಾನ್ವಿತನಾದ ಒಬ್ಬ ಬಾಲಕನು ಆ ತೀರವನ್ನು ಸೇರಿ ಅಲ್ಲಿ ವಿಹರಿಸುತಿದ್ದ ಈ ನಾಲ್ವರು ಕನ್ನೆಯರನ್ನು ಕಳಿತನು. ಆತನು ಮಾತಾಡುವವರೆಗೆ ಕಾಮಿನಿಯು ಸುಮ್ಮನಿರದೆ 'ರಾಜಕುಮಾರಾ ? ನೀನು ಯಾರನ್ನು ರಾಣಿಯನ್ನಾಗಿ ಪರಿಗ್ರಹಿಸುವೆ ? ನಿರುಪಮೆಯನ್ನೆ ? ಶಕ್ತಿಯನ್ನೆ ? ನೀನೆ ಹೇಳುವವನಾಗು. ನಾವು ರಾಜಾರಾಣಿಯ ಆಟವನ್ನಾಡುವೆವು. ನಾನೇ ರಾಣಿಯ ತಾಯಿಯು ಕುಸುಮೆಯು, ಸಖಿಯು. ನಿರುಪಮೆಯು:-ಅನುತಿರುವಾಗ ಅರ್ಧೋಕ್ತಿಯಲ್ಲಿಯೆ ಕಾಮಿನಿಯನ್ನು ತಡೆದು ಕುಸುಮೆಯು ತಡೆ ತಡೆ' 'ರಾಜಕುಮಾರಾ ! ರಾಣಿ ಯಾರೆಂಬದನ್ನು ನೀನೆ ಹೇಳತಕ್ಕುದು.'

ರಾಜಕುಮಾರನು. 'ಯಾರ ರಾಣಿಯು ? ರಾಜನಾರು ?

'ನೀನೇ ರಾಜನು; ಅದನ್ನು ಕೇಳುವುದೇಕೆ ? '

ಎಂದು ಕಾಮಿನೀ ಕುಸುಮೆಯರಿಬ್ಬರೂ ಐಕಕಂಠ್ಯವಾಗಿ ನುಡಿದರು.

ರಾಜಕುಮಾರನು. ' ನಾನು ರಾಜನೇ ? ರಾಣಿಯನ್ನು ವರಿಸಬೇಕೆ? ' ಎಂದು ನಸುನಗುತ ನಿರುಪಮೆಯಿಂದ ಅತಿಶ್ರದ್ಧೆಯಿಂದ ಪೋಣಿಸಲ್ಪಟ್ಟು ಕೆಳಗಿದ್ದ ಪುಷ್ಪಮಾಲೆಯನ್ನು ತೆಗೆದು ಶಕ್ತಿಯ ಕೊರಲಲ್ಲಿ ಹಾಕಿ 'ಈಗ ಆಕೆಯನ್ನು ನೋಡಿರಿ' ಅಂದನು.

ಶಕ್ತಿಯ ಸುಂದರವದನಾರವಿಂದವು ಗರ್ವಭಾರದಿಂದೊಪ್ಪುತ ಆನಂದಮಯವಾಗಿ ಪ್ರಕಾಶಿಸಿತು. ಆಕೆಯ ಮುಖದಲ್ಲಿ ಯೌವನಾಂಕುರಗಳು ಸ್ಫುರಿಸುವ ಚಿಹ್ನೆಗಳು ತೋರಿದುವು. ಪಾಪ ! ನಿರುಪಮೆಯು ಬಾಷ್ಪಪೂರಿತಲೋಚನಳಾಗಿ ಶಕ್ತಿಯನ್ನು ನೋಡುತನಿಂತಿದ್ದಳು.

ಪೂಜಿಸುತಿರುವಳು. ಈ ಕಾರಣದಿಂದಲೇ ಆತನಿಗೆ ಯಾವರಿಗೆ ಮದುವೆ ಮಾಡಲಿಲ್ಲ. ಈ ವರುಷದಲ್ಲಿ ಆ ಗಂಡವು ತಪ್ಪಿ ಹೋಗುವುದು.''

ಆ ಹುಡುಗಿಯರು ಗಂಡದ ವಿಷಯವಾಗಿ ಬಹಳ ಹೊತ್ತು ಪ್ರಸ್ತಾಪಿಸಲಿಲ್ಲ! ಕುಸುಮೆಯು ಉಲ್ಲಾಸದಿಂದ ''ನಮಗೆ ಹೊಸರಾಣಿಯು ಬಂದರೆಷ್ಟು ಚೆನ್ನಾಗಿರುವುದೋ? ಆಕೆಯು ಹೇಗಿರುವಳೋ? ಎಂದು ಅಚ್ಚರಿಗೊಳುತಿರುವೆನು.''

ಕಾಮಿನಿ:-ನಸುನಗುತ '' ಆಕೆಯು ನಮ್ಮ ನಿರುಪಮೆಯು ಹಾಗಿದ್ದರೆ ಸಂತೋಷವಾಗಿರಲಾರದೇ? ,,

''ಅಕ್ಕಾ! ಅಹುದು. ನಾನು ರಾಣಿಯಾಗುವೆನು.'' ಎಂದು ನಿರುಪಮೆಯು ಶೈಶವಚಾಪಲ್ಯದಿಂದ ನುಡಿದಳು, ಕಾಮಿನಿಯು ಅವಳನ್ನು ಮುತ್ತಿಟ್ಟು ನಕ್ಕು '' ಸರಿಯೇ! ಹಾಗಾದರೆ ನೀನೇ ರಾಣಿಯಾಗಬೇಕು. ರಾಜಾರಾಣಿಯ ಆಟಗಳನ್ನಾಡಿಕೊಳ್ಳುವ ಬಾ! ನೀನು ರಾಣಿಯು, ನಾನು ರಾಣಿಯ ತಾಯಿಯು, ಕುಸುಮೆಯು ಸಖಿಯು ಮತ್ತೆ''-ಅನ್ನುತಿರುವಾಗ ಅರ್ಧೋಕ್ತಿಯಲ್ಲಿ ಶಕ್ತಿಯು '' ನಾನೇನು ಆಗಬೇಕು ? '' ಎಂದು ಕೇಳಿದಳು. ''ನೀನು ದಾದಿಯಾಗಿರುವೆಯೇಳು '' ಎಂದು ಕಾಮಿನಿಯು ನಸುನಗುತ ಸಮಾಧಾನವನ್ನು ಹೇಳಿದಳು.

ಅದಕ್ಕೆ ಶಕ್ತಿಯು ತನ್ನ ಸುಂದರವದನಾರವಿಂದವನ್ನು ಗಂಟಿಕ್ಕಿ ಕಣ್ಗಳಲ್ಲಿ ಕೆಂಡಗಳನ್ನು ದುರಿಸುತ ಯೌವನ ಗರ್ವಭಾರದಿಂದ ತಲೆಯೆತ್ತಿ 'ಹಾಗಾಗದು' ನಾನೇ ರಾಣಿಯಾಗುವೆನು. ನಿರುಪಮೆಯೇ ದಾಸಿಯಾಗಬಹುದು.'' ಅಂದಳು. ಪಾಪ! ಸಣ್ಣವಳಾದ ನಿರುಪಮೆಯು ತುಟಿಯಲ್ಲಾಡಿಸಿ ಮೆಲ್ಲಗೆ ''ನನ್ನಿಂದಾಗದೆಂದು,,ಹೇಳಹೋಗುತಿರಲು, ದೂರದಲ್ಲಿ ವೇಣು ನಾದವು ಕೇಳಿಸಿತು. ಅದರಮೇಲೆ ಆಕೆಗೆ ಮೈಯುಬ್ಬಿ ''ಅದೋ! ರಾಜಕುಮಾರನು ಹೀಗೆಯೇ ಬರುತಿರುವನೆಂದು'' ಕೇಕೆಹಾಕಿದಳು. ಆಗ ಆಸುಮಕೋಮಲೆಯರೆಲ್ಲರೂ ರಾಜಕುಮಾರನು ವೇಣುವಿನಮೇಲೆ ಹಾಡುತಿರುವ ಹಾಡನ್ನೇ ಅನುಸರಿಸಿ ಒಬ್ಬರಕ್ಕೆಯೊಬ್ಬರು ಹಿಡಿದು ತಳಿರಂತೆ ಕೆಂಪಗಿ

ಮುವ ಮೃದು ಪಾದತಲಗಳಿಂದ ಅದಕ್ಕೆ ತಕ್ಕಂತೆ ನಾಟ್ಯವಾಡಲು ಆರಂಭಿಸಿದರು.

ಆ ಸಂಗೀತಸಮಾರಂಭವಾದ ತರುವಾಯ ಕುಸುಮೆಯು "ಸರಿಯೇ ಹಾಗಾದರೆ ರಾಜಕುಮಾರನೇ, ತನ್ನ ರಾಣಿಯನ್ನು ವರಿಸಿಕೊಳಲಿ" ಅಂದಳು. ಅದನ್ನು ಕೇಳಿ ಕಾಮಿನಿಯು "ಅದೀಗ ಅತ್ಯುತ್ತಮವಾದ ಕಟ್ಟಳೆಯು" ಗೀತಗಳು ಮುಗಿದನಂತರ ಹದಿನಾರುವರುಷ ವಯಸ್ಸಿನ ಶುಭಲಕ್ಷಣಾನ್ವಿತನಾದ ಒಬ್ಬ ಬಾಲಕನು ಆ ತೀರವನ್ನು ಸೇರಿ ಅಲ್ಲಿ ವಿಹರಿಸುತಿದ್ದ ಈ ನಾಲ್ವರು ಕನ್ನೆಯರನ್ನು ಕಳಿತನು. ಆತನು ಮಾತಾಡುವವರೆಗೆ ಕಾಮಿನಿಯು ಸುಮ್ಮನಿರದೆ 'ರಾಜಕುಮಾರಾ ? ನೀನು ಯಾರನ್ನು ರಾಣಿಯನ್ನಾಗಿ ಪರಿಗ್ರಹಿಸುವೆ ? ನಿರುಪಮೆಯನ್ನೆ ? ಶಕ್ತಿಯನ್ನೆ ? ನೀನೆ ಹೇಳುವವನಾಗು. ನಾವು ರಾಜಾರಾಣಿಯ ಆಟವನ್ನಾಡುವೆವು. ನಾನೇ ರಾಣಿಯ ತಾಯಿಯು ಕುಸುಮೆಯು, ಸಖಿಯು. ನಿರುಪಮೆಯು:-ಅನುತಿರುವಾಗ ಅರ್ಧೋಕ್ತಿಯಲ್ಲಿಯೆ ಕಾಮಿನಿಯನ್ನು ತಡೆದು ಕುಸುಮೆಯು ತಡೆ ತಡೆ' 'ರಾಜಕುಮಾರಾ ! ರಾಣಿ ಯಾರೆಂಬದನ್ನು ನೀನೆ ಹೇಳತಕ್ಕುದು.'

ರಾಜಕುಮಾರನು. 'ಯಾರ ರಾಣಿಯು ? ರಾಜನಾರು ?

'ನೀನೇ ರಾಜನು; ಅದನ್ನು ಕೇಳುವುದೇಕೆ ? '

ಎಂದು ಕಾಮಿನೀ ಕುಸುಮೆಯರಿಬ್ಬರೂ ಏಕಕಂಠ್ಯವಾಗಿ ನುಡಿದರು.

ರಾಜಕುಮಾರನು. 'ನಾನು ರಾಜನೇ ? ರಾಣಿಯನ್ನು ವರಿಸಬೇಕೆ? ' ಎಂದು ನಸುನಗುತ ನಿರುಪಮೆಯಿಂದ ಅತಿಶ್ರದ್ಧೆಯಿಂದ ಪೋಣಿಸಲ್ಪಟ್ಟು ಕೆಳಗಿದ್ದ ಪುಷ್ಪಮಾಲೆಯನ್ನು ತೆಗೆದು ಶಕ್ತಿಯ ಕೊರಳಲ್ಲಿ ಹಾಕಿ 'ಈಗ ಆಕೆಯನ್ನು ನೋಡಿರಿ' ಅಂದನು.

ಶಕ್ತಿಯ ಸುಂದರವದನಾರವಿಂದವು ಗರ್ವಭಾರದಿಂ ಒಪ್ಪುತ ಆನಂದಮಯವಾಗಿ ಪ್ರಕಾಶಿಸಿತು. ಆಕೆಯ ಮುಖದಲ್ಲಿ ಯೌವನಾಂಕುರಗಳು ಸ್ಫುರಿಸುವ ಚಿಹ್ನೆಗಳು ತೋರಿದುವು. ಪಾಪ ! ನಿರುಪಮೆಯು ಬಾಷ್ಪಪೂರಿತಲೋಚನಳಾಗಿ ಶಕ್ತಿಯನ್ನು ನೋಡುತನಿಂತಿದ್ದಳು.

ಅನಂತರ ಆ ಬಾಲಿಕೆಯರು ಯಥಾವಿಧಿಯಾಗಿ ಮದುವೆಯನ್ನು ನಡೆಸಿದರು. ಉತ್ಸವವನ್ನು ಮಾಡಿ ಮಡವಣಿಗನ ಸುತ್ತಲು ಆ ಬಾಲಿಕೆಯರೆಲ್ಲರೂ ತಿರುಗಲು, ಅವರಲ್ಲಿ ನಿರುಪಮೆಯೂ ವಿಚಾರಗ್ರಸ್ತಳಾಗಿ ಸೇರಿಕೊಂಡಿದ್ದಳು. ದೂರದಲ್ಲಿದ್ದ ತೋಟದಲ್ಲಿಂದ ಶುಕಪಿಕಶಾರಿಕಾನಿಸ್ವನಗಳು ಮದುವೆಯ ಹಾಡುಗಳಂತೆ ಕಿವಿಗಿಂಪಾಗಿಸಿ ವಿವಾಹ ಮಹೋತ್ಸವವನ್ನು ಪೂರ್ತಿಗೊಳಿಸಿದುವು. ನಂತರ ಭೀರುವಾದ ನಿರುಪಮೆಯು ಮೆಲ್ಲಗೆ ರಾಜಕುಮಾರನ ಸನ್ನಿಧಿಯನ್ನು ಸೇರಿ ತಾನು ರಾಣಿಯಾಗಿ ವರಿಸಲ್ಪಡಲಿಲ್ಲವಲ್ಲ ! ಇನ್ನೊಂದು ಬಗೆಯಿಂದಾದರೂ ಆತನ ಕರುಣಾ ಕಟಾಕ್ಷವನ್ನು ಸಂಪಾದಿಸಲೆಳಸಿ “ ರಾಜಕುಮಾರನೆ! ಶಕ್ತಿಯು ನಿನ್ನ ರಾಣಿಯಾಗಿರಲಿ, ನಾನು ನಿನ್ನ ದಾಸಿಯಾಗಿರುವೆನು. ” ಎಂದು ಮೃದು ಮಧುರ ಸ್ವರದಿಂದ ನುಡಿದಳು.

---

## ಪ್ರಕರಣ ೩.

ಹದಿನಾಲ್ಕನೆಯ ಶತಮಾನದಲ್ಲಿ ವಂಗದೇಶವು ಡಿಲ್ಲಿಯ ಅಧಿಕಾರವನ್ನು ತಳ್ಳಿಹಾಕಿತು. ಕ್ರಿ. ಶ. ೧೩೩೮ನೆಯ ವರುಷದಲ್ಲಿ ಸುವರ್ಣಗ್ರಾಮಕ್ಕೆ ಗವರ್ನರಾದ ಬಹರನು ಖಾನನು ಮೃತನಾದ ತರುವಾಯ ಆತನ ಅನುಚರನಾದ ಫಖುರುದ್ದೀನನು ಪೂರ್ವವಂಗದೇಶದಲ್ಲಿ ಸ್ವತಂತ್ರ ಧ್ವಜವನ್ನು ಪ್ರತಿಷ್ಠಿಸಿದನು. ಲಕ್ಷಣಾವತಿಯನ್ನು ಆಳುತಿದ್ದ ಖಾದರುಖಾನನನ್ನು ಕೊಂದು ಆಲಿಯುದ್ದೀನು ಆಲಿಷಾ ಯೆಂಬಾತನು ಪಶ್ಚಿಮವಂಗದೇಶಕ್ಕೆ ರಾಜನಾಗಿ ಗೌರಿಗೆ ಸಮೀಪದಲ್ಲಿ ಪಾಂಡುವಾನಗರವನ್ನು ತನಗೆ ರಾಜಧಾನಿಯನ್ನಾಗಿ ಮಾಡಿಕೊಂಡನು. ತರುವಾಯ ಕೆಲವು ಕಾಲಕ್ಕೆ ಆಲಿಯುದ್ದೀನನ ಸಾಕುತಾಯಿಯ ಮಗನಾದ ಷಾಂಸುದ್ದೀನುಎಲಿಯಸ್‌ಷಾ ಯೆಂಬವನು ಪೂರ್ವಪಶ್ಚಿಮ ವಂಗ ದೇಶಗಳೆರಡನ್ನೂ ಜೈಸಿ ಕ್ರಿ. ಶ. ೧೩೫೨ನೆಯ ವರುಷದಲ್ಲಿ ರಾಜ್ಯವೆಲ್ಲವನ್ನೂ ಏಕಚ್ಛತ್ರಾಧಿಪತ್ಯಕ್ಕೆ ತಂದನು. ಆಗ, ಚಕ್ರವರ್ತಿಯಾಗಿದ್ದ ಫಿರೋಜಷಹನು ಈ ಕೃತ್ಯಕ್ಕೆ ಕೋಪಾಕ್ರಾಂತನಾಗಿ ತನ್ನ

ಸೈನ್ಯದೊಡನೆ ದಾಳಿಹೊರಟು ವಂಗದೇಶಕ್ಕೆ ಬಂದನು. ಪಾಂಡುವಾನಗರವು ಮುತ್ತಿಗೆ ಹಾಕಲ್ಪಟ್ಟಿತು. ವಂಗದೇಶಾಧಿಪತಿಯು ರಾಜಧಾನಿಗೆ ಇಪ್ಪತ್ತು ಮೈಲಿಯ ದೂರದಲ್ಲಿದ್ದ ಯೆಕ್ಡಾಲಾಕೋಟೆಯಲ್ಲಿ ಅವಿತುಕೊಂಡಿದ್ದನು. ಚಕ್ರವರ್ತಿಯು ಅದನ್ನೂ ಮುತ್ತಿದನು. ಆದರೂ ಹಿಡಿಯುವುದು ದುಸ್ತರವಾಗಿ ಸಂಧಿಮಾಡಿಕೊಂಡು ಹಿಂದಿರುಗಿದನು. ಕೆಲವು ವರುಷಗಳ ತರುವಾಯ ಕ್ರಿ. ಹಿಂ. ೧೩೫೬ರಲ್ಲಿ ಆತನು ವಂಗದೇಶದ ಸ್ವಾತಂತ್ರ್ಯವನ್ನು ಅಂಗೀಕರಿಸದೆ ತೀರದಂತಾಯ್ತು. ಆ ದೇಶದ ರಾಜನು ಈ ಬಗೆಯಾಗಿ ಜಯ ಹೊಂದಿ ಮಹಾ ವಿಭವದಿಂದ ಸುಲ್ತಾನನೆಂಬ ಬಿರುದನ್ನು ಕೈಗೊಂಡನು. ಈ ವೈಭವದ ಜ್ಞಾಪಕಾರ್ಥವಾಗಿ ಪ್ರತಿವರುಷವೂ ರಾಜಧಾನಿಯಲ್ಲೊಂದು ಮಹೋತ್ಸವವು ನಡೆಯುತಿರುವುದು. ಈ ಸಮಯದಲ್ಲಿ ಆಯುಧ ವಿದ್ಯಾ ಪ್ರದರ್ಶನವೇ ಪ್ರಧಾನ ವಿನೋದವು. ಆ ದಿವಸ ಪಂತವನ್ನು ಗೆದ್ದವರಿಗೆ ಸುಲ್ತಾನನು ತಾನೇ ಗೌರವ ಸತ್ಕಾರಗಳನ್ನು ಮಾಡುವನು. ಈಗ ಪಾಂಡುವಾನಗರದಲ್ಲಿ ಆ ಉತ್ಸವವು ನಡೆಯುತಿದ್ದಿತು. ಆ ವರುಷದ ಉತ್ಸವವು ಆರಂಭವಾದ ಈ ದಿವಸದಲ್ಲಿ ಆಯುಧ ಕೌಶಲ ಪರಿಕ್ಷೆಯು ನಡೆಯುತಿರುವುದು. ರಾಜನಗರವು ಅತಿರಮಣೀಯವಾಗಿ ಅಲಂಕರಿಸಲ್ಪಟ್ಟಿದ್ದಿತು. ಅಲ್ಲಿ ಸೇರುವ ನೋಟಕರೆಲ್ಲರಿಗೂ ಬಿಸಿಲಿನ ಬೇಗೆ ಯುಂಟಾಗದಂತೆ ಚಿತ್ರವಿಚಿತ್ರ ವರ್ಣಗಳುಳ್ಳ ಅತ್ಯಂತ ರಮಣೀಯವಾದ ವಿತಾನಗಳು ಸಂಸಿದ್ಧವಾಗಿದ್ದುವು. ವಂಗದೇಶದ ಮೊತ್ತ ಮೊದಲಿನ ಸುಲ್ತಾನನಾದ ಎಲಿಯರ್ಷಾಹನು ಭೂಭಾರವನ್ನಿಳುಹಿ ತೆರಳಿದನಂತರ ಈಗ ಅತನ ಮಗನಾದ ಸಿಕಂದರುಷಾಹನು ಸಿಹ್ಮಾಸನಾಸೀನನಾದನು. ಉನ್ನತೋನ್ನತವಾದ ವಿತರ್ದಿಕೆಯಮೇಲೆ ಸುಲ್ತಾನನು ಸಿಂಹಾಸನವನ್ನಲಂಕರಿಸಿದನು. ಅದು ಪುಷ್ಪಗಳಿಂದಲು ಪತ್ರಗಳಿಂದಲೂ ಚೆನ್ನಾಗಿ ಅಲಂಕರಿಸಲ್ಪಟ್ಟಿತು. ಆತನ ಸುತ್ತಲು ಸಾಮನ್ತರಾಜರು, ಮುಖ್ಯರು, ಜಹಿರ್ದಾರರು, ಶ್ರೀಮಂತರು, ಮತ್ತಿನ್ನೂ ಗೌರವಸ್ತರಾದವರೆಲ್ಲರೂ ವಂಗದೇಶದ ಯೆಲ್ಲ ಭಾಗಗಳಿಂದಲೂ ಆಹೂತರಾಗಿ ಬಂದು ಉಚಿತಾಸನಗಳನ್ನು ಅಲಂಕರಿಸಿದರು.

ಆ ಕಾಲದಲ್ಲಿ ಹಿಂದೂದೇಶವು ಪಾರಿಶ್ರಾಮಿಕವೃತ್ತಿಗಳಿಗೆ ಪ್ರಸಿದ್ಧಿಹೊಂದಿದ್ದಿತು. ಕೈಮಗ್ಗಗಳಿಂದ ನೇಯಲ್ಪಟ್ಟ ಬಗೆಬಗೆಯಾದ, ರೇಷ್ಮೆಯ ಬಟ್ಟೆಗಳೂ, ಮಜ್ಲಿನುಗಳೂ, ಮಕ್‌ಮಲ್ಲುಗಳೂ ಸರಿಗೆಯಿಂದ ಚಿತ್ರಿತವಾದ ವಸ್ತ್ರಗಳೂ, ಅಂಗಡಿಗಳಲ್ಲಿ ತುಂಬಿರುತಿದ್ದುವು. ಚಿನಿವಾರರು ಬಗೆಬಗೆಯಾದ ಬೆಳ್ಳಿ ಬಂಗಾರದ ನಗಗಳನ್ನು ಹರಡಿಕೊಂಡಿರುವರು. ಕೆಲಕೆಲವೆಡೆಗಳಲ್ಲಿ ರತ್ನಖಚಿತಗಳಾದ ಅನೇಕಾನೇಕ ಸೂರ್ಯಕಾಂತಿಯನ್ನು ಅಣಕಿಸುವಂತಹ ಥಳಥಳಾಯಮಾನವಾದ ಆಯುಧಗಳಿರುತಿದ್ದುವು. ಹೂವಾಡಿಗರ ಅಂಗಡಿಗಳು ತಮ್ಮ ಸೌರಭವನ್ನು ಅತಿದೂರದವರೆಗೂ ವ್ಯಾಪಿಸುತಿದ್ದವು. ಫಲಾಹಾರ ಸಾಮಗ್ರಿಯನ್ನು ತಂದವನು ಹಸಿವಿನಿಂದ ಬಳಲುವ ದಾರಿಗರನ್ನು ಕರೆಕರೆದು ಉಪಚರಿಸುತಿದ್ದನು. ನಮ್ಮ ದೇಶದ ಸಾಮುದ್ರಿಕಶಾಸ್ತ್ರಜ್ಞನೊಬ್ಬನು ಒಂದೆಡೆಯಲ್ಲಿ ಕುಳಿತು ಪ್ರಜೆಗಳಿಗೆ ಅವರವರ ಭಾಗ್ಯರೇಖೆಗಳನ್ನು ನೋಡಿ ಭವಿಷ್ಯತ್ಫಲವನ್ನು ಹೇಳುತಿದ್ದನು. ಅನೇಕಮಂದಿ ಜ್ಯೋತಿಷ್ಕರು ಅನೇಕ ಸ್ಥಳಗಳಲ್ಲಿ ಬಿಡದಿಯಾಗಿರಲು ಅಲ್ಲಿಗೆ ಹೋಗಿ ಯಾತ್ರಿಕರು ತಂತಮ್ಮ ಕಷ್ಟಾರ್ಜಿತಗಳಾದ ದ್ರವ್ಯಗಳನ್ನು ಕೊಟ್ಟು ಅವರ ಬಳಿಯಲ್ಲಿ ಭವಿಷ್ಯತ್ಕಾಲಗತಿಗಳನ್ನು ಕುರಿತ ವಾಗ್ದಾನಗಳನ್ನು ಪಡೆದು ಸಂತಸಗೊಳುತಿದ್ದರು. ಅಂತವರಲ್ಲಿ ಒಬ್ಬಾತನ ಅಂಗಡಿಗೆ ಆ ಪ್ರಜೆಗಳು ಕೇವಲ ಆತುರದಿಂದ ನುಗ್ಗುತಿದ್ದರು. ಒಬ್ಬರ ಹಿಂದಿನ್ನೊಬ್ಬರು ಬಿಡುವಿಲ್ಲದೆ ಬರುತಿದ್ದುದರಿಂದ ಆತನಿಗೆ ಪುಸಿರಾಡುವುದಕ್ಕೂ, ಅವಕಾಶದೊರೆಯದೆ ಬಂದವರೆಲ್ಲರಿಗೂ ಸಮಾಧಾನ ಹೇಳಲಾರದೆ, ತನಗೆ ಬಂದ ಆದಾಯವೆಲ್ಲವನ್ನೂ ನಾಲ್ಕುಮೂಲೆಗೂ ಯೆಸೆದು ಓಡಿಹೋಗಬೇಕೆಂಬಂತಹ ಅವಸ್ಥೆಯಲ್ಲಿರುವ ಸಮಯದಲ್ಲಿ ವಿಚಿತ್ರತರವಾದ ಮಾನವ ಪ್ರಾಣಿಯೊಂದು ಆ ಅಂಗಡಿಗೆ ಬಂದಿತು. ಆಕೆಯು ಸ್ಫುರದ್ರೂಪಿಯಾದ, ಯುವತೀ ರತ್ನವು. ಆಕೆಯು ಮೆಲ್ಲಗೆ ಮುಂದುಬಂದು ತನ್ನ ಹಸ್ತ ಲಕ್ಷಣವನ್ನು ನೋಡುವುದೆಂದು ಕೈ ಚಾಚಿದಳು. ಆಕೆಯನ್ನು ಆತನು ನೋಡುವಾಗ್ಗೆ ಅಪ್ರತಿಹತವಾದ ಸೌಂದರ್ಯಮಹಿಮಾತಿಶಯದಿಂದ ಶೋಭಿಸುತಿದ್ದುದರಿಂದ ನಿರಾಕರಿಸಲಾರದವನಾ

ಹಿಸನು. ಆತನು ಆಕೆಯ ವಾಮಹಸ್ತವನ್ನು ಹಿಡಿದು ನೋಡಿ ನಂತರ ಆಕೆ ಯ ಮನೋಹರವಾದ ರಾಜವದನವನ್ನಾಶ್ಚರ್ಯದಿಂದೀಕ್ಷಿಸಿದನು. ಅಲ್ಲಿದ್ದ ವರೆಲ್ಲರೂ ಆತನ ಸ್ಥಿತಿಯನ್ನು ನೋಡುತಿದ್ದರು. ಅವರು ಕೂಡ ಆ ಲಕ್ಷಣ ಗೌರವವನ್ನು ನೋಡಿ ವಿಸ್ಮಿತರಾದುದಲ್ಲದೆ ವದನ ಸೌಂದರ್ಯವನ್ನು ನೋಡಿ ಜ್ಯೋತಿಷ್ಕನಂತೆಯೇ ವ್ಯಾಮೋಹಿತರಾದರು. 'ಆಕೆಯಾರು? ಇಂತಹ ಮೋಹನಾಂಗಿಯನ್ನು ಯೆಂದಾದರೂ ನೋಡಿದೆಯಾ? ಆಕೆಯು ಕೇವಲ ಲಕ್ಷ್ಮಿಯೇ!' ಎಂದೀಪರಿಯಾಗಿ ಅವರೆಲ್ಲರೂ ಒಬ್ಬರೊಳೊಬ್ಬರು, ಗುಸಗುಸಗುಟ್ಟಲಾರಂಭಿಸಿದರು. ಅವರಲ್ಲೊಬ್ಬನು, "ಅಣ್ಣಾ! ಆಕೆ ಯ ಮುಖವನ್ನು ನೋಡಿ ಅದೃಷ್ಟವನ್ನು ಹೇಳಬಲ್ಲೆಯಾ? ಹಾಗಿದ್ದರೆ ಆಕೆಯ ಕೈಯನ್ನು ಕೂಡ ನೋಡುವವನಾಗು." ಎಂದನು.

"ನಾಣ್ಯವು ಕೈಯೊಳಗೆ ಬಿದ್ದಲ್ಲದೆ ಠಾಕೂರನಿಗೆ ಸಾಮುದ್ರಿಕವು ನುಡಿಯಲಾರದು." ಎಂದು ಮತ್ತೊಬ್ಬಾತನೆಂದನು. ಅಷ್ಟರೊಳು ಮೊದ ಲನೆಯವನು ಸುಂಕವನ್ನು ಕೊಡಲು ಹೋದನಾದರೂ ಠಾಕೂರನು ಅದ ನ್ನು ತೆಗೆದುಕೊಳ್ಳದೆ ಆಕೆಯ ಕಡೆ "ತಾಯೇ! ನೀನು ರಾಣಿಯಾಗುವುದ ಕ್ಕಿರುವೆ. ನೀನೆನಗೆ ಸುಂಕವನ್ನು ತೆರಬೇಕಾದುದಿಲ್ಲ. ಈ ವಾಗ್ದಾನ ವನ್ನು ನಾನು ಅರ್ಪಿಸಿದ ಕಾಣಿಕೆಯಾಗಿ ಅಂಗೀಕರಿಸುವಳಾಗು" ಅಂದನು.

ಆಗಲೇ ಗೌರವಲಕ್ಷಣ ಲಕ್ಷಿತನಾದವನೊಬ್ಬ ಅಶ್ವಾರೂಢನು ಗುಂಪಿನ ಬಳಿಗೆ ಬಂದನು. ಆತನ ದೃಷ್ಟಿಯು ಆ ನವ ಮೋಹನಾಂಗಿಯ ಮೇಲೆ ಪ್ರಸ ರಿಸಿತು. ಒಡನೆಯೇ ತನ್ನ ಕುದುರೆಯನ್ನು ನಿಲಿಸಿ ಆಶ್ಚರ್ಯ ಮಗ್ನಮಾನಸ ನಾಗಿ ಆಕೆಯನ್ನು ಯೆವೆಯಿಕ್ಕದೆ ನೋಡುತಿದ್ದನು. ಆಕೆಯಾರೆಂಬದಾತ ನೇನೋ ಅರಿಯನು. ಆದರೂ ಅಂತಹ ಮುಖವನ್ನು ಯೆಲ್ಲಿಯೋ, ಯಾವಾ ಗಲೋ, ನೋಡಿದಹಾಗೆ, ಆತನಿಗೆ ಹೃದಯ ಗೋಚರವಾಯ್ತು. ಅಂತ ಹಾಕೆಯೊಬ್ಬಳನ್ನು ಕಂಡಿರುವನೋ, ಕಾಣನೋ, ಅನುಮಾನವೆ; ಆದರೂ ಆಕೆಯ ಸೌಂದರ್ಯವು ಆತನನ್ನು ಹಿಂಗಟ್ಟು ಮುಂಗಟ್ಟಿನಿಂದ ಪುರುಳಿಸಿ ದಂತೆ ಮಾಡಿಬಿಟ್ಟಿತು. ಆತನ ದೃಷ್ಟಿಯು ಆಕೆಯಲ್ಲಿ ಗಾಢವಾಗಿ ನಟ್ಟು

ಬೇರೂರಿಬಿಟ್ಟಿತು. ಸ್ವಲ್ಪಹೊತ್ತಿಗೆ ಆತನು ಪ್ರಯತ್ನ ಪೂರ್ವಕವಾಗಿ ಮೆಲ್ಲನೆ ನಡೆದು ಹೋಗಲನುವಾದನು. ಆದರೆ ಆತನ ಮನಸ್ಸಿನಲ್ಲಿ ಪೂರ್ವದ ಸರಸ್ತೀರವೂ, ವಸಂತಕಾಲದ ಅಪ್ರೊಂದು ದಿನವೂ, ಸ್ಮೃತಿಗೆ ಬಂದು ಆತನಿದಿರಿಗೆ ನಿಂತುವು. ನೀರಿನ ತುದಿವರೆಗೆ ವ್ಯಾಪಿಸಿದತೋಟದಲ್ಲಿ ಸುಂದರಾಂಗಿಯರಾದ ನಾಲ್ವರು ಕನ್ನೆಯರು ವಿಹರಿಸುತಿದ್ದುದೂ ಜ್ಞಾಪಕಕ್ಕೆ ಬಂದುಬಿಟ್ಟಿತು. ಅವರಲ್ಲೋರ್ವ ಬಾಲಿಕೆಯು ಉಳಿದವರಿಗಿಂತಲೂ ರೂಪವತಿಯಾಗಿದ್ದಳು. ಆಕೆಯ ನೀಳವಾದ ಕಪ್ಪುಕೂದಲುಗಳು ಸೂರ್ಯಕಾಂತಿಯಿಂದ ತಳತಳಿಸುತಿದ್ದಿತು. ಆ ಕನ್ನೆಯು ಆಗತಾನೇ ತಾವರೆಯನ್ನು ಕೊಯ್ದು ಬಂದಿದ್ದುದರಿಂದ ಆಕೆಯ ವಸ್ತ್ರಗಳಿನ್ನೂ ಪೊದ್ದೆಯಾಗಿದ್ದಿತು. ಅಷ್ಟರೊಳೋರ್ವ ಬಾಲಿಕೆಯ ಕೈ ತನಗೆ ಸೋಕಿದಂತಾಯ್ತು, ತರುವಾಯ ಆ ಬಾಲಿಕೆಯರು ಮಾಡಿದ ಮದುವೆಯೂ, ಸ್ಮರಣೆಗೆ ಬಂದಿತು. ಈ ಪೂಹೆಗಳೆಲ್ಲವೂ ಆತನಿಗೆ ವಿಸ್ಮೃತಿಯನ್ನುಂಟುಮಾಡಿ ತನ್ನಪರಿಸರವು ತನಗೆ ಗೋಚರವಾಗದಿದ್ದಿತು. ಆದರೆ ಆತನ ಕುದುರೆಯ ಮನಸ್ಸು ಮತ್ತೊಂದು ಬಗೆಯಾಗಿದ್ದಿತು, ಅದು. ಕೊರಲೆತ್ತಿ ಅವಸರವನ್ನು ತಿಳಿಯಪಡಿಸುತ ವಿಜೃಂಭಿಸುತಿದ್ದಿತು, ಅದೇನೆಂಬಿರೊ! ರಂಗಸ್ಥಲದಿಂದ ತೂರ್ಯಧ್ವನಿಯು ಯೋಧವರ್ಯರನ್ನು ಯೆಚ್ಚರಿಸುತಿದ್ದಿತು. ಯೋಧನಿಗಾಧ್ವನಿಯು ಕಿವಿಯಲ್ಲಿ ಬಿದ್ದಿತು. ಆತನು ತನ್ನ ಯೆಣಿಕೆಗಳೆಲ್ಲವನ್ನೂ ಪರಿಹಸಿಸಿ, ತೊರೆದು ಕುದುರೆಯೊಡಗೂಡಿ ಅದೃಶ್ಯನಾದನು.

## ಪ್ರ ಕ ರ ಣ ೪.

ಆಯುಧ ಪ್ರದರ್ಶನೋತ್ಸವವು ಅರ್ಧಕಾವಾಯ್ತು. ಮಲ್ಲಯುದ್ಧ, ಖಡ್ಗ ಪರಿಶ್ರಮ, ಈಟಿಗಳಾಟ, ಮೊದಲಾದುವೆಲ್ಲವೂ ಮುಗಿದುವು. ಇನ್ನು ಬಿಲ್ಲುವಿದ್ಯೆಯೊಂದುಳಿದಿದ್ದಿತು. ಸುಲ್ತಾನ ಸಿಕಂದರುಷಾ ತಾನು ಸೊಂತವಾಗಿ ಪರೀಕ್ಷಕನಾಗಿರೆ ನಿಶ್ಚಯಿಸಿದನು. ಆತನ ತೇಜಿಯುಸನ್ನದ್ಧವಾಯ್ತು. ಅದನ್ನೇರುವುದಕ್ಕೆ ಆತನು ಗದ್ದುಗೆಯಿಂದಿಳಿಯಲು, ಸಭ್ಯರೂ ಸಾಮಂತರೂ

ಆತನ ಯೆಡ ಬಲ ಮಗ್ಗುಲುಗಳಲ್ಲಿ ಹಿಂದೆ ಮುಂದೆ ಸಹ ಉಚಿತದೂರದಲ್ಲಿ ವರಸೆಯಾಗಿ ನಿಂತರು. ಸ್ವಲ್ಪ ದೂರದಲ್ಲಿ ಗುರಿಯು ಸಂಸಿದ್ಧವಾಗಿದ್ದಿತು. ಸ್ತ್ರೀ ಸ್ವರೂಪದ ವೊಂದು ಸ್ಫಟಿಕ ಶಿಲಾ ವಿಗ್ರಹವು ತನ್ನ ತುಟಿಗಳನ್ನು ತಗ ಲುವಂತೆ ಕೈಯೊಳಗೊಂದು ಹಕ್ಕಿಯನ್ನು ಹಿಡಿದುಕೊಂಡಿದ್ದಿತು. ಆ ಹಕ್ಕಿ ಯ ಕಣ್ಣೇ ಪಟ್ಟಿಗೆ ಗುರಿಯು. ಸ್ಫಟಿಕದ ಜೊಂಪೆಗೆ ತಾಕದಂತೆ ಆಕಣ್ಣಿ ನೊಳಕ್ಕೆ ಬಾಣ ಪ್ರಯೋಗವಾಪಬೇಕು. ಇದಕ್ಕೆ ವಿಶೇಷ ಚಮತ್ಕಾರ ಮತ್ತು ಸಾಹಸವು ಬೇಕಾಗಿದ್ದಿತು. ದುಷ್ಕರವಾದ ಈ ಪರಿಶ್ರಮವು ಆದಿನದ ವಿನೋದಗಳಲ್ಲಿ ಕೊನೆಯದಾಗಿದ್ದುದರಿಂದ ನೋಟಕರೆಲ್ಲರೂ ಅತ್ಯಾ ತುರತೆಯಿಂದೆದುರು ನೋಡುತಿದ್ದರು. ಅದರಮೇಲೆ ನೇಮಿಸಲ್ಪಟ್ಟ ಅಧಿ ಕಾರಿಯು ಸಂಜ್ಞೆ ಮಾಡಿದಕೂಡಲೆ ವೇತ್ರಪಾಣಿಯು ಧ್ವನಿಯೆತ್ತಿ ಬಿಲುವಿದ್ಯೆ ಯಲ್ಲಿ ಹೆಸರುವಾಸಿಯಾಗಲಿಚ್ಚಿಸುವವರೆಲ್ಲರೂ ಮುಂದಕ್ಕೆ ಬರಬೇಕಾಗಿರು ವುದಾಗಿ ಸುಲ್ತಾನ ಸಿಕಂದರುಷಾಹರು ಆಜ್ಞಾಪಿಸುತ್ತಾರೋ ಹೊ! ಹೊ!! ಹೋ!!!" ಎಂದು ಮೂರು ಮೂರು ಬಾರಿಗೂ ಕೂಗಿಕೊಂಡನು. ಶೌ ರ್ಯದಿಂದೊಪ್ಪುವ ವೊಂದು ಕಪ್ಪು ಕುದುರೆಯು ತನ್ನ ಗರ್ವವನ್ನು ತೋರುವ ಯೆತ್ತರವಾದ ಕೊರಲನ್ನೆತ್ತಿ ಹಿಂದುಮುಂದಕ್ಕೆ ತೂಗಾಡಿಸುತ ಅತ್ಯಾತುರ ದಿಂದ ಮುಂದಕ್ಕೆ ಬಂದಿತು. ಅದರಮೇಲೆ ಲಕ್ಷಣ ಲಕ್ಷಿತನಾದ ರಾಜಕುಮಾ ರನೊಬ್ಬನು ಬಿಲ್ಲು ಬಾಣಗಳನ್ನು ಧರಿಸಿ ಕುಳಿತಿದ್ದನು.

ನೋಟಕರು ಮಾಡುವ ಕರತಲಧ್ವನಿಗಳಿಂದ ಕಿವಿಗಳು ಮುಚ್ಚಿಕೊಂಡಂ ತಾಗಿ ವೊಂದೇ ಸಮನಾಗಿ ಸದ್ದಡಗಿತು. ಯೆಲ್ಲರೂ, ವುಸಿರನ್ನಾದರೂ ಬಿಡದೆ ಯೆವೆಯಿಕ್ಕದೆ ಅತ್ಯಾತುರತೆಯಿಂದ ನೋಡುತಿದ್ದರು:— ಆ ರಾಜಕು ಮಾರನೂ ಸುಲ್ತಾನನ ಸನ್ನಿಧಿಯನ್ನು ಸೇರಿ ಮೂರು ಬಾರಿ ಬಗ್ಗಿ ಬಗ್ಗಿ ಸಲಾಂ ಮಾಡಿದನು. ನಂತರ ಜನರೆಲ್ಲರೂ ಬಹಳ ಹೊತ್ತಿನಿಂದ ಕುತೂಹಲ ದಿಂದೆದುರು ಕಾಯುತಿದ್ದ ಸಮಯವು ಸಮೀಪಿಸಿತು. ಆತನು ನಿರ್ಣೀತಸ್ಥಾ ನವನ್ನು ಸೇರಿ ಬಾಣಪ್ರಯೋಗ ಮಾಡಿದನು. ಒಡನೆಯೆ ಅದು ಮೇಲಕ್ಕೆ ಹಾರಿ ಅದೃಶ್ಯವಾಯಿತು. " ಅಗೋ! ಆತನೇ ಪಂಥವನ್ನು ಗೆದ್ದವನು.

ದಿನಾಜ ಪುರಾಧೀಶನಾದ ಗಣೇಶದೇವನು ಯಂತ್ರವನ್ನು ಭೇದಿಸಿಬಿಟ್ಟನು'' ಎಂದು ಪುನ್ಮಿಂದೊಮ್ಮೆ ಅಷ್ಟುಬೇಗ ಕರತಾಳಧ್ವನಿಗಳಾದುವು. ಬಹುಮತಿಯನ್ನು ಪಡೆಯುವುದಕ್ಕೆ ಸುಲ್ತಾನನ ಸನ್ನಿಧಿಗೆ ಹೋಗುತಿದ್ದ ರಾಜಕುಮಾರನ ಮೇಲೆ, ಹೂಮಳೆಗರೆಯಿತು. ಸುಲ್ತಾನನು ಕೆಳಗಿಳಿದು ಬೆಲೆಯುಳ್ಳ ಕೃಪಾಣವೊಂದನ್ನು ಬಹುಮಾನವಾಗಿ ಕೊಟ್ಟು ತಾನೆ ತನ್ನ ಕೈಯಿಂದ ಆತನ ಸೊಂಟಕ್ಕೆ ಸುತ್ತಿ ''ಮಹಾರಾಜಾ ಬಹದ್ದೂರ್'' ಬ ಬಿರುದನ್ನು ಸಹ ಕೊಟ್ಟನು. ದಿನಾಜ ಪುರಾಧಿಪರು ಅವರ ಪ್ರಜೆಗಳಿಗೆ ಯಾವಾಗ್ಲೂ ಮಹಾರಾಜರೆ ಆದರೂ ಈಗಿನವರೆಗೆ ಆಬಿರುದು ವಂಗದೇಶದ ಆಳ್ವಿಕೆಯವರಿಂದ ಅಂಗೀಕರಿಸಲ್ಪಟ್ಟಿರಲಿಲ್ಲ.

ಮರಳಿ ಬಾಜಾಗಳ ಬಾರಿಸುವಿಕೆಯು ಉಪಕ್ರಮವಾಯ್ತು. ಹೂಸರಗಳಾ ಶೂರ ಶಿಖಾಮಣಿಯಮೇಲೆ ಸುರಿಯುತಿದ್ದುವು. ಸ್ವಲ್ಪ ದೂರದಲ್ಲಿ ಓರ್ವಸ್ತ್ರೀಯು ನಿಂತು ನಿರುಪಮಾನವಾದ ಆತನ ಕಲಿತನವನ್ನು ನೋಡುತಿದ್ದಳು. ಆಕೆಯ ಕೊರಲಲ್ಲಿ ಬಾಡಿದ ಪುಷ್ಪಮಾಲಿಕೆಯೊಂದಿರುವುದು. ಆಸರೆಯಾಗಿರಲೊಂದು ಸಣ್ಣ ಕಲ್ಲಿಗೆ ಅದನ್ನು ಸುತ್ತಿ ಅತ್ಯುತ್ಸಾಹಪರಿಪೂರಿತಳಾಗಿ ರಾಜಕುಮಾರನ ಮೇಲೆಸೆದಳು. ಆದರೆ ಪಾಪ ! ಅದು ಗುರಿ ತಪ್ಪಿ ರಾಜಕುಮಾರನಿಗೆ ತಾಕದೆ ಸುಲ್ತಾನನಿಗೆ ತಾಕಿ ಕೆಳಗೆ ಬಿದ್ದಿತು. ಈ ಕೆಲಸವು ಸುಲ್ತಾನನು ಶೂರನಿಗೆ ಕೃಪಾಣವನ್ನು ಸುತ್ತುತಿರುವಾಗ ನಡೆಯಿತು. ಇದರಿಂದ ಆತನ ಕೆಲಸಕ್ಕೆ ಅಡ್ಡಿಯುಂಟಾಗಲು, ಆತನು ತಲೆಯೆತ್ತಿ ಆಸೂಯೆ ಯೊಡಗೂಡಿದ ವಿಸ್ಮಯವನ್ನು ತೋರುತ ಮೇಲಕ್ಕೆ ನೋಡಿದನು. ಸಭ್ಯರು ಹೂಗರೆಯುವುದನ್ನು ನಿಲಿಸಿ, ಭಯಚಕಿತರಾಗಿ ಪ್ರಭುವನ್ನು ನೋಡುತಿದ್ದರು. ಆದರೆ, ಸುಲ್ತಾನನ ಮಗನಾದ ನವಾಬು ಗಿಯಾಜುದ್ದೀನನು ಬಾಡಿದ ಆ ಕುಸುಮಮಾಲೆಯನ್ನು ತೆಗೆದು ಮಂದಹಾಸದಿಂದ:-

''ಗಣೇಶಾ ! ಈ ಬಾಡಿದ ಹೂಸರದಿಂದ ನಿನ್ನನ್ನು ಬಹೂಕರಿಸಿದವರಾರು ? ಯೆಂದು ಗೇಲಿಮಾಡಿದನು. ಉಂಟಾದ ಮನೋವೈಕಲ್ಯತನ್ನು

ತೊಲಗಿಸುವುದಕ್ಕಿದೆಲ್ಲವೂ ಸಹಾಯಕಾರಿಯಾಗಿದ್ದಿತು. ಸುಲ್ತಾನನೂ ಕಿರುನಗೆಯಿಂದ ತನ್ನ ಕೆಲಸವನ್ನು ಪೂರ್ತಿಗೊಳಿಸಿದನು. ಮರಳಿ ಜನರ ಕರತಾಳಧ್ವನಿಗಳೂ ಹೂಸೋನೆಮಳೆಯೂ ಮೊಂಡಾದುವು. ಈಗ ಇನ್ನೊಂದು ವಿರುದ್ಧ ಕಾರ್ಯವೂ ಕೂಡ ನಡೆಯಿತು. ನಿರುಪಮಾನ ಸೌಂದರ್ಯವತಿಯಾದ ಯೌವನ ಸ್ತ್ರೀಯೊಬ್ಬಳು ಸನ್ಯಾಸಿನಿಯ ವೇಷದಿಂದ ಆ ಗುಂಪಿನಿಂದ ಮುಂದಕ್ಕೆ ಬಂದು ಸುಲ್ತಾನನ ಮಗ ನವಾಬನಿಗೆ ಸಲಾಮು ಮಾಡಿ, "ನವಾಬ್‌ಸಾ ! ದಯವಿಟ್ಟು ನನ್ನ ಹೂಸರವನ್ನು ನನಗೆ ಕೊಡುವವರಾಗಿ" ಎಂದು ಕೇಳಿದಳು. ಸುಲ್ತಾನನೂ, ಕುಮಾರ ನವಾಬನೂ, ಸಭ್ಯರೂ, ವಿಸ್ಮಯಮಗ್ನಮಾನಸರಾಗಿ ಆಕೆಯನ್ನು ನೋಡುತಿರುವಹಾಗೆಯೆ ರಾಜಪುತ್ರನು ಆ ಕುಸುಮಮಾಲೆಯನ್ನು ಕೊಟ್ಟು ಬಿಟ್ಟನು. ಆ ಸುಂದರಾಂಗಿಯು ಹೂಸರವನ್ನು ತೆಗೆದುಕೊಂಡು ಸ್ವಲ್ಪಹೊತ್ತು ಗಣೇಶದೇವನನ್ನು ನೋಡಿ, ಸುಲ್ತಾನನಿಗೂ, ನವಾಬನಿಗೂ, ಸಲಾಮು ಮಾಡಿ ತಾನು ಬಂದ ದಾರಿಯಲ್ಲಿಯೆ ನಿರ್ಭಯವಾಗಿ ನಿರ್ಗಮಿಸಿದಳು.

---

## ಪ್ರಕರಣ ೫.

ಆ ದಿನ ಸಾಯಂಕಾಲವಾಗಿರುವುದು. ಪಡುವಲಿಗಿಳಿಯುತಿರುವ ಸೂರ್ಯನು ತನ್ನ ಸ್ವರ್ಣ ಕಿರಣಗಳಿಂದ ತಣ್ಣಗಿರುವ ಗಂಗಾತರಂಗಗಳಿಗೆ ಮೆರುಗಿಟ್ಟು ಆತೀರದಲುಳ್ಳ ಪಾದಪಾಗ್ರಗಳಲ್ಲಿ ನಾಟ್ಯವಾಡುತ ಮೆಲ್ಲ ಮೆಲ್ಲಗೆ ಕೆಳಗಿಳಿದು ಕೊಟ್ಟಕೊನೆಗೆ ಪೂರ್ತಿಯಾಗಿ ಅದೃಶ್ಯನಾದನು. ರಾಜಾ ಗಣೇಶದೇವನು ನದಿಯ ದಡದಲ್ಲಿಯೇ ಮೆಲ್ಲಗೆ ತೇಜಿಯನ್ನು ನಡೆಸುತ ಮನೆಗೆ ಹೋಗುತಿದ್ದನು. ಸಾಯಂಸಮಯ ಸೌಂದರ್ಯವು ಆತನಕಣ್ಗೆ ಕಾಣಿಸದಾಯ್ತು. ಈದಿನ ಆತನಿಗಾದ ಬಹುಮಾನವು ಆತನ ಮನಸಿನಲ್ಲಿಲ್ಲ. ಇಲ್ಲ !!! ಮಾತು ಮಾತಿಗೂ ಸನ್ಯಾಸಿನಿಯ ವೇಷವನ್ನು ಧರಿಸಿದ ತರುಣೀಮಣಿಯು ಆತನ ಮನೋನೇತ್ರಗಳಿಗೆದುರಾಗಿ ಗೋಚರವಾಗುತಿದ್ದಳು. ಆ ನಿರುಪ

ಮಾನ ಸೌಂದರಾಂಗಿಯು ಯಾರೆಂಬದನ್ನೂಹಿಸಲಾರದವನಾದನು. ಚೇಷ್ಟಾ ಗೌರವವೂ, ಸ್ವನಿಗ್ರಹವೂ, ಅಭಿಜಾತ್ಯ ಸೂಚಕಗಳಾಗಿರುತವೆ. ಆಕೆಯ ವುಡುಪುಗಳು ಮಾತ್ರ ಬಡತನವನ್ನು ಸೂಚಿಸುತಿವೆ. ಯೆಂದೋ, ಯಾವಾಗಲೋ, ತಿಳಿದಿದ್ದವಳಂತೆ ಆಕೆಯು ತನ್ನ ಕಡೆಗೆ ಅಷ್ಟು ಅರ್ಥ ಪುಷ್ಟಿಯಾದ ದೃಷ್ಟಿಯನ್ನೇಕೆ ಹರಡಿಪಳೋ ತಿಳಿಯದಾಯಿತು. ತರುವಾಯ ಬಾಡಿದ ಹೂಸರದ ಸಂಗತಿಯೊಂದು ಬಗೆಯ ಅಚ್ಚರಿಯಾಗಿದ್ದಿತು. ಆಕೆಯು ಆ ಜನ ಸಮೂಹದೊಳಕ್ಕೆ ಅದನ್ನು ಯೆಸೆದಳೇಕೊ? ಮತ್ತು ಸುಲ್ತಾನನ ಕುಮಾರನಿಂದ ಸಂದೇಹವಿಲ್ಲದೆ ಅದನ್ನು ಹಿಂದಕ್ಕೆ ತೆಗೆದುಕೊಳ್ಳಬೇಕೇಕೋ; ಊಹಿಸುವುದು ಅಸದಳವಾಗಿ ಬಿಟ್ಟಿತು. ಈ ಸಂಗತಿಗಳೆಲ್ಲವನ್ನೂ ಯೋಚಿಸಿದಷ್ಟೂ ಆತನ ಮನಸ್ಸಿಗೆ ಅಚ್ಚರಿಯಾಗುತಿದ್ದಿತು. ರಾಜಕುಮಾರಿಯಂತಹ ಗಮನವು, ಲಕ್ಷಣಗಳು, ಸನ್ಯಾಸಿನಿಯುವೇಷವು, ಆಕಸ್ಮಿಕಸಮಾವೇಶವೂ, ವಿರುದ್ಧವಾದುದು. ಆಗಲಿ ! ಆಕೆಯು ಸನ್ಯಾಸಿನಿಯೇ ಅಹುದೆ? ಆಕೆಯ ಕುರಳು ಜಡೆಗಟ್ಟಿರಲಿಲ್ಲ. ಆಕೆಯು ಧರಿಸಿದ್ದ ಮೇಲ್ಮುಸಿಕಿನೊಳಗಿಂದ ಅನಾದರದಿಂದ ಗಂಟಿಕ್ಕಲ್ಪಟ್ಟು ಜೋಲಾಡುವ ತುಂಬಾದ ಕುರುಳ್ಕೊನೆಗಂಟು ಅಂದವಾದ ಕೊರಲಮೇಲೆ ಕಾಣುತಿದ್ದಿತು. ರುದ್ರಾಕ್ಷಮಾಲಿಕೆಯೂ, ಅನಾಚ್ಛಾದಿತವಾದ ಶಿರವೂ, ಶಿರಸ್ಸಿನಲ್ಲಿಯೂ, ಶರೀರದಲ್ಲಿಯೂ, ವಿಭೂತಿಧಾರಣೆಯೂ, ಯಿಂತಹ ವೈರಾಗಿಯ ಲಕ್ಷಣಗಳಾವುವೂ, ಆಕೆಯಲ್ಲಿ ಕಾಣ್ಬರುವುವಿಲ್ಲ. ಆಕೆಯ ನೊಸಲಲ್ಲಿ ಕಪ್ಪಾದ ಮುಂಗುರುಳ್ಗಳು ಕುಟಿಲವಾಗಿ ತರಂಗಗಳಂತೆ ತಳತಳಿಸುತಿದ್ದಿತು. ಅದರಲ್ಲಿ ಕೆಲಕೆಲವು ಚೆದರಿ ನೊಸಲುಮುಚ್ಚಿ ಆಕೆಯ ಮನೋಜ್ಞವಾದ ವದನಾರವಿಂದದ ಅಂದವನ್ನು ಯಿಮ್ಮಡಿಯಾಗಿಸುತಿದ್ದಿತು. ಆಕೆಯ ಮೇಲ್ಮುಸುಕು ಮುಖವನ್ನು ಮುಚ್ಚದೆ ತಲೆಯನ್ನು ಸ್ವಲ್ಪಮಟ್ಟಿಗೆ ಆವರಿಸಿಕೊಂಡಿದ್ದಿತು.

ಆಕೆಯು ತೀರ್ಥಯಾತ್ರೆಗಳನ್ನು ಸೇವಿಸುತಿರುವ ವಿತಂತುವಾಗಿರಬಹುದೆ ? ಹಾಗಿರಲಾರದು. ಆಕೆಯ ಹಸ್ತಗಳಾಗಲೂ ಸ್ವರ್ಣಕಂಕಣಗಳಲಂಕರಿಸಿದ್ದುವು. ಆದರೇನು ? ವಿತಂತುಗಳಲ್ಲಿ ಕೆಲವರು ಬಾಲ್ಯದಲ್ಲಿಯೇ

ಅಂತಹ ಹೀನಸ್ಥಿತಿಗೆ ಸಿಕ್ಕಿದವರಿರುವುದುಂಟು. ಅಂತಹರಲ್ಲಿ ಆಕೆಯೊಬ್ಬಳಾಗಿರಬಹುದು. ಬಹಳಮಾಡಿ ತಾಯಿತಂದೆಗಳು ಆಕೆಯನ್ನು ಅಲಂಕಾರವಿಹೀನೆಯನ್ನಾಗಿ ಮಾಡಲು ಸಾಹಸಪಡದೆ ಇದ್ದಾರು. ಆಕೆಯ ಪತಿಯು ಜೀವಿಸಿದ್ದುದೆ ಆದರೆ ಈಕೆಯನ್ನು ಹೀಗೆ ದೇಶದೇಶವೂ ಅಲೆದಾಡಿಸುತಿದ್ದನೇ ? ಆಕೆಯಿನ್ನೂ ಕನ್ನೆಯಾಗಿರಬಹುದೇನೋ! ಎಂಬ ವೂಹೆಮಾತ್ರ ಆತನಿಗೋಡಲಿಲ್ಲ. ಹಿಂದೂಬಾಲಿಕೆಗೆ ಅಷ್ಟುವಯಸ್ಸಾಗುವವರೆಗೆ ಮದುವೆಯಾಗದಿರುವುದೆಂತು ? ಹೀಗೆ ತನ್ನೊಳು ತಾನು ತರ್ಕಿಸಿ ಆಕೆಯು ಯಾತ್ರಾರ್ಥಿನಿಯಾದ ವಿತಂತುವೇ ಆಗಿರಬಹುದೆಂದು ನಿಶ್ಚೈಸಿದನು. ಆಕೆಯು ಕುಲೀನೆ ಎಂಬುದೇನೋ ನಿಶ್ಚಯವೆ. ಅಡಿಗಡಿಗೆ ಆಕೆಯ ಗೌರವಶೋಭೆಯೂ, ಪವಿತ್ರತೆಯೂ, ವ್ಯಕ್ತವಾಗುತಿದ್ದಿತು. ಆದರೆ ಪರಪುರುಷನ ಮೇಲೆ ಸ್ನೇಹ ಸೂಚಕ ದೃಷ್ಟಿಗಳನ್ನೇಕೆ ಹರಡಬೇಕು ? ತಾನಾಕೆಯನ್ನು ಮೊದಲೆಂದೂ ನೋಡಿರಲಿಲ್ಲ. ಹಾಗೆನೋಡುವುದಕ್ಕೆ ಅರ್ಥವೇನು ? ಆ ಸುಂದರಾಂಗಿಯ ಕಥೆಯೆಲ್ಲವೂ ಅದ್ಭುತವಾಗಿರುತವೆ. ಹೀಗೆ ಯೋಚಿಸುತ ಕಡಿವಾಣವನ್ನು ಸಡಲಿಸಿ ತೇಜಿಯನ್ನು ನಿದಾನವಾಗಿ ನಡೆಸುತ ಹೋಗುತಿರಲು ಆಕಸ್ಮಿಕವಾಗಿ ಆ ತರುಣೀಶಿರೋಮಣಿಯು ಮಂದಹಾಸದಿಂದ ಸಮಯಕ್ಕೆ ಸರಿಯಾಗಿ ಆತನಿದಿರಿಗೆ ನಿಂತಳು.

ಆಕೆಯನ್ನು ನೋಡಿದ ಕೂಡಲೆ ಆತನಿಗಾರೋ ಒಬ್ಬ ದೇವಕನ್ನಿಕೆಯು ಪ್ರತ್ಯಕ್ಷವಾದಂತಾಯಿತು. ಅದೆಲ್ಲವೂ ಕನಸೇನೆ ? ತಾನಿನ್ನೂ ಕನಸಿನಲ್ಲಿಯೇ ಇರುವೆನೇ ? ಎಂಬ ಸಂಶಯವು ಆತನಿಗೆ ಹಚ್ಚಿತು. ಆದರೆ ಆತನ ಆಲೋಚನೆಗೆ ಬಹಳ ಹೊತ್ತು ಅವಕಾಶವಿಲ್ಲ. ಆ ವಿಗ್ರಹವು ಮಂದಹಾಸವಿಕಾಸ ಸುಂದರ ವದನಾರವಿಂದದಿಂದ ಮುಂದಕ್ಕೆ ಬಂದು ಕಂಬು ಕಂಠದಿಂದ " ರಾಜಕುಮಾರನೇ ! ನೀನು ನನ್ನನ್ನರಿಯೆಯಾ ? ಚಿಕ್ಕ ವಯಸ್ಸಿನ ನಿನ್ನಾಟದ ಗೆಳತಿಯನ್ನು ಮರೆತೆಯಾ? ಸರಸ್ತೀರದಲ್ಲಿದ್ದ ಕೊಳವನ್ನು ಮರೆತು ಹೋದೆಯಾ ? " ಎಂದು ಮಾತಾಡಿಸಿದಳು.

ಈ ಮಾತುಗಳನ್ನು ಕೇಳುತಲೆ ಆತನ ಮನಸಿನಲ್ಲಿ ಸ್ಮೃತಿತರಂಗ

ವೊಂದು ಹೊರಹೊರಟು ಸ್ವಪ್ನಾವಸಾನದಲ್ಲಿರುವವನಂತೆ ದೀನಸ್ವರದಿಂದ "ನನ್ನ ಬಾಲ್ಯಸಖಿ ಶಕ್ತಿಯೇ ?" ಅಂದನು.

"ನಿನಗೆ ಜ್ಞಾಪಕಪಡಿಸಬೇಕಾಗಿಬಂದಿತು. ನಾನು ಮಾತ್ರ ನಿನ್ನನ್ನು ನೋಡಿದ ಮಾತ್ರದಲ್ಲಿಯೆ ತಿಳಿದುಕೊಂಡೆನು."

ಒಡನೆಯೆ ಆತನ ಹೃದಯದಲ್ಲಿ ಒಂದು ವಿಕಾರವು ಹೊರಹೊರಟಿತಾದರೂ ಕೂಡಲೇ ಅದು ಅಲ್ಲಿಯೆ ಅಡಗಿಬಿಟ್ಟಿತು. ಆ ಪುರುಷನು ಗಣೇಶದೇವನು. ಆ ತರುಣಿಯು ಶಕ್ತಿಯು. ಆದರೆ ಅವರಿಬ್ಬರ ನಡುವೆ ಈಗ ದೊಡ್ಡ ದೊಂದು ತೆರೆಯುಂಟು. ಆಕೆಯು ಆತನಿಗೆ ಬಾಲ್ಯಸಖಿಯು, ಆತನು ಆಕೆಯನ್ನು ತನ್ನ ಯೌವನಾಂಕುರದಲ್ಲಿ ಪ್ರೇಮಿಸಿರುವುದೂ ನಿಶ್ಚಯವೆ ! ಆದರೂ ಈಗ ಆಕೆಯು ಇನ್ನೊಬ್ಬಾತನಿಗೆ ಸತಿಯಾಗಿರುವಳು. ಆದುದರಿಂದ ಚಿಕ್ಕಂದಿನ ಪ್ರಿಯಮೈತ್ರಿಣಿಯನ್ನು ನೋಡಿದುದರಿಂದುಂಟಾದ ಸಹಜಸಂತೋಷವೂ, ಪರಪುರುಷನ ಸತಿಗೆ ದೂರದಲ್ಲಿದ್ದು ತೋರ್ಪಡಿಸಬೇಕಾದ ಗೌರವವೂ, ಆತನ ಮನಸ್ಸನ್ನು ಸೂರೆಗೊಳ್ಳುತಿದ್ದಿತು. ಇಂತಹ ಸ್ಥಿತಿಯಲ್ಲಿ ಆಕೆಯೊಂದಿಗೆ ಹೇಗೆ ಮಾತಾಡಬೇಕೆಂಬುದು ಆತನಿಗೆ ತೋರದಿದ್ದಿತು.

ಶಕ್ತಿಯು ಮರಳಿ ಮೊದಲಿನಂತೆಯೆ ಸಲಿಗೆಯಾಗಿ ಮಾತಾಡುತಿದ್ದಳು.

"ಗೆಳೆಯನೇ ! ನೀನು ತೇಜಯಿಂದಿಳಿಯುವೆಯಾ ? ಈದಿನ ನಿನಗುಂಟಾದ ವಿಜಯಕ್ಕೋಸುಗ ನಿನ್ನನ್ನೆಲ್ಲರೂ ಸನ್ಮಾನಿಸಿದರು. ನನಗೂ ಕೂಡ ಅಂತಹ ಸ್ವಾತಂತ್ರ್ಯವು ಬೇಡವೇ ? ನಾನು ಸಮರ್ಪಿಸಿದ ಹೂಸರವನ್ನು ಬಾಡಿರುವುದೆಂದು ನಿರಾಕರಿಸುವೆಯಾ ? " ಎಂದು ಪ್ರಶ್ನಿಸಿದಳು.

ರಾಜಪುತ್ರನು ಈಗ್ಗೆ ಸ್ವಾಧೀನಮನಸ್ಕನಾಗಿ ನಸುನಗುತ ಹೀಗೆ ಸಮಾಧಾನ ಹೇಳಿದನು.

"ಹಾಗಾದರೆ ತಪ್ತಕುಸುಮದಾಮದಿಂದ ನನ್ನನ್ನು ಸನ್ಮಾನಿಸಲಪೇಕ್ಷಿಸಿದವಳು ನೀನೆಯೋ ? "

"ನಿನ್ನನ್ನು ಗೌರವಿಸಬೇಕೆಂದೇ ಅದನ್ನೆಸೆದೆನು, ಆದರೆ ಅದು ಗುರಿತಪ್ಪಿಹೋಯಿತು. ಈಗ ಅದು ನಲುಗಿ ಶಿಥಿಲವಾಗಿ ಬಿಟ್ಟಿತು. "

ರಾಯನು ಕುದುರೆಯಿಂದಿಳಿದು ನಸುನಗುತ-

"ಶಕ್ತೀ ! ನೀನು ಬಾಡಿ ನವೆದಹೂಸರವನ್ನೇಕೆಸೆದೆ ? ಅದು ಗೌರವಾರ್ಥವೆ? ಪರಿಹಾಸಾರ್ಥವೆ ? "ಎಂದು ಕೇಳಿದನು.

ಈ ಪ್ರಶ್ನೆಯನ್ನು ಕೇಳಿಸಿಕೊಳ್ಳದಂತೆ ಶಕ್ತಿಯು:-

" ಅಗೋ ಅಲ್ಲಿ ಪ್ರಶಾಂತವಾದ ಸ್ಥಳವೊಂದುಂಟು. ಅಲ್ಲಿ ಕುಳಿತು ಮಾತಾಡಿಕೊಳ್ಳೋಣ. ಬಾ! ನಿನ್ನ ತೇಜಿಯನ್ನು ಅಲ್ಲಿ ಕಟ್ಟಿನಿಲಿಸ ಬಹುದು " ಎಂದು ಆಕೆಯು ದಾರಿತೋರಲು ನೆಪಮಾತ್ರ ಕುದುರೆಯ ಕಡಿವಾಣವನ್ನು ಕೈಯೊಳು ಹಿಡಿದು ಆಕೆಯನ್ನು ಹಿಂಬಾಲಿಸಿದನು.

---

## ಪ್ರಕರಣ ೬.

ಅವರು ದಟ್ಟವಾಗಿ ಬೆಳೆದಿರುವ ಹುಣಿಸೆಯ ತೋಪೊಂದರಲ್ಲಿ ಪ್ರವೇಶಿಸಿದರು. ಅದರಲ್ಲೊಂದು ಮಗವನ್ನು ಸೌದೆಯವರು ಕುಯ್ದಿದ್ದರು, ಅದು ಕೆಲವು ಬಾಗ ನೀರೊಳಗೂ ಕೆಲವು ಭಾಗ ನೆಳಲಲ್ಲೂ ಇದ್ದಿತು. ಆ ಮೋಹನಾಂಗಿಯು ಅದರಮೇಲೆ ಕುಳಿತುಕೊಂಡಳು. ರಾಜನು ತೇಜಿಯನ್ನು ಕಟ್ಟಿಹಾಕಿ ಆಕೆಯ ಸವಿಾಪದಲ್ಲಿ ಒಂದು ಮರದ ಕೊಂಬೆಯಮೇಲೆ ಕೈಯೂರಿನಿಂತನು. ಸೂರ್ಯನು ಅಸ್ತಮಿಸಿದನಾದರೂ ಇನ್ನೂ ಕತ್ತಲಾಗಲಿಲ್ಲ. ಪಶ್ಚಿಮದಲ್ಲಿ ಅರುಣಮೇಘಗಳಿನ್ನೂ ನಿಂತಿವೆ. ಸಣ್ಣಸಣ್ಣ ಅಲೆಗಳಲ್ಲಿ ಸ್ವರ್ಣಚ್ಛಾಯೆಯು ಪ್ರತಿಬಿಂಬಿಸುತ ಭೂಮಿಗೆ ಅರುಣಕಾಂತಿಯನ್ನುಂಟುಮಾಡುತ್ತಿದ್ದಿತು. ಮತ್ತು ಹುಣಿಸೆಮರದ ಬುಡದಲ್ಲಿ ಕುಳಿತಿರುವ ಕನ್ಯಕಾಮಣಿಯನ್ನು ತಮ್ಮ ಅರುಣಕಾಂತಿಯಿಂದ ಸ್ಪರ್ಶಿಸಿ ಆಕೆಯ ಶೃಂಗಾರವನ್ನು ಶತಗುಣಪ್ರಕಾಶಮಾನವಾಗಿಸಿತು.

ಸಂಧ್ಯಾರಾಗವು ಮೇಲೆ ಪ್ರಸರಿಸಲು ಆಕೆಯು ಅತ್ಯಂತಾಮೋದಕರವಾದ ಶೃಂಗಾರದಿಂದ ವಿರಾಜಿಸುತಿದ್ದಳು. ಆಕೆಯ ಮುಖಕಾಂತಿಯು ವಂಗದೇಶದ ಶೃಂಗಾರವತಿಯರೆಲ್ಲರಂತೆ ಚಂಪಕಕಾಂತಿಯನ್ನು ವಹಿಸದೆ ಪಾರಸೀಕ

ಯುವತಿಯು ಹಾಗೆ ನವೀನವಾಗಿ ವಿಕಸಿತವಾದ ಗುಲಾಬಿಯು ಹುವ್ವಿನಂತೆ ಪ್ರಕಾಶಿಸುತ್ತಿದ್ದಿತು. ಆಕೆಯ ಆಕಾರವು ಗಾಂಭೀರ್ಯೋಪೇತವಾದ ರಾಣಿಯಂತಿದ್ದಿತು. ಆಕೆಯ ಫಾಲಭಾಗವು ವಿಶಾಲವಾಗಿರುತ ನೋಟಕರಿಗೆ ಬುದ್ಧಿಶಾಲಿನಿಯೆಂಬುದನ್ನು ತೋರ್ಪಡಿಸುತ್ತಿದ್ದಿತು. ನಾಸಿಕವು ಯೆಳ್ಳಿನ ಹೂವನ್ನಣಕಿಸುತ್ತಿದ್ದಿತು, ತುಟಿಗಳು ಅರುಣಚ್ಛಾಯೆಯಿಂದ ಶೋಭಿಸುತ್ತಿದ್ದಿತು. ಚುಬುಕವು ಸಣ್ಣಗೆ ಸೊಟ್ಟೆಬಿದ್ದಿದ್ದಿತು. ಅದ್ಭುತಗಳಾದ ಆಕೆಯ ಕಣ್ಣುಗಳು ದೀರ್ಘಗಳಾದ ಕಪ್ಪಾದ ರೆಪ್ಪೆಗಳಿಂದೊಪ್ಪುತ್ತಿದ್ದಿತು. ಬಿಲ್ಲಿನಂತೆ ಬಗ್ಗಿರುವ ಕಣ್ಣಾಪ್ಪಪಗಳು ಆಕೆಯ ಕಣ್ಣುಗಳಿಗೆ ಮತ್ತಷ್ಟು ಶೋಭೆಯನ್ನುಂಟಾಗಿಸುತ್ತಿದ್ದಿತು. ಹೀಗೆ ಈ ರಾಜಪುತ್ರ ಪುತ್ರಿಕೆಯು ಅಪ್ರತಿಮಾನಳಾಗಿ ಪ್ರಕಾಶಿಸುತ್ತಿದ್ದಳು. ಆಕೆಯ ಮುಖದಲ್ಲಿ ಉತ್ಕಂಠತೆಯೊಡಗೂಡಿ ದವಿಕಾಸವೂ, ತುಟಿಗಳಮೇಲೆ ಮೋದವನ್ನು ತಿಳಿಸುವ ಮಂದಹಾಸವೂ, ಅಲಂಕರಿಸಿದ್ದಿತು. ಮೃದುಲಾಲಕವಾಕೆಯ ನೊಸಲನ್ನಲಂಕರಿಸುತ್ತಿದ್ದಿತು. ರಾಜನು ನೋಡಿ ನೋಡಿ ವನದಲ್ಲಿ ಒಂಟಿಯಾಗಿದ್ದ ಶಕುಂತಲೆಯನ್ನು ಸ್ಮರಿಸಿಕೊಂಡು ದುಷ್ಯಂತನು ಹೇಳಿದ ವಚನವನ್ನು ತಟಕ್ಕನೆ ಹೀಗೆ ಸ್ಮರಿಸಿದನು.

ಶ್ಲೋ ॥ ಸರಸಿಜ ಮನುವಿದ್ಧಂ ಶೈವಲೇನಾಪಿ ರಮ್ಯಂ ಮಲಿನಮಪಿ
ಹಿಮಾಂಶೋರ್ಲಕ್ಷ್ಮ ಲಕ್ಷ್ಮೀಂತನೋತಿ ॥ ಇಯಮಧಿಕ ಮ
ನೋಜ್ಞಾ ವಲ್ಕಲೇನಾಪಿ ತನ್ವೀ ಕಿಮಿವಹಿ ಮಧುರಾಣಾಂ ಮಂ
ಡನಂ ನಾಕೃತೀನಾಂ ॥

ಇದುರಿಗಿರುವ ಸುಂದರ ಯುವತೀ ಲಲಾಮವನ್ನು ನೋಡಿ ಔಚಿತ್ಯವನ್ನು ಮರೆತು ತನಗೂ ಆಕೆಗೂ ನಡುವೆಯೊಂದು ಅಡ್ಡಗಟ್ಟೆ ಇರುವದೆಂಬ ಸಂಗತಿಯಲ್ಲಿ ಮೋಸಹೋದನು. ನದೀತೀರದೊಳಗಿನ ವನವು ತನ್ನ ಬಾಲ್ಯದೆಸೆಯೊಳಗಿನ ರಾಣಿಯಾದ ಶಕ್ತಿಯೊಡನೆ ಆಟವಾಡುತ್ತಿದ್ದ ಮೃದ್ಯಾನವನವಾಗಿ ಮಾರ್ಪಟ್ಟಿತು. ತಾನು ಹಾಗೆ ಮಾಡುತ್ತಿರುವೆನೆಂದಾದರೂ ತಿಳಿಯದೆ ಆಕೆಯನ್ನು ಸಮೀಪಿಸಿ ಪಕ್ಕದಲ್ಲಿ ಗಿಡದಮೇಲೆಯೇ ಕುಳಿತುಕೊಂಡನು. ಅಷ್ಟರಲ್ಲಿ ಶಕ್ತಿಯು

"ರಾಜಪುತ್ರನೆ! ನೀನು ಮೊದಲಿನ ಹಾಗೆ ಈಗಲೂ ವೇಣುಗಾನ ಮಾ

ಪುವೆಯುಲ್ಲವೆ? ಎಂದು ಮೌನಮುದ್ರೆಯನ್ನು ಭೇದಿಸಿ ಮಾತಾಡಿಸಿದರೆ ಆತನ ಹೃದಯವು ನೀರಾಗಿ ನಿಟ್ಟುಸಿರು ಹೊರಟಿತು. ಆತನು ದೂರವಾಗಿ ಜರುಗಿ, ಇನ್ನೂ ಅಲ್ಲಿಯೇ ಆಸೀನನಾಗಿದ್ದನು.

"ಆರ್ಯಪುತ್ರನೇ! ನಿನ್ನ ವೇಣುವೆಲ್ಲಿರುವುದು? ಚಿಕ್ಕಂದಿನಂತೆ ಈಗ ನೀನು ಅದನ್ನು ಬಾರಿಸುವುದಿಲ್ಲವೋ? " ಎಂದು ಶಕ್ತಿಯು ಮರಳಿ ಪ್ರಶ್ನಿಸಿದಳು. ಅದಕ್ಕೆ ರಾಜಪುತ್ರನು. "ನನ್ನ ಬಾಲ್ಯದೆಸೆಯಂತೆಯೇ? ಕಳೆದದಿನಗಳು ಮರಳಿ ಬರುವುದೇ? ರಾತ್ರೆ ಕಂಡ ಕನಸು ಹಾಗೆಯೇ ಇರುವುದೇ?"

ಶಕ್ತಿ,—"ಆದರೂ ರಾತ್ರೆಯು ಮರಳಿಬರುವುದಲ್ಲವೆ?"

ರಾಜ,—"ನಿನ್ನಿನ ಕನಸು ಮಾತ್ರ ಮರಳಿ ಬರಲಾರದು."

ಈ ತೆರನ ಸಂಭಾಷಣೆ ನಡೆಯುತಿರುವಾಗ ಶಕ್ತಿಯ ಹೃದಯವು ಪ್ರಕ್ಕೆಬಿಟ್ಟಿತು ಆ ಕನ್ನೆಯ ಮನಸ್ಸಿಗೆ ತಕ್ಷಣವೆ ನಿಶ್ಚಯವು ಬೋಧೆಯಾಯ್ತು ರಳಥಾವಿಯೋಗದ ದೆಸೆಯಿಂದಬೃಂದಾವನವು ನಿಷ್ಫಲವಾಗಿಶ್ರೀಕೃಷ್ಣನ ವೇಣುವನ್ನು ನಾದರಹಿತವಾಗಿಸಿ ಬಿಟ್ಟಿತು. ಆಕೆಯ ವಿಯೋಗದಿಂದ ಆತನಿಗೂ ಆತನ ವಿಯೋಗದಿಂದ ಆಕೆಗೂ ವಿರಹತಾಪವು ಹೆಚ್ಚಾಗಿದ್ದಿತು. ಲೋಕಾನುಭವದಿಂದ ಹೃದಯವು ಕಲ್ಮಷವಾಗುವವರೆಗೂ ಪ್ರೇಮೆಯಲ್ಲಿ ನಂಬಿಕೆಯು ಹೆಚ್ಚಾಗಿರುವುದು "ಆದರೆ ಮನಸ್ಸು ದೃಢವಾಗಿದ್ದಿತಾದರೆ ಗತಿಸಿದ ಕನಸುಗಳು ಮರಳಿ ಬರಬಹುದು. ನಿನಗೆ ಈಗಾಗಲೇ ಯೌವನ ವಿಲಾಸಗಳು ಅಡಗಿದುವೇ? " ಎಂದು ಶಕ್ತಿಯು ಮಂದಹಾಸದಿಂದ ಕೇಳಿದಳು.

"ಎಲ್ಲವೂ ಇಲ್ಲದಿದ್ದರೂ ಕೆಲವಾದರೂ ಉಡುಗಿವೆ. ನನಗೆ ಬಾಲ್ಯವು ಕಳೆದು ಪ್ರಾಜ್ಞತೆಯು ಬರುತಿವೆ, ನನಗೊಂದು ಸಂಸ್ಥಾನವೂ ಕೂಡ ಯಿರುವುದರಿಂದ ಅದರ ವ್ಯವಹಾರಗಳನ್ನೂ, ಪ್ರಜೆಗಳ ಕ್ಷೇಮವನ್ನೂ, ನೋಡಿಕೊಳ್ಳಬೇಕಾಗಿರುವುದು. ಕೇವಲ ವಿನೋದದಿಂದ ಕಾಲಕ್ಷೇಪಮಾಡುವುದಕ್ಕೆ ನನ್ನ ಬಾಲ್ಯದೆಸೆಯು ಕಳೆದು ಹೋಯಿತು. ಮಾಡುವುದೇನು?"

ಹೀಗೆ ಹೇಳಿದ ಗಣೇಶದೇವನಿಗೆ ಯಿಪ್ಪತ್ತೆರಡು ವರುಷ ವಯಸ್ಸು ಮಾತ್ರವಿದ್ದಿತು. ಆತನು ಬುದ್ಧಿಗೆ ಬಾಲಕನೇ. ಆದರೂ ಸಮಯ ಸಂಧಿಸಿದಾಗೆಲ್ಲ

ವಯೋಧಿಕರ ಗಾಂಭೀರ್ಯವನ್ನು ಸಂಪಾದಿಸಿಕೊಳ್ಳುವುದರಲ್ಲಿ ಅತ್ಯಂತಾಪೇಕ್ಷೆಯುಳ್ಳವನಾಗಿದ್ದನು.

ಅಂತಹ ಗಣೇಶದೇವನಿಗೆ ವೇಣುಗಾನ ಮಾಡುವುದರಲ್ಲಿ, ಈಗ ಅಷ್ಟು ಅಭಿಲಾಷೆಯಿಲ್ಲದಿದ್ದರೂ ಅದನ್ನು ಕೇಳಬೇಕೆಂದು ಶಕ್ತಿಗೆ ಮಾತ್ರ ಕೋರಿಕೆಯುಂಟು. ಆದುದರಿಂದ "ಆರ್ಯಪುತ್ರನೆ! ನೀನು ಅದನ್ನು ಹೇಗೆ ಬಿಡತಕ್ಕವನಾದೆ? ಒಂದುವೇಳೆ ಮನ್ಮಥನು ಕಬ್ಬುವಿಲ್ಲನ್ನೂ, ಶ್ರೀಕೃಷ್ಣನು ವೇಣುವನ್ನೂ ಬಿಟ್ಟರೂ ಬಿಡಬಹುದಾದರೂ, ಗಣೇಶದೇವನು ಮಾತ್ರ ತನ್ನ ವೇಣುವನ್ನು ಬಿಡಲಾರನೆಂದು ಅಂದುಕೊಳ್ಳುತಿದ್ದವಳು."

"ಹಾಗಾದರೆ ಬಿಡಲಾರೆನು. ಎಲ್ಲಿ! ನನ್ನ ಪಿಳ್ಳಗೋವಿಯು?" ಎಂದು ದರಹಸಿತವದನಾರವಿಂದದಿಂದ ಗಣೇಶದೇವನು ಅದನ್ನು ತೆಗೆದು ಊದುರಿಸಲಾರಂಭಿಸಿದನು.

"ಅಗೋ! ಮೊದಲಿನ ವೇಣುವೇ ಇದು" ಎಂದು ಶಕ್ತಿಯು ಅತ್ಯುಲ್ಲಾಸದಿಂದೆಚ್ಚರಿಸಿದಳು.

"ಅಹುದು ಮೊದಲಿನದೆ!" ಎಂದು ಗಣೇಶದೇವನೆಂದನು.

ಚಿಕ್ಕಂದಿನಲ್ಲಿ ಶಕ್ತಿಯು ಈ ವೇಣುವನ್ನು ರಾಜಪುತ್ರನ ಬಳಿಗೆ ತೆಗೆದುಕೊಂಡು ಹೋಗಿ ಅದನ್ನು ಬಾರಿಸುವುದೆಂತೋ ಹೇಳುವುದೆಂದು ಕೇಳಲು, ಆತನು ಗುರುತ್ವವನ್ನು ವಹಿಸಿದನಲ್ಲದೆ, ಬಾಲಿಕೆಯರ ಕೋರಿಕೆಗಳೇನೋ ಸಹಜವಾದುದರಿಂದ ಶಕ್ತಿಯು ಪೂರ್ತಿಯಾಗಿ ಕಲಿಯಲಿಲ್ಲ. ರಾಜಕುಮಾರನು ಮಾತ ಆ ವೇಣುವನ್ನು ಪ್ರೀತಿಸಿಟ್ಟನು. ಅದೊಂದು ಬರೀ ಬಿದುರು ತುಂಡೇ ಆದರೂ ಅದರ ಧ್ವನಿಯು ತನ್ನ ಬಂಗಾರದ ವೇಣುವಿಗಿಂತಲೂ ಮಧುರತರವಾಗಿದ್ದಿತು. ತರುವಾಯ ಗಣೇಶದೇವನು ಅದನ್ನು ಬಾರಿಸತೊಡಗಿದನು. ಪೂರ್ವದಮನೋಹರವಾದ ಗೀತವನ್ನು ಅದರಲ್ಲಿ ಗಾನಮಾಡಿದನು. ಶಕ್ತಿಯು ಮನಸ್ಸೆಲ್ಲವೂ ಅದರಲ್ಲಿಯೇ ಮಗ್ನವಾಗಿ ಕೇಳುತ ದಣಿವಾರ ಆನಂದವನ್ನು ಅನುಭವಿಸಿದಳು.

## ಪ್ರಕರಣ ೭.

ಅಹಾ ! ಆ ಹಾಡಿನ ಮಾಧುರ್ಯವೇನೆಂದು ಹೇಳಲಿ ? ಪ್ರಶಾಂತ ವಾಗಿ ಸುಖವನುಭವಿಸುವ ಬಾಲ್ಯದಲ್ಲಿ ತನ್ನ ಸಖಿಯರೂ ತಾನೂ ಮಹೀ ಪಾಲ ಪುಷ್ಕರಿಣಿಯಲ್ಲಿ ನೌಕಾವಿಹಾರ ಮಾಡುತಿರುವಾಗೆ ಹಾಡಿದ ಹಾಡಿ ದುವೆ. ಆಕೆಗೂ ಅದು ಅಭ್ಯಾಸವುಂಟು. ಆತನಿಗೂ ಅದರಲ್ಲಿನ್ನೂ ಅದೇ ಅಭಿಮಾನವೆ. ಆಕೆಯು ಹೃದಯದಲ್ಲಿದ್ದ ಆನಂದವೆಲ್ಲವನ್ನೂ ಹೊರಹಾಕು ವ ವೊಂದು ನಗೆಯನ್ನು ನಕ್ಕು, “ ಮಹಾರಾಜನ ಕೈಗಳಿಗೆ ಬರೀವೇಣು ವೊಂದೇ ತಕ್ಕುದಾಗಿರುವುದೇ ? ಅದನ್ನು ನದಿಯಲ್ಲಿ ಬಿಸು ಡಬೇಕೆಂದುಕೊಳುವೆನು” ಅದಕ್ಕೆ ಆ ರಾಜಕುಮಾರನು ಆದಿನ ಗೆದ್ದ ರತ್ನಕೃ ಪಾಣವನ್ನು ಸ್ಪೃಶಿಸಿ “ ಶಕ್ತೀ! ಈ ಖಡ್ಗವನ್ನು ನೋಡಿದೆಯಾ? ಇದು ಬಲು ಬೆಲೆಯುಳ್ಳುದು. ಇದನ್ನಾದರೂ ಬಿಸುಡುವೆನಲ್ಲದೆ ಚಿಕ್ಕಂದಿನಿಂದಿರುವೀ ವೇಣುವನ್ನು ಬಿಡುವೆನೇ? ಇದರ ಬೆಲೆಗೆ ಯೇರೆ ಇರುವುದೇ? ಇದು ನನಗೆ ಪ್ರಾಣಗಳಿಗಿಂತಲೂ ಪ್ರಿಯತಮವಾದುದು. ”

ಅಂದಕೂಡಲೆ ಶಕ್ತಿಯು ತನ್ನ ಮೇಲ್ಮುಸುಕನ್ನು ಹಾರಬಿಡಿದು ತನ್ನ ಕೊರಳಲ್ಲಿರುವ ತಪ್ತಕುಸುಮದಾಮವನ್ನು ತೋರಿ “ರಾಜಕುಮಾರನೇ! ಚಿ ಕ್ಕಂದಿನ ವಸ್ತು ನನಗೂ ಒಂದುಂಟು. ನಿನ್ನ ಚಿಕ್ಕಂದಿನ ಪ್ರಿಯಸಖಿಯ ಕೊರಳಲ್ಲಿ ಹೂಸರವನ್ನು ಹಾಕಿದ ಆಮಧ್ಯಾಹ್ನ ಸಮಯವನ್ನು ಜ್ಞಾಪಕಮಾ ಡಿಕೊಂಬೆಯಾ? ನಾನು ಆಗಿನಿಂದಲೂ ಅದನ್ನು ಬೈತಿಟ್ಟುಕೊಂಡು ಪ್ರಾಣಪ ದವಾಗಿ ನೋಡಿಕೊಳುತಿರುವೆನು. ಅದರಿಂದಲೇ ನೀನು ಪಂತವನ್ನುಗೆ ದ್ದಾಗೆ ಇದನ್ನು ನಿನ್ನಮೇಲೆಸೆದೆನು. ಈ ಬಾಡಿದ ಹೂಸರವು ಎಸೆಯಲ್ಪ ಟ್ಟುದು ಘನತೆಗೋಸ್ಕರವೋ, ನ್ಯೂನತೆಗೋಸ್ಕರವೋ ಈಗಲಾದರೂ ಊ ಹಿಸುವೆಯಾ? ”

ಎಂದು ಶಕ್ತಿಯು ನುಡಿದಕೂಡಲೆ ರಾಜಕುಮಾರನ ಮೈ ಝುಮ್ಮೆಂ ದಿತಾದರೂ ಆ ವಿಕಾರವು ಒಂದು ಕ್ಷಣದಲ್ಲಿಯೆ ಅಡಗಿ ಮುಖದಲ್ಲಿಖಿನ್ನ

ತೆಯು ತಲೆದೋರಿ. ಹಿಂದೂ ಜನಗಳಿಗೆ ಸಹಜವಾದ ಪರಕಾಂತಾಪರಾ ಙ್ಮುಖತೆಯು ತಾನಾಗಿ ವ್ಯಕ್ತವಾಯಿತು. ಪುರುಷನು ಅನೇಕಮಂದಿ ಸ್ತ್ರೀಯರನ್ನು ವರಿಸುವದಕ್ಕೂ ಮದುವೆಯಾಗುವುದಕ್ಕೂ ತಲೆತಲಾಂತರಗ ಳಿಂದಲೂ ಬರುತಿರುವ ಆಚಾರವು ಅಧಿಕಾರವನ್ನುಂಟುಮಾಡುತಿದೆ. ಆದರೆ ಸ್ತ್ರೀಯರುಮಾತ್ರ ಒಬ್ಬಾತನನ್ನೇ ಒಲಿದು ತಮ್ಮ ತನುಮನಗಳನ್ನು ಆತನಲ್ಲಿ ಯೆ ನಿಲಿಸಿಡಬೇಕು. ಮದುವೆಯಾದ ಬಳಿಕ ಪರಪುರುಷನನ್ನು ಸ್ಮರಿಸುವಿ ಕೆಗಿಂತಲೂ ಘೋರತಮವಾದ ಪಾತಕವು ಬೇರೊಂದಿಲ್ಲ. ರಾಜಕುಮಾರನ ಹೃದಯವಿನ್ನೂ ಶಕ್ತಿಯಲ್ಲಿರುತ್ತದೆ. ಆದರೂ ಅತನಿಗೆದು ದೋಷವಲ್ಲ. ಆಕೆಯು ಬೇರೊಬ್ಬಾತನ ಕೈಹಿಡಿಯುವದಕ್ಕೆ ಮುಂಚಿತವಾಗಿಯೆ ಆ ಕೆಯನ್ನು ವರಿಸಿದನು. ಆಕೆಯು ಮನಸ್ಸಿನ್ನೂ ಆತನ ಮೇಲಿರುವದು ಮಾ ತ್ರ ಇಹಪರವೆರಡಕ್ಕೂ ಕೆಡುಕೆ. ರಾಜಕುಮಾರನು ಗಾಂಭೀರ್ಯದಿಂದಿರುವಿ ಕೆಯನ್ನು ನೋಡಿ ಶಕ್ತಿಯು ಕೂಡ ಮೌನವನ್ನು ವಹಿಸಿದಳು. ತನ್ನ ಕೊ ರಳಲ್ಲಿದ್ದ ಆ ಪುಷ್ಪಹಾರವನ್ನು ಆತನ ಕಂಠದಲ್ಲಿ ಅಲಂಕರಿಸಲೆಣಿಸಿ ಮೇಲ ಕ್ಕೆತ್ತಿದಳಾದರೂ ಅದು ಆಕೆಯ ಕೈಯೊಳಗೇ ಇದ್ದುಬಿಟ್ಟಿತು. ನಂತರ ರಾ ಜಕುಮಾರನು ವಿಚಾರಗ್ರಸ್ತನಾಗಿ “ ತಟನೀ ತೀರದ ಹೂತೋಟದಲ್ಲಿ ನಾವು ಆಟವಾಡಿಕೊಂಡ ಪುಷ್ಪಮಾಲೆ ಇದೇನೋ? ಶಕ್ತೀ! ನೀನಿನ್ನು ಚಿ ಕ್ಕಂದಿನ ಹುಡುಗಾಟಿಕೆಗಳನ್ನು ಮರೆತುಬಿಡತಕ್ಕುದು! ಅವುಗಳನ್ನೇಕೆ ಇ ನ್ನೂ ಮನಸಿನಲ್ಲಿಟ್ಟುಕೊಳುವೆ? ,, ಅಂದನು.

ಶಕ್ತಿ— “ ನೀನು ಮರೆತೇಬಿಟ್ಟೆಯೇನು? ” ಎಂದು ಮನನೊಂದ ವಳಂತೆ ಕೇಳಿದಳು.

ರಾಜ— “ ನಾನು ಮರೆಯಲಿಲ್ಲ. ಅದುವೆ ನನ್ನವಿಚಾರವು. ಶಕ್ತೀ! ನೀನು ನಮ್ಮನ್ನು ಅಷ್ಟು ಆಕಸ್ಮಿಕವಾಗಿ ಬಿಟ್ಟು ಹೊರಟು ಹೋದ ದ್ದೇಕೆ? ” ಎಂದು ಆಕೆಗೆ ಯಾವುದೋ ಧರ್ಮೋಪದೇಶ ಮಾಡುವದಕ್ಕೆ ಹೋಗಿ, ತನ್ನ ಸ್ನೇಹವನ್ನು ಹೊರಪಡಿಸಿಕೊಂಡನು. ಅದನ್ನು ನೋಡಿ ತನ್ನ ವಿಚಾರವನ್ನು ನೀಗಿಕೊಂಡವಳಾಗಿ “ ನಮ್ಮ ವಿಯೋಗಕ್ಕೆ ಕಾರಣ

ವೇನೋ ನನಗೆ ತೋರಲಿಲ್ಲ. ಒಂದುದಿನ ಬೆಳಗಾಗ ನನ್ನ ತಂದೆಯು ತಾನು ತೀರ್ಥಯಾತ್ರೆಗಳಿಗೆ ಹೋಗುತಿರುವೆನೆಂಬದಾಗಿಯು, ನಾನು ಕೂಡ ತನ್ನೊಡನೆ ಬರಬೇಕೆಂಬದಾಗಿಯು, ನನ್ನೊಂದಿಗೆ ನುಡಿದನು. ತರುಣದ ಲ್ಲಿಯೇ ನಿನ್ನಪ್ಪಣೆಯು ಪಡೆದು ಹೊರಡಬೇಕೆಂದೆಂದು ಕೊಂಡೆನು. ಆದರೆ ಅದುವರೆಗೆ ನನ್ನ ತಂದೆಯು ತಾಳಲಿಲ್ಲವಾದುದರಿಂದ ವೊಡನೆಯೇ ಹೊರಡ ಬೇಕಾಯಿತು. ಅದು ವೊದಲು ಆರು ವರುಷಗಳ ವರೆಗೂ ದೇಶದೇಶಗಳ ನ್ನು ಸಂಚರಿಸಿದೆವು. ಪ್ರತಿದಿನವೂ ನಮ್ಮ ಮನೆಗೆ ಹೋಗೋಣವೆಂದು ಕೇ ಳುತ ಬಂದೆನಾದರೂ ಯಾವಾಗಲೂ "ಯಾತ್ರೆಯನ್ನು ಪೂರೈಸಿಕೊಂಡು ಹೋಗೋಣ" ವೆಂದು ನಮ್ಮ ತಂದೆಯು ವೊಂದೇ ಬಗೆಯ ಸಮಾಧಾನವ ನ್ನು ಹೇಳುತ ಬಂದನು. ಕೆಲವು ದಿನಗಳು ಪಾಂಡುವಾ ನಗರದಲ್ಲಿದ್ದೆವು. ಅಲ್ಲಿಯೆ ಆ ಮಧ್ಯದಲ್ಲಿ ನನ್ನ ತಂದೆಯು ಲೋಕಾಂತರಗತನಾದನು. ಆ ಗಿನಿಂದಲೂ ದಿನಾಜಪುರದಲ್ಲಿ ನಮ್ಮ ಮನೆಗೆ ಬರಬೇಕೆಂಬ ಕೋರಿಕೆಯಿಂದಿ ದ್ದೆನು. ನೀನು ರಾಜಧಾನಿಯನ್ನು ಸೇರಿರುವೆಯೆಂದು ನನಗೆ ತಿಳಿಯುವತ ಗ್ಗೆ ಸೂತಕದ ದಿನಗಳಾಗಲೆ ಕಳೆದಿದ್ದುವು. ಇಷ್ಟು ದಿನಗಳಿಂದಲೂ ನಾನು ಪಟ್ಟಬಾಧೆಯು ಭಗವಂತನೊಬ್ಬನಿಗೇ ತಿಳಿಯುವುದು. ಬಾಡಿರುವ ಈ ಹೂ ಸರವೇ ನನ್ನ—

ರಾಜ— "ನೀನು ಯಾರನ್ನೋ ಮದುವೆಯಾಗಿರುವೆಯೆಂದು ನಾ ನೆಂದುಕೊಂಡೆನು. ನೀನಿನ್ನೂ ಮದುವೆಯಾಗದಿರುವ ಸಂಭವವೆಂತು?" ಎಂದು ಗಣೇಶದೇವನು ಸಮಾಧಾನದೊಡನೆ ಪ್ರಶ್ನಿಸಿದನು.

ಶಕ್ತಿ— "ಸ್ತ್ರೀಯು ಯೆರಡುಸಲ ಮದುವೆ ಮಾಡಿಕೊಳುವಳೆಂದು ಕೊಂಡೆಯಾ?" ಎಂದು ನುಡಿಯುತಿರುವಾಗ ಸ್ವಭಾವಸಿದ್ಧವಾಗಿ ಪ್ರಕಾಶ ಮಾನವಾದ ಆಕೆಯ ಮುಖದಲ್ಲಿ ತಳತಳಿಸುವ ಮೋಹಕಾಂತಿಗಳೂ, ಮೇ ಲಿಂದ ಪ್ರಸರಿಸುತಿರುವ ಯೆಳೆಬಿಸಿಲುಗಳೂ, ಆಕೆಗೆ ಹೊಸದಾದ ಸೌಂದರ್ಯ ವನ್ನುಂಟುಮಾಡಿತು. ರಾಜನು ಪಶ್ಚಾತ್ತಾಪದಷ್ಟಹೃದಯನಾಗಿ ತಲೆತ ಗ್ಗಿಸಿ ಸುಮ್ಮನಿದ್ದನು. ಈಗ ಆತನಿಗೆ ಸಂಗತಿಯು ಬೋಧೆಯಾಯಿತು. ಶ

ಕ್ತಿಯು ಆತನನ್ನು ಮೋಹಿಸಿದಂದಿನಿಂದಲೂ ಸ್ನೇಹಿತಪ್ಪದೆ ನಿಂತಿರುವಳು. ಆತನಿಗೆ ಕೂಡ ತನ್ನಲ್ಲಿ ಅಂತಹ ವಿಶ್ವಾಸವೇ ಉಂಟೆಂದೆಣಿಸಿ ಬೇರೆ ಯಾವಾತನನ್ನೂ ಕೈಹಿಡಿಯದೆ ಯಿದ್ದಳು. ಆದರೆ ಗಣೇಶದೇವನು ಮಾತ್ರ ಒಬ್ಬ ಕನ್ನೆಯನ್ನು ಕೈ ಹಿಡಿದು ಆಕೆಯೊಂದಿಗೆ ಸುಖಪಡುತಿರುವನು. ಹೀಗೆ ಮೋದವಿಷಾದ ಮಿಶ್ರಗಳಾದ ಸಾವಿರಾರು ಯೋಚನೆಗಳ ನಡುವೆ ಶಕ್ತಿಗಿನ್ನೂ ಮದುವೆಯಾಗಲಿಲ್ಲವಷ್ಟೆ! ಎಂಬೊಂದು ಸಂತೋಷವು ಆತನ ಹೃದಯವೀಧಿಯಲ್ಲಿ ಸಂಚರಿಸುತಿದ್ದಿತು.

" ಬಹುಶಃ ರಾಜಕುಮಾರನಿಗೆ ಮದುವೆಯಾಗಿದ್ದೀತು ? " ಎಂದು ಶಕ್ತಿಯು ಆತ್ಯಾತುರದಿಂದ ಪ್ರಶ್ನೆಮಾಡಿದಳು. ಆತನು ಪ್ರತ್ಯುತ್ತರವನ್ನು ಕೊಟ್ಟವನಾಗಲಿಲ್ಲ. ಹೀಗೆ ನಿಶ್ಶಬ್ದವಾಗಿ ಕೆಲವು ನಿಮಿಷಗಳು ಗತಿಸಿದುವು. ಸ್ವಲ್ಪಹೊತ್ತಿಗೆ ಆ ಮೌನಮುದ್ರೆಯನ್ನು ಭೇದಿಸಿ ಗಣೇಶದೇವನು ನೀನು ಅಷ್ಟು ಆಕಸ್ಮಿಕವಾಗಿ ಹೊರಟುಹೋದೆಯಲ್ಲವೆ?" ಎಂದು ಮರಳಿ ಕೇಳಿದನು.

ಸಹಜವಾಗಿ ಸೂಕ್ಷ್ಮ ಬುದ್ಧಿಯುಳ್ಳ ಶಕ್ತಿಗೆ ಅದರ ಅರ್ಥವು ಸುಲಭವಾಗಿ ಬೋಧೆಯಾಯಿತು. " ಹಾಗಾದರೆ ಗಣೇಶದೇವನು ವಿಸ್ಮೃತಿಯನ್ನು ಹೊಂದಿದನೋ? " ಎನುವಾಗ ಆಕೆಯ ಕಂಠದಲ್ಲಿ ಅಚ್ಚರಿಯಾದ ದೀನತೆಯು ತಲೆದೋರಿತು.

ರಾಜನು "ಇಲ್ಲ, ಇಲ್ಲ ಶಕ್ತೀ! ವಿಸ್ಮೃತಿಯಿಲ್ಲ. ನಿನ್ನ ಮದುವೆಗೋಸ್ಕರ ಎಲ್ಲಿಗೋ ಕರೆದುಕೊಂಡು ಹೋದಂತೆ ನಮ್ಮ ತಾಯಿಯಿಂದ ತಿಳಿದೆನು. ನಿನಗೆ ಮದುವೆ ಯಾಯ್ತೆಂದುಕೊಂಡೆನು." ಈ ಮಾತುಗಳನ್ನು ಹೇಳಿದಾಗ ಆತನ ಹೃದಯದಲ್ಲಿ ತುಂಬಿದ್ದ ಮನೋಭಾವಗಳೆಲ್ಲವೂ ವ್ಯಕ್ತವಾಗುತಿದ್ದುವು.

ಶಕ್ತಿಯ ಪೂರ್ವದಮನೆಯು ದಿನಾಜಪುರವಲ್ಲ. ಅಲ್ಲಿಗೆಸ್ವಲ್ಪ ದೂರದಲ್ಲಿರುವ ದೇವೀಕೋಟೆಯು. ಹೆಣ್ಣುಮಕ್ಕಳಿಗೆ ಮದುವೆಮಾಡುವುದಕ್ಕೆ ತಾಯಿತಂದೆಗಳು ತಮ್ಮ ಸ್ವಗ್ರಾಮಕ್ಕೆ ಹೋಗುವುದು ಸಹಜವಾದುದರಿಂದ ಗಣೇಶದೇವನ ತಾಯಿಯು ಪ್ರಕಟಿಸಿದ ಆ ವಾರ್ತೆಯು ನಂಬಿಕೆಗೆ ಅರ್ಹವಾಯಿತು.

ಇದು ಶಕ್ತಿಗೆ ಘನತಮವಾದ ಶೋಕ ಸಮಯವು. ಎಂತಹ ಕಲ್ಲೆದೆಯುಳ್ಳವರಾದರೂ ಅಷ್ಟು ಧೈರ್ಯದಿಂದ ಅದನ್ನು ತಾಳಿಕೊಳ್ಳಲಾರರು. ಆಕೆಗೆ ಪಳಪಳನೆ ಕಣ್ಣೀರುದುರಿದುವು. ಆದರೂ ಅದನ್ನು ತಕ್ಷಣವೇ ಹಿಂದಿರುಗಿಸಿ ಬಿಸಿಬಿಸಿಯಾದ ನಿಟ್ಟುಸಿರಿಂದ ಆಕೆಯು " ಈಗ ರಾಣಿಯಾದ ಭಾಗ್ಯವಂತೆ ಯಾರು? " ಎಂದು ಕೇಳಿದಳು.

" ನಿರುಪಮೆ " ಎಂದು ಪ್ರತ್ಯುತ್ತರ ಹೊರಟಿತು.



## ಪ್ರಕರಣ ೮.

ಅಯ್ಯೋ! ಎಷ್ಟು ದುರದೃಷ್ಟವಂತಳು? ಆಕೆಗೀಗ ಮೋಹವಿಷಫಲಾಸ್ವಾದನ ಸಂಭವವಾಗಿ ಬಿಟ್ಟಿತು. ಆಕೆಯ ಮನಸಿನಲ್ಲಿ ದುಷ್ಕರವಾದ ಈರ್ಷ್ಯೆಯು ಬೇರೂರಿತು. ಆಕೆಯ ಆಯುರ್ಮರಿಯಾದೆಯು ದುಃಖದಿಂದಲೇ ಗತಿಸುವಂತಾಯಿತು. ಆಕೆಯು ಸುಖವೆಂತಹುದೋ ಗುರುತರಿಯಳು. ಇದನ್ನು ಆಕೆಯು ಲಕ್ಷ್ಯಮಾಡಲೆ ಇಲ್ಲ. ಆಕೆಗೀಗೂ ಚಿಕ್ಕಂದಿನ ಪ್ರೇಮಾತಿಶಯದಲ್ಲಿಯೇ ಮನಸ್ಸು ಲಗ್ನವಾಗಿರುತ್ತದೆ. ಅಕಟಕಟಾ! ವಿಧಿಯನೇನೆನಲಿ! ತನ್ನ ಮೋಹಲತೆಯು ಚಿಕ್ಕಂದಿನಿಂದ ಯಾವಾತನ ಸುತ್ತಲೂ ಮೊತ್ತೊತ್ತಾಗಿ ಹೆಣೆದುಕೊಂಡಿರುವುದೋ, ಆತನು, ಇನ್ನೊಂದು ವಲ್ಲಿಕೆಯನ್ನು ಬಳಿಸಿದನೆಂಬುದೀಗ ತಿಳಿದುಹೋಯಿತು.

ಎಲೈ ಜಗದ್ರಕ್ಷಕನೇ! ಸ್ತ್ರೀಪುರುಷರನ್ನು ಇಷ್ಟು ವೆತ್ಯಸ್ತವಾಗಿ ಸೃಜಿಸಿದೆ ಯೇಕೆ? ಪುರುಷನ ಮಂದಹಾಸವು ಸರ್ವದಾ ಸ್ತ್ರೀಬಾಷ್ಪಗಳಲ್ಲಿ ಪ್ರತಿಬಿಂಬಿಸುತಿರಬೇಕೆ ? ಪುರುಷರು ಯಾವಾಗಲೂ ಸ್ತ್ರೀಹೃದಯ ರಕ್ತಪಾನದಿಂದಲೇ ತಮ್ಮ ದಾಹವನ್ನು ತೀರಿಸಿಕೊಳತಕ್ಕುದೇ?

ಶಕ್ತಿಯ ಮುಖವನ್ನು ನೋಡಿ ರಾಜಕುಮಾರನು ಚಂಚಲ ಹೃದ

ಯನಾದನು. ಆಕೆಯ ಭಾವಗಳು ಅತಿ ದೃಢಗಳಾಗುತಿವೆ. ಆಕೆಯ ಊಹೆಗಳೆಲ್ಲವೂ ಹೃದಯಮೂಲದಿಂದ ಹೊರಡುವುದು. ಸ್ತ್ರೀಶಕ್ತಿ ಯೆಂತಹುದೋ, ಆತನರಿಯನಾದುದರಿಂದ ಆಕೆಯಸ್ವಭಾವ ಮಧುರಭಾಗವನ್ನು ಮಾತ್ರವೆ ಆತನು ಸ್ಪೃಶಿಸಿ ಬಿಡಲೆಣಿಸಿದನು. ಆತನ ಬಾಲ್ಯಸ್ವಪ್ನ ದಿನದ ಶಕ್ತಿಯೇನೇ ಈಕೆ? ಆತನು ಮರೆತುಹೋಗಲು ಪ್ರಯತ್ನಿಸಿಯು ಕೊನೆಸಾಗದಿದ್ದ ಶಕ್ತಿಯೇನೇ ಈಕೆ? ಇಂತಹ ಮೃದುವಾದ ಆಕಾರದಲ್ಲಿ ಇಷ್ಟು ದಾರುಣವಾದ ಮೋಹವಿರುವುದೇ? ಎಂಜೀತೆರವಾದ ಯೋಚನೆಗಳಾತನ ಹೃದಯ ವೀಧಿಯನ್ನಾಕ್ರಮಿಸಿತು. ಪರಿತಾಪಕೆ ಪಕ್ಕಾದ ಶಕ್ತಿಗೆ ಕೊಟ್ಟಕೊನೆಗೆ ಮಾತಾಡುವ ಧೈರ್ಯವುಂಟಾಗಿ "ಹಾ! ರಾಜಕುಮಾರಾ! ನಿನ್ನ ಕಥೆಯನ್ನು ಚೆನ್ನಾಗಿ ತಿಳಿಸಿದೆ. ಕೊನೆಯವರೆಗೆ ಸ್ತ್ರೀಪುರುಷರು ಭೂಮಿಯಮೇಲಿರುವಷ್ಟು ಕಾಲಕ್ಕೂ ಅದು ಹಾಗೆಯೇ ಇರುವುದು. ನಾವು ನಂಬುವೆವು. ನೀವು ಮೋಸಮಾಡುವಿರಿ. ನಿಮ್ಮ ಬಳಿ ನಮಗಿರುವ ವ್ಯಾಮೋಹದಿಂದ ನಾವು ಕೃಶರಾಗುವೆವು. ನೀವಾದರೋ ಒಂದು ಹೂವಾದಮೇಲಿನ್ನೊಂದರ ಮೇಲೂರಗಿ ಮಧುಪಾನ ಮತ್ತ ಭೃಂಗದಂತೆ ಸುಖಿಸುವಿರಿ. ನಾವು ನಿಮಗೆ ಪಾದಾಕ್ರಾಂತರಾಗಿ ನೆಲಕೆ ಬಗ್ಗುವೆವು. ನೀವು ನಮ್ಮನ್ನು ನೆಲದಲ್ಲಡಗುವಂತೆ ತುಳಿದು ಮರ್ದಿಸಿ ಹೋಗುವಿರಿ. ನಿಮಗೆ ವಿಲಾಸವು. ನಮಗೆ ವಿಲಾಪವು. ನಿಮ ಗೆ ಚಲ್ಲಾಟ. ನಮಗೆ ಪ್ರಾಣಸಂಕಟ."

ಈ ಮಾತುಗಳನ್ನು ಕೇಳುತಲೆ ರಾಜಕುಮಾರನು ನಿರ್ವಿಣ್ಣನಾಗಿ ಬಾಯ್ಮಾತಿಲ್ಲದೆ ಯಿದ್ದುಬಿಟ್ಟನು. ತನ್ನಿದಿರಿಗೆ ನಿಂತಿರುವುದು ನಿಜವಾಗಿಯು ಸ್ತ್ರೀರೂಪವೆ. ಆಕೆಯನ್ನು ನೋಡಿ ಆತನಿಗೆ ಸಂಕೋಚ ಹುಟ್ಟಿತು. ಈಗ ಕಂಪಿತೆಯಾಗಿರುವ ಆಕೆಯ ಆಕಾರದಿಂದ ಆತನ ಊಹೆಗಳು ನಿರ್ಮಲವಾಗಿ, ಪ್ರಶಾಂತವಾಗಿ, ವಿಶ್ವಾಸ ಪೂರಿತವಾಗಿ, ಮೃದುಲವಾಗಿ ಮೊಪ್ಪುತ ತನ್ನ ಬರುವಿಕೆಗೆ ನಿರೀಕ್ಷಿಸುತಿರುವ ತನ್ನ ಕುಲಕಾಂತೆಯಾದ ನಿರುಪಮೆಯ ಆಕಾರವು ಮೇಲಕ್ಕುಬ್ಬಿತು. ಈಗ ಶಕ್ತಿಯು ರಾಣಿಯೆಂದು ಅಂದು

ಕೊಂಡರೆ ತನ್ನನ್ನು ಸುತ್ತಿಕೊಂಡಿರುವ ಯೆಳೆ ಬಳ್ಳಿಯು ಬಾಡಿ, ಸುರುಟಿ ಗಾಗಿ ನೆಲದಪಾಲಾಗುವುದು. ಇದನ್ನು ಯೋಚಿಸಿಕೊಂಡ ಕೂಡಲೇ ಆ ತನು ಕಟ್ಟಿಗೆಯಂತಾದನು.

ಆ ಸಮಯದವರೆಗೆ ಆತನು ತನ್ನ ಹೃದಯವನ್ನು ಸಂಪೂರ್ಣವಾಗಿ ತನ್ನ ಅರ್ಧಾಂಗಿಗೆ ಸಮರ್ಪಿಸಿರಲಿಲ್ಲ. ಇದಕ್ಕೆ ಕಾರಣವು ತನ್ನ ಚಿಕ್ಕ ಹರೆಯದ ಮೋಹಲತೆಯು ಇನ್ನೂ ಜೀವದಲ್ಲಿರುವಿಕೆಯೆ ! ಆದಾಗ್ಯೂ ಆ ತನ ಬಾಲ್ಯ, ಯೌವನವು ಸ್ಮರಣಾವಶಿಷ್ಟವಾದುದು. ನಿರುಪಮೆಯ ಸಂ ಸರ್ಗವು ಸುಖಕರವಾಗಿಯೇ ಇರುವುದು. ಭಕ್ತನ ಮನದೊಳಿರುವ ಭಗವ ದ್ರೂಪದಂತೆ ಶಕ್ತಿಯ ರೂಹು ಆತನ ಮನದೊಳಗಿದ್ದಿತು. ಅಷ್ಟೇಹೊರತು ಆಕೆಯ ಕಷ್ಟನಿಷ್ಠುರಗಳನ್ನು ಕುರಿತ ವಿಚಾರವು ಆತನಿಗೆಂದೆಂದೂ ವುಂ ಟಾಗಲಿಲ್ಲ. ಅದು ಎಟಕಲಾರದ ಹಣ್ಣಿಗೆ ಆಸೆಗೊಳುವಂತಹುದಾಗಿದ್ದಿತು. ನಿರುಪಮೆಯು ತನಗೆ ಮದುವೆಯಾದ ಹೆಂಡತಿಯು. ತನ್ನ ಮಕ್ಕಳಿಗೆ ತಾ ಯಿ. ತನೊಡನೆ ಸುಖದುಃಖಗಳನ್ನು ಹಂಚಿಕೊಳುವ ಭಾಗಸ್ವಾಮಿನಿ. ಆ ಕೆಯು ಆತನಿಗೆ ಮಾಡುವ ಭಕ್ತಿಯಲ್ಲಿ ಗೌರವವಾಗಲಿ, ಪ್ರೇಮವಾಗಲಿ, ಮಾರ್ದವವಾಗಲಿ, ಯಾವದೊಂದೂ ಕಡಮೆ ಬಿದ್ದಿರಲಿಲ್ಲ. ಆದರೆ ಆಕೆಯು ಆತನ ಹೃದಯವನ್ನು ಮಾತ್ರ ಸೂರೆಗೊಂಡವಳಲ್ಲ.

ಆ ತರುಣೀಮಣಿಯ ಮೃದುಹೃದಯವೂ, ಅತ್ಯಧಿಕಭಕ್ತಿಯೂ ಆತ ನಿಗೆ ಅತ್ಯಂತ ತೃಪ್ತಿಕರವಾಗಿದ್ದಿತು. ಆದರೆ ಈ ದಿನ ತನ್ನ ಮನಸ್ಸಿನೊಳ ಗಿನ ದೇವತೆಯು ಇದಿರಿಗೆ ನಿಂತಾಗ ತನಗಾವುದೋ ದೊಡ್ಡಲೋಪವೊಂದು ಕಾಣಬಂದಿತು. ಇದಿರಿಗಿರುವ ಮೋಹನ ರೂಪವನ್ನು ನೋಡಿದ ಕೂಡಲೆ ಆತನು ತನ್ನನ್ನೂ, ಲೋಕವನ್ನೂ, ನಿರುಪಮೆಯನ್ನೂ ಕೂಡ ಮರೆತನು.

ಆದರೆ ಶಕ್ತಿಯ ಮೋಹನ ಚೇಷ್ಟೆಗಳು ಈರ್ಷ್ಯದಷ್ಟಗಳಾಗಿ ವಿಕಾರವನ್ನು ಹೊಂದಿದಕೂಡಲೆ ಆತನ ವಿಸ್ಮೃತಿಯು ಗತಿಸಿ ಅದೆಲ್ಲವೂ ಮಾಯೆಯೆಂದು ತೊರೆದುಬಿಡಲು ಪ್ರಯತ್ನಿಸಿದನು. ಈಕೆಯು ಮೊದಲಿನ ಶಕ್ತಿಯಲ್ಲ. ಆ ದಿವ್ಯರೂಪವಲ್ಲ. ತನ್ನ ಆಸೆಗಳಿಗೆ ನಿಧಾನವಾದ ಆ ಲಾ

ವೈಣ್ಯರಾಸಿಯಿಲ್ಲ. ಆಕೆಯ ಹೃದಯವು ಈಗ ಮಲಿನವಾಗಿ ಕಂಡಿತು. ಈಕೆಯೊಡನೆ ಹೋಲಿಸಿ ನೋಡಿದಾಗ ನಿರುಪಮೆಯು ಅತ್ಯಂತ ಪವಿತ್ರವತಿಯಾದವಳಂತೆ ತೋರಿತು. ಒಂದು ನಿಮಿಷವಾದರೂ ತಾನು ಆಕೆಯನ್ನಗಲಿರಲಾದೀತೆ? ಆಕೆಗೆ ಸವತಿಯನ್ನು ತಂದೊಡ್ಡಿ ತನ್ನ ಹೃದಯವನ್ನು ಹಂಚಿಕೊಟ್ಟೆ? ಆಕೆಯ ಮಿತಿಯಿಲ್ಲದ ಪ್ರೇಮವನ್ನು ಸಂಭಾವಿಸೆ ಬೇಕಾದುದು? ಅದರದೆಸೆಯಿಂದ ಆಕೆಗುಂಟಾಗುವ ಬಾಧೆಯು ಆತನ ಮನಸಿನಲ್ಲಿ ಚೆನ್ನಾಗಿ ಬೇರೂರಿ ಮೌನ ಮುದ್ರಾಧಾರಿಯಾಗಿ ಸುಮ್ಮನಿದ್ದನು.



## ಪ್ರಕರಣ. ೬

ಶಕ್ತಿಯು ನುಡಿದ ಶಾಪವಾಕ್ಯಗಳೂ, ಆಕೆಯು ಹೊರಪಡಿಸಿದ ದುಃಖವೂ, ರಾಜಕುಮಾರನ ಮನಸಿಗಂಟಿವೆ ಆತನು ಸ್ತಬ್ಧನಾಗಿ ನಿಂತಿದ್ದನು. ಲೋಕದಲ್ಲಿ ಅನೇಕ ವಿರುದ್ಧಗಳಿರುವವು. ಕಾಲವು ತಪ್ಪಿ ನಡೆದಾಗ ಸಹಜಶಾಂತರಾಗಿರುವವರಿಗಿಂತಲೂ ಧೂರ್ತರು ಸುಲಭವಾಗಿ ತಗ್ಗಿಹೋಗುವರು. ತಾನೊಲಿದ ಪುರುಷನ ನಿರ್ದಯೆಯನ್ನೂ, ನಿರಾದರಣೆಯನ್ನೂ ಕಂಡಕೂಡಲೆ ಕಲ್ಲೆದೆಯುಳ್ಳವಳಾದರೂ ಶಕ್ತಿಯ ಹೃದಯವು ಛಿದ್ರಛಿದ್ರಗಳಾಗಿಬಿಟ್ಟವು. ಹೀಗೆ ಖಿನ್ನಹೃದಯೆಯಾದ ಆಕೆಯ ಕಣ್ಣುಗಳಿಂದ ಬಾಷ್ಪಗಳು ಪಳಪಳಪಳನೆ ಸುರಿಯ ಮೊದಲಾಯಿತು. ಆಗಲೆ ಚಂದ್ರೋದಯವಾಯಿತು.

ಕೊಟ್ಟಕೊನೆಗೆ ಧೈರ್ಯವನ್ನು ತಂದುಕೊಂಡು “ರಾಜಕುಮಾರನೇ! ನನ್ನನ್ನು ತೊರೆಯದಿರು. ನೀನು ಪುರುಷನು. ನೀನೆಷ್ಟು ಮಂದಿಯನ್ನಾದರೂ ಮದುವೆಯಾಗಬಹುದು. ನಿರ್ಭಾಗ್ಯಳನ್ನಾಗಿ ನನ್ನನ್ನು ಬಿಟ್ಟುಬಿಡುವೆಯೇಕೆ? ಭಗವತ್ಸಾಕ್ಷಿಯಾಗಿಯೂ ನಾನು ನಿನ್ನ ವಿಧಿವಿಹಿತ ಪತ್ನಿಯು,

ನಿನಗಿಂತಲೂ ನನಗಿನ್ನಾರೂ ದಿಕ್ಕಿಲ್ಲ. ನನ್ನ ತಂದೆಯು ಕೂಡ ಗತಿಸಿದ ನೆಂಬುದನ್ನು ನೀನರಿತಿರುವೆಯಲ್ಲವೆ? ನೀನು ನನ್ನನ್ನು ತೊರೆದು ನಾನು ಮತ್ತೊಬ್ಬನನ್ನು ಮದುವೆಯಾಗುವ ಸಂಭವ ಪ್ರೊಪಗಿದ್ದಾದರೆ ಕೂಡವು ಪಾಪಹೇತುವಾದುದು. ಆ ಪಾತಕಕ್ಕೆ ನೀನು ಉತ್ತರವಾದಿಯಾಗಿರಬೇಕಾಗುವುದು " ಎಂದು ನುಡಿದಳು. ಕೋಪವು ಹೋಗಿ ಶೋಕವು ಆವರಿಸಿದ ಕೂಡಲೆ ಆಕೆಯಮುಖದಲ್ಲಿ ಮೊದಲಿನ ಸಹಜವಾದ ಕಾಂತಿಯು ಮರಳಿ ಉಂಟಾಯಿತು.

ಹೀಗೆ ಹೇಳಿ ಶಕ್ತಿಯು ಸುಮ್ಮನಿದ್ದಳು. ಆ ವನವೆಲ್ಲವೂ ನಿಶ್ಯಬ್ದವಾಗಿದ್ದಿತು. ಇನ್ನು ರಾಜಕುಮಾರನ ಅವಸ್ಥೆಯಾದರೋ; ಆತನಿಗೆ ಧವಳತಮವಾದ ಬೆಳದಿಂಗಳಲ್ಲಿ ಪ್ರಕಾಶಿಸುತ ಬಾಷ್ಪಮಲಿನವಾಗಿ ದಿವ್ಯಸೌಂದರ್ಯಕಾಂತಿಯಿಂದೊಪ್ಪುವ ಶಕ್ತಿಯ ಸುಂದರ ವದನಾರವಿಂದ ಪೊಂದಲ್ಲದೆ ಬೇರೆಯಾವುದೂ ಕಣ್ಣಿಗೆ ಕಾಣದಂತಾಯಿತು. ಅದಕ್ಕೆ ಮೊದಲಿದ್ದ ಈರ್ಷ್ಯಾದ್ಯೋತಕವಾದ ಮುಖವು ಮರೆವಿಗೆ ಬಂದಿತು. ಎಲ್ಲವೂ ಮರೆವಿಗೆ ಬಂದಿತು. ಮನೆಯಲ್ಲಿರುವ ಪ್ರಾಣಸಖಿಯನ್ನು ಕೂಡ ಮರೆಯುವಂತಾಗಿ ಬಿಟ್ಟಿತು. ಪ್ರಶಾಂತವಾದ ವನದಲ್ಲಿ ತನ್ನ ಪ್ರಿಯಸಖಿಯೊಂದಿಗೆ ಪ್ರೊಂಟಿಯಾಗಿರುವಿಕೆಯೂ, ಆಕೆಯನ್ನು ಹಿಂಸೆಗೆ ಗುರಿಪಡಿಸಿದೆನಲ್ಲಾ! ಎಂಬಚಿಂತೆಯೂ, ಇವುಮಾತ್ರ ಆತನ ಮನಸಿನಲ್ಲಿವೆ. ತತ್ಕಾಲ ಸಹಜವಾಗಿ ಆತನು ಆಕೆಯನ್ನು ಸವಿಸಾಪಿಸಿದನು. ಆಕೆಯಮೇಲೆ ಪ್ರಸರಿಸಿದ ಆತನ ದೃಷ್ಟಿಗಳು ವ್ಯಾಮೋಹವನ್ನು ಹೆಚ್ಚಿಸಿದುವೋ! ಎಂಬಂತೆ ಕಂಡುವು. ಆಗ ಆತನ ಮನಸಿನೊಳಗಿನ ಪ್ರೊಲಿಮೆಯೂ, ಅಪಾರವಾದ ಕೋರಿಕೆಗಳೂ, ಯೌವನವೂ, ಬೆಳದಿಂಗಳೂ ಮಾತ್ರವೆ ಬಲ್ಲುವೆ ಅಲ್ಲದೆ ಇತರರಿಗೆ ತಿಳಿಯಶಕ್ಯವಲ್ಲ. ಅಂತಹವುಗಳನ್ನು ವ್ಯಕ್ತೀಕರಿಸಲು ಆತನ ಹೃದಯವು ತತ್ತರಿಸುತಿದ್ದಿತು.

ಆದರೆ ಎಲೈ ಗಣೇಶದೇವಾ! ನೀನು ಮಾತನಾಡಬಾರದು. ಆ ಪ್ರಶಾಂತವಾದ ಚಂದ್ರಿಕೆಗಳಲ್ಲಿ ಇನ್ನೊಂದು ಶಬ್ದವು ಕೇಳಬರುತಿದೆ. ಅದು ನಿನ್ನ ಉದ್ದೇಶಕ್ಕೆ ಸಹಕಾರಿಯಾದುದಲ್ಲ.

ಅಷ್ಟರೊಳು " ಕುಮಾರನೇ! ಪರಕಾಂತೆಯನ್ನು ಸೋಕಿ ವಂಶಕ್ಕೆ ಕಳಂಕವನ್ನುಂಟಾಗಿಸದಿರು " ಎಂಬೊಂದು ಧ್ವನಿಯು ಕೇಳಿಸಿತು.

ಈ ಮಾತುಗಳು ಗಂಗಾತೀರದಲ್ಲಿ ಸಾಯಂಕಾಲದ ದೀಪಾರಾಧನೆಯನ್ನು ಮುಗಿಸಿ ಬರುತಿದ್ದ ಆತನ ತಾಯಿಯದು. ಆ ಮಾತುಗಳನ್ನಾಡಿದವರಾರೋ ಎಂದಾತನು ಹಿಂದಿರುಗಿ ನೋಡುತಲೆ, ಕುಪಿತೆಯಾದ ಆತನ ಜನನಿಯ ಮುಖವು ಕಂಡಿತು. ಆಗ ಆತನಿಗುಂಟಾದ ಲಜ್ಜಾಭಾರವು ನಿಶ್ಚಯವಾಗಿ ಹಿಂದುವಾದವನಿಗೇ ತಿಳಿಯಬೇಕು. ಏನೆಂಬಿರೊ! ಹಿಂದುವಾದವನು ತನ್ನ ತಾಯಿಯಮುಂದೆ ಎಂದೆಂದಿಗೂ ಯೆಳೆಯ ಹುಡುಗನೆ!

ಅಕೃತ್ಯವನ್ನು ಮಾಡುತಿರಲು ತಾಯಿಯ ಕಣ್ಣಿಗೆ ಬಿದ್ದುದರಿಂದ ಮುಖವನ್ನು ಬಗ್ಗಿಸಿ ನೆಲವನ್ನು ನೋಡತ ತಲೆಯೆತ್ತಿ ನೋಡಲಾರದೆಯೆ ಹೋದನು.

ಆದರೂ ಶಕ್ತಿಯ ಸಾಹಸವು ಸಮಯದಲ್ಲಿ ಕೆಲಸಕ್ಕೆ ಬಂದಿತು. ಆಕೆಯು ನಿರ್ಭಯವಾಗಿ ಎದ್ದುನಿಂತು ಕುಪಿತೆಯಾದ ರಾಜಮಾತೆಯನ್ನು ನೋಡಿ ಕಂಠೋಕ್ತವಾಗಿ ಹೀಗೆ ಹೇಳಿದಳು. " ತಾಯೇ ! ನಾನು ಪರಸತಿಯಲ್ಲ. ನಾನು ರಾಜಕುಮಾರನಿಗೆ ನಿಶ್ಚಯವಾದ ಧರ್ಮಪತ್ನಿಯು. ಬಾಲ್ಯದಲ್ಲಿ ಭಗವಂತನ ಸಾಕ್ಷಿಯಾಗಿ ನಮಗೆ ಮದುವೆಯಾಗಿದೆ. "

ಈ ಮಾತುಗಳನ್ನು ಕೇಳಿದ ತರುವಾಯ ಆಕೆಗೆ ಕೋಪವು ಹೆಚ್ಚಾಗಿ ಗದ್ಗದ ಕಂಠದಿಂದ " ಗಣೇಶಾ ! ಯಾರಿದು ? ಮನೋಹರಲಾಲನ ಕುವರಿಯೋ ? ಎಚ್ಚರಿಕೆ! ನೀನು ಆಕೆಯನ್ನು ಪಾಣಿಗ್ರಹಣ ಮಾಡಿಕೊಂಡೆಯಾದರೆ ಪ್ರತಾಪರಾಯದೇವನ ವಂಶಕ್ಕೆ ಮಿತಿಯಿಲ್ಲದ ನ್ಯೂನತೆಯುಂಟಾಗುವುದು. ಮನೋಹರಲಾಲನ ಸೋದರಿಯು ಅವರ ವಂಶಕ್ಕೆ ಅಪಖ್ಯಾತಿ ತಂದು ದಿನಾಜಪುರದಿಂದ ಹೊರಟುಹೋಗಿರುವಳು. ಅಂತಹನ ಕುವರಿಯೇ? ದಿನಾಜಪುರಾಧಿನಾಥನಾಗುವದಕ್ಕಿರುವ ನನ್ನ ಸುತನಿಗೆ ಪತ್ನಿಯಾಗುವಿಕೆ? ನನ್ನ ದೇಹದಲ್ಲಿ ಪ್ರಾಣಗಳಿರುವವರೆಗೂ ಅಂತಹುದಾಗಬಾರದು. ನೀನು ಆಕೆಯೊಂದಿಗೆ ಯಾವುದಾದರೂ ಸಂಬಂಧವನ್ನು ಕಲ್ಪಿಸಿಕೊಳ್ಳುವುದು ಸರಿಯೆ

ಆದರೆ ಆಕೆಯು ನಿನಗೆ ಧರ್ಮಪತ್ನಿ ಮಾತ್ರವಾಗಬಾರದು. ನಿನಗೆ ನಾಚಿಕೆ ಇಲ್ಲವೇ? ಗಣೇಶಾ ! ಇಂತಹ ಊಹೆಗಳೇಕೆ ಹುಟ್ಟುತಿವೆ? ” ಎಂದು ಮೂದಲಿಸಿದಳು.

ಆಗ ಶಕ್ತಿಗುಂಟಾದ ಅಭಿಮಾನಕ್ಕೆ ಮೇರೆಯಿಲ್ಲ. ಆಕೆಯು ಧೈರ್ಯವು ಮೆರೆಯೆ ತಲೆಯನ್ನು ಮೇಲಕ್ಕೆತ್ತಿ ತನ್ನ ತೀಕ್ಷ್ಣ ವೀಕ್ಷಣಗಳನ್ನು ಸ್ತ್ರೀಯ ಮೇಲೆ ಹಬ್ಬಿಸಿದಾಗ ಕ್ರೋಧ ತಿರಸ್ಕಾರಾಭಿಮಾನಗಳು ಮುಪ್ಪುರಿಗೊಂಡು ತೋರುತಿರಲು “ ಮಹಾರಾಣಿಯೆ ! ನಿನ್ನ ವಂಶೋನ್ನತಿಗೆ ತಕ್ಕಂತೆ ನೀನು ಮಾತಾಡಿರಬಹುದು. ಆದರೆ ನಿನಗೆ ಕೇಳುವುದಕ್ಕೆ ಇಷ್ಟವಿಲ್ಲದಿದ್ದರೂ ಹೇಳಬೇಕಾಗಿದೆ. ಭಗವಂತನು ನ್ಯಾಯವನ್ನು ಮೀರಲಾರನು. ಕರ್ಮಸೂತ್ರಕ್ಕೆ ಬಡವರೆಂದೂ ಬಲ್ಲಿದರೆಂದೂ ಭೇದವಿಲ್ಲ. ಭಗವಂತನು ನ್ಯಾಯವನ್ನು ಮೀರದವನಾದರೆ, ನಾನು ನಿನ್ನ ಮಗನನ್ನು ನಿರ್ಮಲಚಿತ್ತಳಾಗಿ ವರಿಸಿದ್ದುದಾದರೆ, ದಯಾಮಯನಾದ ಈಶ್ವರನೇ ನಿನಗೂ ನನಗೂ ಮನಸ್ತಾಪವನ್ನು ಹರಿಸುವನು. ಈ ದಿನ ನೀನು ನಿರಸನ ಮಾಡುವ ಮನೋಹರಲಾಲನ ವಂಶದೊಳಗಿನ ಅಧಮಾಧಮರಿಗೆ ಮುಂದೆ ಈ ಉನ್ನತ ವಂಶದವರು ಪಾದಾಕ್ರಾಂತರಾಗುವ ದಿನಗಳು ಬಾರದೆ ಹೋಗವು. ಹಾಗೆ ನಡೆಯದಿದ್ದರೆ ಲೋಕದಲ್ಲಿ ಧರ್ಮವು ನಾಶವಾಗಲಿ! ” ಎಂದು ಧಿಕ್ಕರಿಸಿ ನುಡಿದು ಲೋಕಾಂತರದಿಂದ ಬಂದ ದೇವತೆಯೋ, ಎಂಬಂತೆ ಹಿಂದಿರುಗಿ ಆಗಿಡಗಳ ಮರೆಯಲ್ಲಿ ಅಂತರ್ಧಾನವಾದಳು. ಶಾಪಮಾತ್ರ ಸ್ಥಿರವಾಗಿದ್ದಿತು. ಅದಕ್ಕೆ ಮೂಲಕಾರಣರಾದ ತಾಯಿಯೂ ಮಗನೂ ಆ ಭಯಂಕರ ಶಾಪಕ್ಕೆ ಅಂಜುಗೆಯಿಂದ ತತ್ತರಿಸುತ ನಿಂತಿದ್ದರು.



## ಪ್ರಕರಣ ೧೦.

ಬಳಲಿ ಬೇಸರಗೊಂಡು ಶಕ್ತಿಯು ನಡುವಿರುಳೊಳು ನಟ್ಟಡವಿಯಲಿರುವನಳೇತಾದಳು. ಪ್ರಪಂಚವೆಲ್ಲವೂ ಸುತ್ತು ತಿರುಗುತಿರುವಂತೆಯೂ,

ಕಾಲ್ಕೆಳಗಿನ ನೆಲವು ಜಾರಿಹೋಗುತಿರುವಂತೆಯೂ, ಆಕೆಗೆ ಭಾಸವಾಯಿತು. ಇಂತಹ ಸಮಯದಲ್ಲಿ ಹೇಗೆಯೋ ಧೈರ್ಯಾವಲಂಬನೆಯಿಂದ ಒಂದು ಗಿಡದ ಬುಡದಲ್ಲಿ ಕುಳಿತಳು. ಆಕೆಯು ಹುಟ್ಟಿದುದು ಮೊದಲು ಪ್ರಪ್ರಥಮದಲ್ಲಿ ಈಗಲೇ ಮೂರ್ಛೆಯಲ್ಲಿ ಮುಳುಗಿ ನಿಶೀಥಸಮಯದಲ್ಲಿ ಒಂಟಿಯಾಗಿ ಬಿದ್ದು ಹೋದುದು. ಯೌವನದಲ್ಲಿರುವಿಕೆಯಿಂದಲೂ, ದೃಢಶರೀರಿಣಿಯಾದುದರಿಂದಲೂ, ಚೆರವರ ಪ್ರೋತ್ಸಾಹವಿಲ್ಲದಿದ್ದರೂ ಸ್ವಲ್ಪಹೊತ್ತಿಗೆ ಕ್ರಮಕ್ರಮವಾಗಿ ಸ್ಮೃತಿಯುಂಟಾಯಿತು. ಆಕೆಯ ಸುತ್ತಲೂ ಉನ್ನತೋನ್ನತ ವೃಕ್ಷಗಳ ನೆಳಲುಗಳೂ, ಮೇಲೆ ನಕ್ಷತ್ರಗಳೂ, ವಿನಾ ಬೇರೆ ಇನ್ನಾವುದೂ ಕಾಣಿಸದಿದ್ದಿತು. ಮೇಲಿಂದ ಕೆಳಗಿನವರೆಗೆ ನೋಡುತಿರಲು ಆ ರಾತ್ರಿಯ ಅಂದವು ಆಕೆಯ ನೇತ್ರಗಳಲ್ಲಿ ಪ್ರತಿಫಲಿಸುತಿದ್ದಿತು. ಆದರೂ ಅದು ಮಾತ್ರ ಆಕೆಗೆ ಗೋಚರವಾಗುತಿಲ್ಲ. ಅಡವಿಯಲ್ಲಿ ಒಂಟಿಯಾಗಿರುವೆನೆಂಬ ಭಯವೂ ಇಲ್ಲ. ಹೃದಯದಲ್ಲಿ ಜನಿಸಿದ ನಿರಾಶೆಯೊಂದು ಮಾತ್ರ ಆಕೆಗೆ ಗೋಚರಿಸುತಿದ್ದಿತು. ಅಂತಹ ಸ್ಥಿತಿಯಲ್ಲಿ ಆಕೆಯು ಮೆಲ್ಲನೆ ಮೇಲಕ್ಕೆದ್ದು ಆ ಮರಕ್ಕೊರಗಿ ಕುಳಿತು ತನ್ನ ಬಲಗೈಯನ್ನು ನೋಡಿಕೊಂಡ ಕೂಡಲೆ ಆಕೆಯ ಕಣ್ಗಳಿಂದ ಬಾಷ್ಪಗಳದರಮೇಲುದುರಿದುವು. ರಾಜಪುತ್ರನ ಕೊರಳಿಗೆ ಸುತ್ತಬೇಕೆಂದಿದ್ದ ಪುಷ್ಪಮಾಲಿಕೆಯು ಇದುವರೆಗೂ ಆಕೆಯ ಕೈಯೊಳಗಿದೆ. ಅದರಲ್ಲಿರುವ ಪ್ರೇಮವೂ, ವಿಶ್ವಾಸವೂ, ಚಿರಕಾಲ ಅದನ್ನಾಶ್ರಯಿಸಿಕೊಂಡಿದ್ದ ಆಸೆಯೂ ಈ ದಿನದೊಂದಿಗೆ ನಾಶವಾದುದರಿಂದ ಅದೀಗ ನಿಶ್ಚಯವಾಗಿಯೂ ಬಾಡಿಹೋಯಿತು. ಅದನ್ನು ನೋಡಿದಷ್ಟಕ್ಕೂ, ಆಕೆಗೆ ದುಃಖವು ಹೆಚ್ಚಾಗುತ ಬಾಷ್ಪೋದ್ಗಮವು ಅಡಗಿ, ನರಗಳೊಳಗಿನ ನಕ್ತವು ಹೆತ್ತುಕೊಂಡಿತು. ದಿನಾಜಪುರದ ಮಹಾರಾಣಿಯ ಶೂಲದಂತಹ ನುಡಿಗಳನ್ನು ನೆನೆಪಿಗೆ ತಂದುಕೊಳ್ಳುತಿದ್ದಳು. ಆದರೆ ಅವರ ಕಾಠಿಣ್ಯವು ಇನ್ನೂ ಆಕೆಯ ಹೃದಯವನ್ನು ಪೂರ್ತಿಯಾಗಿ ವಿಕಲಪಡಿಸಲಿಲ್ಲ. ಆಕೆಗೆ ಸ್ವಲ್ಪಹೊತ್ತಿಗೆ ಪುನಃ ಧೈರ್ಯವುಂಟಾಗಿ, ಕೋಪಬಂದು, ಹಲ್ಲುಗಳನ್ನು ಕಟಕಟನೆ ಕಡಿದು ಹೂಸರವನ್ನು ಕೈಯೊಳು ಹಿಡಿದು ಕಿತ್ತು ಹೂಗಳೆಲ್ಲಾ

ವನ್ನು ಬೆರಲಿನಿಂದ ಹಿಸುಕಿ, ಕೆಳಗೆ ಬಿಸಾಟು, ಕಾಲಿಂದುಜ್ಜಿ ಭೂಮಿಯ ಮೇಲೆ ತನಗೆ ಪ್ರೀತಿಪಾತ್ರವಾದ ವಸ್ತುವನ್ನು ಕೊಟ್ಟುಕೊನೆಂಬಲ್ಲಿ ಸಾಹಸಪಡಿಸಿದಳೋ, ಎಂಬಂತೆ ಧೂಳಿನಲ್ಲಿ ಕಲಸಿಬಿಟ್ಟಳು. ನಿನ್ನ ಮನಸಿನಲ್ಲಿ ಪುಷ್ಪಿಸಿದ ಅಂದವಾದ ಪುಷ್ಪಗಳು ಪ್ರಾಣಪ್ರಿಯವಾದುವು. ನಿನ್ನ ವಿಶ್ವಾಸ ನಿಧಾನಗಳೂ, ನಿನ್ನ ಆಸೆಗೆ ಆಸ್ಪದಗಳೂ, ಆದ ಅವು ಕಾಲ್ಕೆಳಗೆ ಬಿದ್ದು ನಲುಗಿಹೋಗಿರುವಾಗ "ಪ್ರಾಣೀ! ನಿನ್ನಮನಸ್ಸೆಷ್ಟು ಕಳವಳಪಡುವುದೋ, ಯಾರುಬಲ್ಲರು? ತರುವಾಯ ತುಟಿಗಳನ್ನು ಬಿಗಿಹಿಡಿದು ಅವುಗಳಕಡೆಗೆ ದೃಷ್ಟಿಸಿ ನೋಡುತ ಕುಳಿತುಕೊಂಡಳು. ಆಸಮಯದಲ್ಲಿ ಆಕೆಯಮನಸ್ಸು ತಿಳಿದವರಿಗೆ ಕೂಡ ಆಕೆಗೆ ಸಮಾನವಾದ ಸಂತಾಪವುಂಟಾಗದಿರಲಾರದು.

ಈ ಸಂತಾಪದಲ್ಲಿ ಆಕೆಯ ಕಣ್ಣುಗಳಲ್ಲಿ ಅಶ್ರುಗಳು ತುಂಬಿಕೊಂಡುವು. ಅಧರಗಳು ರಕ್ತಹೀನಗಳಾಗಿ ನಿರಾಸೆಯಿಂದ ಅದರಲಾರಂಭಿಸಿದುವು. ಹೀಗಿರಲು ಆ ಕೋಮಲಾಕಾರವು ನೆಲದಮೇಲುರುಳಿ ಸಂತಾಪದಿಂದ ಗೋಳಾಡುತ ಯೆಳೆಯಮಗುವಿನಂತೆ ಅಳುತಳುತ ಹೀಗೆ ವಿಲಪಿಸತೊಡಗಿದಳು.

" ಎಲೆಲೆ ರಾಜಕುಮಾರನೆ! ಎಲೆಲೆ ರಾಜಕುಮಾರನೆ! ". ನೀನು ಮಾಡಿದ ಕೆಲಸವನ್ನು ನೋಡಿದೆಯಾ? ಎಂದು ಯೆದೆಯನ್ನು ಬಡಿದುಕೊಳ್ಳುತ, ಧ್ವನಿಯನ್ನೆತ್ತಿ— " ಕಟ್ಟಿಡು! ನಿಮ್ಮ ಭ್ರಮೆಯನ್ನೀಗ, ನನಗೆ ಬೇಕಾದುದು ಹಗೆಯನ್ನು ಸಾಧಿಸುವಿಕೆಯೆ! ಹಾ ! ದೈವವೆ! ನನ್ನ ಹಗೆಯನ್ನು ತೀರಿಸು. ಎಂದು ವಿಲಪಿಸುತ ತನ್ನ ಮಾತುಗಳಿಗೆ ತಾನೆ ಬೆಚ್ಚಿಬಿದ್ದು, ನಿರ್ವಿಣ್ಣೆಯಾಗಿ, ನಿರುತ್ತರೆಯಾಗಿ ನಿರ್ಜೀವಪ್ರತಿಮೆಯಂತಿರುತ ದೈವವೆ! ನನ್ನ ಹಗೆಯನ್ನು ತೀರಿಸು! ತೀರಿಸೆಂಬ ಮಾತುಗಳು ಪ್ರತಿಧ್ವನಿಸಿ ಆಕೆಯ ಕಿವಿಗಳಲ್ಲಿ ಬಿದ್ದುವು. "



## ಪ್ರಕರಣ ೧೧.

ಆಕೆಯು ನೆಲದಮೇಲೆ ಅಧೋಮುಖಿಯಾಗಿ ಪುರುಳಾಡುತಿದ್ದಾಗ ಆ

ಕೆಗೊಂಡು ಕೈಸೋಕಿದಂತಾಗಿ ಬೆಚ್ಚು ಬಿದ್ದು "ಯಾರುನೀನು ? ಎಂದು ಕೋಪದಿಂದ" ಕೇಳಿದಳು. "ನಾನೊಬ್ಬ ಮಹಮದೀಯನು."

ಅಂತಹ ಅರ್ಧರಾತ್ರಿಯಲ್ಲಿ ಅಡವಿಯ ನಡುವೆ ವೊಂಟಿಯಾಗಿರುವಾಗ ಅನ್ಯನೂ, ಅಸ್ಪೃಷ್ಟನೂ ಆಗೇ ಅಲ್ಲ. ಆ ಕಾಲಗಳಲ್ಲಿ ಹಿಂದೂ ಜನರಿಗೆ ಅತ್ಯಂತ ಭೀತಿಯನ್ನುಂಟುಮಾಡುತಿದ್ದವನೂ, ಆದ ತುರಕರವನನ್ನು ನೋಡಿ ಅಂಜಿಕೊಳದಿರುವಿಕೆಯು, ಶಕ್ತಿಯಂತಹ ಧೈರ್ಯಶಾಲಿನಿಯಾದ ವೀರನಾರಿಗಲ್ಲದೆ ಮತ್ತಾರಿಗೆ ಸಂದೀತು? ಆಕೆಯ ಗುಂಡಿಗೆಯು ಬಲುಗಟ್ಟಿಯಾದುದು. ಆಪನ್ನಿಮಗ್ನವಾದ ಆಕೆಯ ಅವಸ್ಥೆಯನ್ನು ಕುರಿತು ತನ್ನನ್ನು ತಾನೆ ಕಾಪಾಡಿಕೊಳ್ಳುವ ಸ್ಥಿತಿಯಲ್ಲಿದ್ದುದರಿಂದ ಅನ್ಯನನ್ನು ನೋಡಿ ಅಂಜಿಕೊಳಲಿಲ್ಲವಾದರೂ, ತುರಕನ ಮೈಗೆ ತನ್ನ ಕರಸ್ಪರ್ಶವಾಯಿತೆಂದು ಮಾತ್ರ ಆಕೆಗೆ ಅಸಹ್ಯವುಂಟಾಗಿ ಕೈಯನ್ನು ಹಿಂದಕ್ಕೆಳೆದುಕೊಂಡು "ಎಲೆ ಪಾಪಿಯೆ! ನನ್ನನ್ನೇಕೆ ನೋಕಿದೆ? ನಿನಗೇಕಿಂತಹ ಸಾಹಸವು?" ಎಂದು ಗದ್ದಿಸಿ ನುಡಿದಳು.

ಅವನು ಫಕೀರನಂತೆ ಬಿಳಿಯ ಉಡುಪುಗಳನ್ನೂ ಕೊರಲಲ್ಲಿ ಮಣಿಗಳ ಹಾರವನ್ನೂ ಧರಿಸಿದ್ದನು. "ನೀನು ಮೂರ್ಛಾಕ್ರಾಂತಳಾಗಿರುವೆಯೆಂದೂಹಿಸಿದೆನು" ಯೆಂದು ಅವನು ಬದುಲು ಹೇಳಿದನು.

ನಾನು ಮೂರ್ಛಿತಳಾದರೆ ನಿನಗೇನು ? ನೀನು ನನ್ನನ್ನೇಕೆ ಮುಟ್ಟಿಕೊಳ್ಳಬೇಕು? ಎಂದು ಶಕ್ತಿಯು ಪುನಹ ಮೂದಲಿಸಿದಳು. ಅವನು ಮರದ ಬುಡದಲ್ಲಿ ಕುಳಿತು ತನ್ನ ತಲೆಯಪಾಗನ್ನು ಬಿಚ್ಚಿ ಪುನಹ ಸುತ್ತಿಕೊಳುತ ಮೆಲ್ಲನೆ ಹೀಗೊಂದು ಸಮಾಧಾನವನಾರಂಭಿಸಿದನು. "ಒಬ್ಬನಾದ ದೇವರು ಮಾನವರೆಲ್ಲರನ್ನೂ ವೊಂದೇ ಬಗೆಯಾಗಿ ಸೃಜಿಸಿದನು. ನೀನೂ, ನಾನೂ, ಜೀವಕೋಟಿಯೊಳಗೆಲ್ಲ ಪ್ರಾಣಿಗಳೂ, ಕೂಡ, ಆತನ ಮಕ್ಕಳೆ! ನೀನು ಅಷ್ಟು ಸ್ವಾತಿಶಯದಿಂದೇಕೆ ದೂರವಾಗಿ ತೊಲಗುವೆ? "

"ಓರೆಯಾಗಿರು, ನೀನು ಪುರುಷನು. ನಾನು ಹೆಂಗುಸು. ನೀನು ಮಹಮದೀಯನು. ನಾನು ಹಿಂದೂ. ನೀನು ಅಧಮ ಜಾತಿಯವನು.

ನಿನ್ನ ಮತವು ಅಧಮಾಧಮವು. ನನ್ನ ಜಾತಿಯೂ, ಮತವೂ, ಉತ್ತಮ ವಾದುವು. ನಿನ್ನನ್ನೂ, ನನ್ನನ್ನೂ ಒಬ್ಬದೇವರೇ ಸೃಷ್ಟಿಸಿರಬಹುದು; ಆದರೆ ಒಂದೇ ಮಾದರಿಯಾಗಿ ಮಾತ್ರ ಸೃಷ್ಟಿಸಿರಲಿಲ್ಲ. ನಿನಗೂ, ನನಗೂ ಸಾಟಿಯೆಲ್ಲಿಯದು? " ಎನಲು ಆತನು ನಿಂದಾಗರ್ಭವಾಗಿ ನಸುನಕ್ಕು " ಭಗವಂತನು ನಿನಗೊಂದು ಧರ್ಮವನ್ನೂ, ನನಗೊಂದು ಧರ್ಮವನ್ನೂ ನಿರ್ಣಯಿಸಿದನೇ? ಬಡವರೆನದೆ ಬಗ್ಗರೆನದೆ ಎಲ್ಲರನ್ನೂ ಪರಿಪಾಲಿಸುವ ಶಾಶ್ವತನಾದ ಪರಮಾತ್ಮನೊಬ್ಬನೇ. ಆ ಪರಮಾತ್ಮನಿಗೆ ಹಿಂದುವೆಂಬದಾಗಿಯೂ; ಮುಸಲ್ಮಾನನೆಂಬದಾಗಿಯೂ, ಭೇದವಿಲ್ಲ. ಸರ್ವಶಕ್ತಿಯುಳ್ಳ ನ್ಯಾಯುವೊಂದೇ ಎಲ್ಲವನ್ನೂ ನಡೆಸುತಿದೆ. ಭಗವಂತನ ಬಳಿ ಅಂತಹ ಭೇದಗಳಿಲ್ಲ. "

ಈ ಮಾತುಗಳೆಷ್ಟು ಆಶ್ಚರ್ಯಕರಗಳಾಗಿರುವುವೋ ನೋಡುವಿರಾ? ವೊಂದು ಗಂಟೆಗೆ ಮುಂಚಿತವಾಗಿ ಆಕೆಯೆ ಇದನ್ನು ನುಡಿದಿರುವಳು. ತನ್ನ ಬಾಯೊಳು ತಾನೇ ಉಚ್ಚರಿಸಿದ್ದ ಶಾಪವಚನಗಳಿಗಿವು ಪ್ರತಿಧ್ವನಿಯಂತೆಕೇಳ್ಬರುತಿವೆ. ತನ್ನ ಹೃದಯಮರ್ಮಗಳನ್ನು ತಿಳಿದಿರುವವನಂತೆ ಇರುವ ಈ ಮಾಯಾವಿ ಯಾರಿದ್ದೀತು? ವೊತ್ತವೊದಲು ಇವನು ಪಕೀರನ ವೇಷದಿಂದ ತಿರುಗುತ ದಾರಿದೋಚುವವನಲ್ಲ ಒಬ್ಬನಾಗಿರ ಬಹುದೆಂದೆಣಿಸಿದಳು. ಆದರೆ, ಈಗ, ನಿಜವಾದ ಜ್ಞಾನಿಯೋ ಆಗಿರಬಹುದೆಂದು ಆಕೆಗೆ ತೋರಿತು. ಆತನ ಮಾತುಗಳಿಗೆ ಆಕೆಯು ಮನಸ್ಸು ಕಳವಳಕ್ಕೆ ಸಿಕ್ಕಿ ಸ್ವಲ್ಪ ಹೊತ್ತು ಯೋಚಿಸಿ, " ಅಮನೆ ನಿಶ್ಚಯುವಾದುದಾದರೆ ಮಹಾತ್ಮರೇ ! ತಮಗೀ ಭೇದಬುದ್ಧಿಯು ಯೆಲ್ಲಿಂದ ಬಂದಿತು? "

" ಅವಿದ್ಯೆಯಿಂದ ಬಂದಿತು. ಮಾಯೆಯಿಂದ ಬಂದಿತು. "

" ಏತಕೀ ಮಾಯೆಯು? ಭಗವಂತನು ಸರ್ವಶಕ್ತನಾಗಿರುವುದಾದರೆ ಬಾಧೆಗೆಸಿಕ್ಕಿ ವೊದ್ದಾಡುತಿರುವ ಮಾನವರಿಗೀ ಮಾಯೆಯನ್ನೇಕೆ ತೊಲಗಿಸಬಾರದು ? "

"ಸೃಷ್ಟಿ ಸ್ಥಿತಿಲಯಗಳಿಗೂ, ಆತನ ಉದ್ದೇಶ್ಯಗಳನ್ನು ನೆರವೇರಿಸಿ

ಕೊಳುವುದಕ್ಕೂ, ಈ ಮಾಯೆಯು ಅತ್ಯವಶ್ಯಕವು. ಅದಿಲ್ಲದಿದ್ದರೆ ಲೋಕ ವಿರಲಾರದು. "

" ಹಾಗಾದರೆ ಮಾನವನು ಹಿಂಸೆಪಡಬೇಕೆಂಬುದು ಭಗವತ್ಸಂಕಲ್ಪವೇನು? ಇದು ಕ್ರೌರ್ಯವಲ್ಲವೆ? ಹಾಗಾದರೆ ಆತನು ದಯಾಪರನೆಂತಾಗುವನು? "

" ಸ್ಥೈರಿಸು! ಸ್ಥೈರಿಸು! ಸಮಸ್ತವೂ ಆತನೇ. ದಯೆ, ನಿರ್ದಯೆ ಇವೆರಡೂ ಆತನ ಸ್ವರೂಪವೆ. ಧರ್ಮವನ್ನು ತಪ್ಪದೆ ನಡೆದೆಯಾದರೆ; ದಯೆಗೆ ಪಾತ್ರಳಾಗುವೆ. ಇಲ್ಲದಿದ್ದರೆ ದುಃಖಗಳ ಪಾಲಾಗುವೆ. "

ಶಕ್ತಿಗೆ ಆತನು ಹೇಳಿದುದೆಲ್ಲವೂ ಚೆನ್ನಾಗಿ ಬೋಧೆಗೆ ಬರಲಿಲ್ಲ. ಆಕೆಯು ಮನೋವ್ಯಥೆಯು ತೀವ್ರವಾಗಿ ಬಾಧಿಸುತಿದ್ದಿತು. ಆಕೆಯ ಮನಸ್ಸಿನೊಳುಂಟಾದ ಊಹೆಯು ಸ್ತಿಮಿತವಾಗಿರಲಾರದೆ ತಾನಾಗಿ ಮೇಲಕ್ಕೆಬಂದು, ಭಗವಂತನಿಗೆ ಕಾರ್ಪಣ್ಯವೂ ಕೂಡ ಇರುವುದೆ? ಆತನೇ ಸಮಸ್ತವೂ ಆಗಿರುವಪಕ್ಷದಲ್ಲಿ ಕಾರ್ಪಣ್ಯವೂ ಕೂಡ ಆತನೇ ಆಗುವನಲ್ಲವೆ? ಅದು ಅಷ್ಟು ಪಾಪ ಹೇಗಾದೀತು? "

" ಅದು ಅಂತಹ ಘೋರಪಾತಕ ವಾಗುವ ಪಕ್ಷದಲ್ಲಿ ಭಗವಂತನು ಅಂತಹ ಭಾವನೆಗಳನ್ನು ಮಾನವರಿಗೇತಕುಂಟು ಮಾಡಬೇಕು? ಅನ್ಯಾಯಕ್ಕೆ ಶಿಕ್ಷೆಯಿಲ್ಲದೆ ಇರುವುದಾದರೆ ಭಗವಂತನ ಬಳಿ ನ್ಯಾಯವೆಲ್ಲಿಯದು? ಅನ್ಯಾಯ ಮಾಡಿದವರ ಮೇಲೆ ಹಗೆಯನ್ನು ಸಾಧಿಸುವುದೇ ಪ್ರತಿಕ್ರಿಯೆಯು. "

" ಕಾರ್ಪಣ್ಯವೇ! ದೈವವೇ! ಅದುವೇ ನನಗೆ ಬೇಕಾದುದು. ಹಗೆಯನ್ನು ಸಾಧಿಸುವುದೇ ನನಗೆ ಬೇಕಾದುದು. ಈ ಲೋಕದಲ್ಲಿ ಅನ್ಯಾಯಕ್ಕೂ ಕೃತಘ್ನತೆಗೂ ಪ್ರತಿಕ್ರಿಯೆಯುಂಟೇ? " ಎಂದು ಶಕ್ತಿಯು ಎಣಿಕೆಯಲ್ಲಿಲ್ಲದಿದ್ದವಳಾದರೂ ನುಡಿದಳು.

ಅದಕ್ಕೆ ಫಕೀರನು " ನರಹತ್ಯೆಯೇ? ನರಹತ್ಯಪಾತಕವು ನಶಿಸಲಿ! " ಎಂದು ಭವಿಷ್ಯದ್ವಿದನಂತೆ ನುಡಿದನು.

ಅದರಮೇಲೆ ಉದಾರ ಬುದ್ಧಿ ವೈಭವವುಳ್ಳ ಶಕ್ತಿಗೆ ಕೋಪಬಂದು ಆ

ತುರುಷ್ಕನು ವುಂಟಾಗಿಸಿದ ವ್ಯೂಹಗಳು ಆಕೆಗೆ ದಾರುಣಗಳಾಗಿ ತೋರಿ "ಹಾಗಲ್ಲ ನಾನು ಅಪೇಕ್ಷಿಸುವುದು; ನಾನು ಆತನ ಸಾವನ್ನು ಕೋರಲಿಲ್ಲ. ಕೋರುವುದಿಲ್ಲ, ಆತನ ಹೃದಯ, ಆತನ ಪ್ರೇಮ, ಇವುಗಳೇ ನನಗೆ ಬೇಕು. ಯೆಂದಿಗಾದರೂ ಗಣೇಶದೇವನು ತನ್ನ ಸರ್ವಸ್ವವನ್ನೂ ನನಗೆ ಸಮರ್ಪಿಸುವವನಾಗಬೇಕು. ತನ್ನ ತಾಯನ್ನೂ, ರಾಜ್ಯವನ್ನೂ, ಕುಟುಂಬವನ್ನೂ, ಭಾಗ್ಯವನ್ನೂ, ಯೆಲ್ಲವನ್ನೂ ನನಗೆ ಅರ್ಪಿಸಬೇಕು. ನಾನು ಆತನನ್ನು ಈ ರೀತಿಯಾಗಿ ಸಾಧಿಸಬೇಕೇ ಅಲ್ಲದೆ ಬೇರೆ ಯಾವುದೂ ನನಗೆ ಬೇಕಾಗಿರುವುದಿಲ್ಲ" ಈ ಮಾತುಗಳಿಗೆ ಆ ಮಹಮದೀಯನು ನಸುನಕ್ಕು "ಲಕ್ಷೋಪಲಕ್ಷ ಮಂದಿಯ ಹೃದಯಗಳನ್ನು ತನ್ನ ಕಾಲ್ಕೆಳಗೆ ಅಡಗಿಸಿ ತುಳಿದು, ಚಕ್ರವರ್ತಿಗಳನ್ನು ಪಾದಾಕ್ರಾಂತರನ್ನಾಗಿ ಮಾಡಿಕೊಳ್ಳುವ ಶಕ್ತಿಯೇ ? ಇಂತಹ ಅಲ್ಪ ವರವನ್ನು ಕೋರುತಿರುವಳು" ಎಂದು ನುಡಿದನು.

ಇಂತಹ ಮಾತುಗಳನ್ನು ಅನೇಕ ಸಲವಾಗಿ ಜ್ಯೋತಿಷ್ಕರು ಯೇಕರೀತಿಯಾಗಿ ಶಕ್ತಿಯ ಅದೃಷ್ಟವನ್ನು ಕುರಿತು ಘನತಮವಾಗಿ ನುಡಿಯುತ ಬಂದರು. ಮನೋಹರಲಾಲನ ಮಗಳು, ಹದಿನೆಂಟನೆಯ ವರುಷದಲ್ಲಿ ರಾಣಿಯಾಗುವಳೆಂದು ಆಕೆಯ ಜಾತಕದಲ್ಲಿ ಬರೆಯಲ್ಪಟ್ಟಿದೆ. ಅದು ನಡೆಯುವುದೆಂದು ಆತನಿಗೆ ಸಂಪೂರ್ಣವಾದ ಭರವಸೆ ಇದ್ದುದರಿಂದಲೇ ಆತನು ಆಕೆಗಿದುವರೆಗೂ ಮದುವೆಯನ್ನು ಮಾಡದವನಾದನು. ಈ ಕ್ಷಣದವರೆಗೂ ಶಕ್ತಿಗೂ ಕೂಡ ಈ ತೆರದ ನಂಬುಗೆಯು ಗಟ್ಟಿಯಾಗಿದ್ದಿತು. ಆದರೆ, ಅದು ಯಿಂದಿಗೆ ಹಾರಿಹೋಯ್ತು. ಈಗ ಪುನಹ ಆ ಮಾತುಗಳನ್ನು ಕೇಳಲು ಕೋಪ ಬಂದು, " ಸಾಕು! ಇದು, ಇಷ್ಟಕ್ಕೇ ಸಾಕು. ನಾನಿದನ್ನು ಕೇಳಬೇಕೆಂದಪೇಕ್ಷಿಸಲಿಲ್ಲ, ಮಹಾತ್ಮರಾದವರು ಯಿಂತಹ ಅಧಿಕ್ಷೇಪಕರವಾದ ಮಾತುಗಳನ್ನಾಡಬಾರದು. ತಾನೊಲಿದೊಬ್ಬಾತನನ್ನು ವಶಪಡಿಸಿಕೊಳಲಾರದ ಅಬಲೆಯು ಅನೇಕರನ್ನು ಹೇಗೆ ವಶಪಡಿಸಿ ಕೊಳ್ಳಲಾಪಳು ?"

"ನಾನು ಅಧಿಕ್ಷೇಪಿಸುವುದಿಲ್ಲ. ಕೆಲ ಮಂದಿಯನ್ನು ವಿಚಾರಸಾಗೆ

ರದಲ್ಲಿ ಮುಳುಗಿಸುವುದಕ್ಕೂ, ಕೆಲಮಂದಿಯನ್ನು ಸಂತೋಷಸಾಗರದಲ್ಲಿ ತೇಲಾಡಿಸುವುದಕ್ಕೂ ಭಗವಂತನು ನಿನ್ನನ್ನು ಸೃಷ್ಟಿಸಿರುವನು.''

ಶಕ್ತಿಯು ವಿಕಟವಾಗಿ ನಕ್ಕು, ನಿರಾಸೆಯನ್ನು ತೋರಿ ''ಯಾವುದನ್ನೋ ಮಾಡಬಲ್ಲೆನೆಂದು ಮೊದಲು ಅಂದುಕೊಳತಕ್ಕವಳೆ; ಆದರೆ ನನ್ನ ಮಹದಾಸೆಯ ಮೂಹೆಗಳೆಲ್ಲವೂ ಈದಿನ ರಾತ್ರಿ ಕಳೆಯಿತು. ಬಡಹುಡಿಗಿಯಾದ ನಾನು ರಾಣಿಯಾಗುವೆನೆಂತು ?'' ''ಮತ್ಸ್ಯಗಂಧಿಯು ರಾಜಪತ್ನಿಯಾದಳೆಂತು ?'' ಎಂದ ಕೂಡಲೆ ಹಿಂದೂ ಗ್ರಂಥಗಳಲ್ಲಿಯೂ, ಆತನಿಗೆ ಪರಿಚಯ ಮುಂಟೆಂಬುದನ್ನು ಕುರಿತು ಆಶ್ಚರ್ಯ ಚಕಿತಳಾಗಿ ಆತನಲ್ಲಿ ಹೆಚ್ಚಾಗಿ ಭರವಸೆಯುಳ್ಳವಳಾದಳು. ಆತನು ಅಷ್ಟರಲ್ಲಿ ಸುಮ್ಮನಾಗದೆ, ''ನಾನು ದಿವ್ಯದೃಷ್ಟಿಯಿಂದ ನೋಡಿದೆನು. ವಂಗದೇಶವೆಲ್ಲವೂ ಈಮೂಲೆಯಿಂದಾಮೂಲೆಯವರೆಗೂ ನನ್ನ ಕಣ್ಣಿಗೆ ಕಾಣುತಿದೆ. ಅದಕ್ಕೆ ಚಕ್ರವರ್ತಿನಿಯಾಗಿ ಶಕ್ತಿಯು ಪರಿಪಾಲಿಸುತಿರುವುದು ನನ್ನ ದೃಷ್ಟಿಪಥವಲ್ಲಿದೆ'' ಅಂದನು. ಪಖೀರನು ಯೆಲ್ಲವನ್ನೂ ತಿಳಿದಂತೆಯೇ ನುಡಿದನು. ಈಗಡಿಬಿಡಿಯಲ್ಲಿ ಶಕ್ತಿಯ ದುಃಖವೆಲ್ಲವೂ ಮರೆತುಹೋಗಿ '' ಶಕ್ತಿಯು ವಂಗದೇಶವೆಲ್ಲಕ್ಕೂ ಚಕ್ರವರ್ತಿನಿಯೇ? ಎಲೆ ಪಖೀರನೇ! ನನಗೆ ಅಂತಹ ಮಹತ್ತೋರಿಕೆಗಳಿಲ್ಲ. ಅದಕ್ಕೂ ಬಹಳ ಕಡಮೆಯಾದ ಅಪೇಕ್ಷೆಯೇ ನನಗಿದ್ದಿತು. ಅದು ಕೂಡ ಇಂದಿನೊಂದಿಗೆ ನಿರರ್ಥಕವಾಗಿಬಿಟ್ಟಿತು. ''

'' ಇದಕ್ಕಿಂತಲೂ ಮಹತ್ವದವಿಯೇ ಅದು? ವ್ಯರ್ಥವಾದುದು. ಸಾಮಾನ್ಯವಾದ ಮೊಲುಮೆಗಿಂತಲೂ, ಘನತರ ಕಾರ್ಯಗಳನ್ನೂ ಹಿಸಬೇಕಾದವಳೆಂದು ನಿನ್ನ ಗ್ರಹಗಳು ತಿಳಿಸುತಿವೆ. ಸುಲ್ತಾನನ ಕುಮಾರನು ಮೋಹಿಸಿ ನಿನ್ನನ್ನು ರಾಣಿಯನ್ನಾಗಿ ಪರಿಗ್ರಹಿಸಲು ಅಪೇಕ್ಷಿಸಿರುವನು. ನಾನು ಆತನ ದೂತನು. ''

ಇದುವರೆಗೆ ಆತನಾರೆಂಬುದು ಶಕ್ತಿಗೆ ತಿಳಿದಿರಲಿಲ್ಲ. ಆಕೆಯ ಮನಸ್ಸೆಲ್ಲವೂ ಗಣೇಶದೇವನಲ್ಲಿಯೇ ಲಗ್ನವಾಗಿದ್ದುದರಿಂದ, ಜೇರೊಚ್ಛಾತನನ್ನು ನೆನೆಬಿನಲ್ಲಿಯೂ ಅರಿಯದೆ, ಈ ಜ್ಯೋತಿಷವನ್ನು ನಂಬದೆ ಇದ್ದಳು.

ಆದರೆ ಮತ್ತೊಬ್ಬನ ಸಂಗತಿಯನ್ನು ಹೇಳುತಿರುವುದರಿಂದ, ಆಕೆಗೆ ಆತನ ಮೇಲೆ ಅನುಮಾನವು ಕಳೆದು ಹೋಯಿತು. ರಾಷ್ಟ್ರವೆಲ್ಲವೂ ತನಗೆ ಪಾದಾಕ್ರಾಂತವಾಗಿರುವಿಕೆಯೂ, ತಾನಿನ್ನು ದಿನಾಜಪುರದ ರಾಜನಿಂದಲೂ, ಆತನ ತಾಯಿಯಿಂದಲೂ, ಪರಿಭವಿಸಲ್ಪಟ್ಟ ಮನೋಹರಲಾಲನ ಮಗಳಾಗದೆ, ತನ್ನನ್ನು ತಿರಸ್ಕರಿಸಲು ಯೋಚಿಸಿದವರನ್ನು ಪರಿಪಾಲಿಸುವ ರಾಣಿಯಾಗಿರುವೆನೆಂಬ ವೂಹೆಯು ಕಣ್ಣಿಗೆ ಕಟ್ಟಿದಂತಾಯಿತು. ಈ ವೂಹೆಯು ಚಕ್ರವರ್ತಿನಿಯಾಗುವೆನೆಂಬುವುದಕಿಂತಲೂ, ಮಹದುದ್ದೇಶ್ಯವನ್ನು ಆಕೆಗೆ ಉಂಟುಮಾಡಿತು. ಆಕೆಯ ಮನಸಿನಲ್ಲಿ ಚಿಕ್ಕಂದಿನಿಂದಲೂ ಯೆರಡು ಕೋರಿಕೆಗಳು ಮೊಂಡಾಗಿದ್ದುವು. ರಾಜಕುಮಾರನಲ್ಲಿ ಪ್ರೇಮವೊಂದು. ಮಹದೈಸೆಯನ್ನು ಅನುಭವಿಸಬೇಕೆಂಬ ಮಹತ್ಕೋರಿಕೆಯೊಂದು. ಇವೆರಡು ಕೋರಿಕೆಗಳು ಗಾಢತರವಾಗಿ ಬೇರೂರಿದ್ದಿತು. ಇನ್ನು ಗಣೇಶದೇವನ ಮೇಲಣಾಸೆಯು ನಿರರ್ಥಕವಾಯಿತು. ಆದರೆ ವುನ್ನತ ಪದವಿಯು ಮಾತ್ರ ಕೈಯೆತ್ತಿ ಕರೆದು ಸ್ವಾಗತವನ್ನು ಕೊಡುತಿದೆ. ತಾನಿದನ್ನು ಅಂಗೀಕರಿಸಬೇಕೆ? ನಿರಾಕರಿಸಬೇಕೆ! ಇದಕ್ಕೆ ತಕ್ಷಣವೇ ಪ್ರತಿನುಡಿಯದೆ, ಚೆನ್ನಾಗಿ ಆಲೋಚಿಸಿ ಕೊನೆಗೆ ಹೀಗೆಂದಳು.

"ಆತನು ಮಹಮದೀಯನು, ನಾನು ಹಿಂದೂ ಸ್ತ್ರೀಯು."

"ಅದು ನಿನ್ನ ಮನದೊಳಗಿರುವ ಬರೀ ಭ್ರಮೆಯು. ಭಗವಂತನೊಬ್ಬನೆ! ಹಿಂದೂಜನಾಂಗವೂ, ಮಹಮದೀಯ ಜಾನಪದವೂ ಆತನನ್ನೊಂದೇ ಬಗೆಯಿಂದೆಣಿಸುವುದು. ಹೆಸರುಗಳೂ, ಪದ್ಧತಿಗಳೂ ಮಾತ್ರ ಬೇರೆಬೇರೆ. ಅದೇಕಾರಣದಿಂದ ಮತ್ತೊಬ್ಬಾತನನ್ನು ನಿರಾಕರಿಸುವಿಕೆಯು ಪಾತಕವೂ, ಮತವಿರುದ್ಧವೂ, ಅಹುದು. ಶಕ್ತಿಯು ಈ ಮಾತುಗಳನ್ನು ಕೇಳದೆ ಇನ್ನೂ ತಾನು ಪ್ರೀತಿಸಿದವನನ್ನೇ ಯೆಣಿಸುತಿದ್ದಳು. ಆತನಿಲ್ಲದ ವಿಭವವೇತಕೆ? ಪ್ರಭಾವವೇಕೆ? ಎಂದುಯೋಚಿಸುತ ಮೆಲ್ಲನೆ ಹೀಗೆಂದಳು.

"ನನಗೆ ಗಣೇಶದೇವನೇ ಬೇಕು."

"ಆತನು ನಿನಗೆಂದೆಂದಿಗೂ ಲಭಿಸಲಾರನು."

" ಎಂದೆಂದಿಗೂ?—— "

" ಎಂದೆಂದಿಗೂ ಲಭಿಸುವುದಿಲ್ಲ. "

" ನೀನು ಬಲ್ಲೆಯಾ? "

" ಗಣೇಶದೇವನು ನಿನ್ನನ್ನೆಂದೆಂದಿಗೂ ಮದುವೆ ಯಾಗಲಾರನು. ನೋಡಿಕೊಳ್ಳು. ನಿನಗೆ ವಂಗ ರಾಜ್ಯವು ಸಿದ್ಧವಾಗಿರುತ್ತದೆ. ನೀನು ಸುಲ್ತಾನಿಯಾಗಿ ವಂಗದೇಶವೆಲ್ಲವನ್ನೂ ಪರಿಪಾಲಿಸುವೆಯಾ? ಇಲ್ಲದೆ—"

ಎಂದು ಆತನು ಮಾತನ್ನು ಮುಗಿಸುವುದಕ್ಕೆ ಮುಂಚಿತವಾಗಿಯೇ ಆಕೆಯು ಆ ಸ್ಥಳವನ್ನು ಬಿಟ್ಟು ಹೊರಡಲನುವಾಗಿ ಯೆದ್ದು ನಿಂತು "ಇನ್ನು ಸಾಕು. ನಾನು ಹೊರಡಬೇಕು. ನಿನಗೆ ನಾಳೆಯು ದಿನ ಸಮಾಧಾನವನ್ನು ಹೇಳುವೆನು. "



## ಪ್ರಕರಣ ೧೨.

ಆ ವನಮಧ್ಯದಲ್ಲಿ ಒಂಟಿಯಾಗಿ ಹೋಗುತಿದ್ದ ಆಕೆಯ ಸ್ಥಿತಿಯು ಭಯಾವಹ ವಾಗಿದ್ದಿತು. ಕಣ್ನೋಟದ ಮೇರೆಯುದ್ದಕ್ಕೂ ನಿರ್ಜನಪ್ರದೇಶವೇ ಅಲ್ಲದೆ ಏನೊಂದೂ ಕಾಣ್ಬರದೆ, ಪಿಶಾಚಗಳ ನೆಳಲು ತನ್ನ ಮೇಲೆ ಪ್ರಸರಿಸಿ ಹಿಂಬಾಲಿಸುತ " ನಿನಗೆಂದೆಂದಿಗೂ ಆತನು ಲಭಿಸಲಾರನು. " ಎಂದು ಶಕುನ ಹಕ್ಕಿಯು ನುಡಿಯುತಿರುವಂತೆ ಆಕೆಗೆ ಕೇಳುತಿದ್ದಿತು. ಶಕ್ತಿಯು ಧೈರ್ಯವನ್ನು ತಾಳಿ ಬೇಗಬೇಗ ನಡೆದು ಹೋಗುತಿದ್ದಳು. ಗಿಡಗಳ ಕೊಂಬೆಗಳ ಸಂದಿನೊಳಗಿಂದ ದೂರದೊಳಗೆ ಮಿಣುಗುವ ದೀಪ ವೊಂದು ಕಾಣ್ಬರುತಿದ್ದಿತು. ಅದರ ಕಡೆಗೆ ಆಕೆಯು ಅಡಿಯಿಡಸಾಗಿದಳು.

ಆ ವನದ ಗಡಿಯ ಮೂಲೆಯಲ್ಲಿ ಶಿಥಿಲವಾದ ಹಳೆಯ ಕಾಳಿಕಾಲಯ ಒಂದುಂಟು. ಶಕ್ತಿಯು ಅಲ್ಲಿಗೆಹೋಗಿ ಬಾಗಿಲು ತೆರೆದಿದ್ದುದನ್ನುನೋಡಿ ಅದರಲ್ಲಿ ಪ್ರವೇಶಿಸಿದಳು. ಆದರೆ ಆ ದೇವಾಲಯದಲ್ಲಿ ವಿಗ್ರಹವಾವುದೂ

ಇಲ್ಲ. ಅಲ್ಲಿ ಮಿಣಮಿಣುಕೆಂದು ಬೆಳಗುತಿದ್ದ ಒಂದು ದೀಪದಬೆಳಕಿನಲ್ಲಿ ಕೃಷ್ಣಾಜಿನದಮೇಲೆ ಆಸೀನೆಯಾಗಿದ್ದ ಒಬ್ಬ ಸ್ತ್ರೀಯನ್ನು ಮಟ್ಟಿಗೆ ನೋಡಿದಳು. ಆಕೆಯು ಸನ್ಯಾಸಿನಿಯ ವೇಷಧಾರಿಣಿಯು. ಶಾಂತ ದಾಕ್ಷಿಣ್ಯಗಳು ಆಕೆಯ ಮುಖದಲ್ಲಿ ಹೊಳೆಯುತಿದ್ದುವು. ಆಕೆಯು ಆ ಗುಡಿಯೊಳಗಿನ ಗುರುವು. ಆಕೆಯು ಶಕ್ತಿಯನ್ನು ನೋಡಿ ಕರುಣದಿಂದ "ನೀನೇಕೆ ಬಂದೆಯೋ, ಯೆಂದು ಯೋಚಿಸುತಿರುವೆನು; ಇಷ್ಟು ದಿನಗಳವರೆಗೆ ಯೆಲ್ಲಿದ್ದೆಯೋ; ನೀನು ಈ ಅವೇಳೆಯಲ್ಲಿ ಇಷ್ಟ ಸ್ವೇಚ್ಛೆಯಾಗಿ ಸಂಚರಿಸುವೆಯೆಂದು ನಾನೆಂದೂ ಊಹಿಸಿರಲಿಲ್ಲ. ಹಾಗಾಗಿದ್ದರೆ ನಿನ್ನನ್ನು ಇಲ್ಲಿ ನಿಲಿಸಲಾರದವಳಾಗುವೆನು."

ಶಕ್ತಿಯ ತಂದೆಯು ಈ ಮಠದಲ್ಲಿ ಕಾಲಗತಿಯನ್ನು ಹೊಂದುವಾಗ್ಗೆ ಎಳೆಪಸುಳೆ ಶಕ್ತಿಯನ್ನು ಮಠಸ್ಥಳಿಗೆ ವೊಪ್ಪಿಸಿದ್ದನು. ಆದುದರಿಂದ ತನ್ನನ್ನು ಮೂದಲಿಸಿದುದಕ್ಕೆ ಯೇನೊಂದೂ ಹೇಳದೆ "ರಾಜಕುಮಾರನಿಲ್ಲಿಗೆ ಬಂದಿರುವನೆ" ಎಂದು ಮಾತ್ರ ಮೆಲ್ಲನೆ ಸಮಾಧಾನವನ್ನು ಹೇಳಿದಳು. ಆ ಸನ್ಯಾಸಿನಿಯು ಆಲಸ್ಯಕ್ಕೆ ಕಾರಣವನ್ನೂಹಿಸಿ ರಾಜಕುಮಾರನಾರೋ ಎಂಬುದನ್ನು ಗ್ರಹಿಸಿಯೂ, "ರಾಜಕುಮಾರನಾರು?" ಎಂದು ಕೇಳಿದಳು.

"ಆತನು ಬಾಲ್ಯ ಸ್ನೇಹಿತನು. ದಿನಾಜಪುರಾಧಿಪನಾದ ಗಣೇಶದೇವನು"

"ಆದರೆ ಸೂರ್ಯದೇವನು ಮೃತನಾದನೇ?"

"ಅಹುದು."

"ನಾರಾಯಣ; ಆತನ ಆತ್ಮವು ಸುಖಪಡಲಿ! ಎಂದು ತನ್ನಂತೆ ಜಪವನ್ನು ಮಾಡತೊಡಗಿದಳು.

"ತಾಯೇ! ನೀನು ಆತನನ್ನು ಬಲ್ಲೆಯಾ?" ಎಂದು ಶಕ್ತಿಯುಮಾತನಾಡಿಸಿದಳು. ಆ ಯೋಗಿನಿಯು ಸ್ವಲ್ಪ ಹೊತ್ತು, ಮೌನದಿಂದಿದ್ದು ತರುವಾಯ "ಮಗುವೇ! ನೀನೀಗ ದೊಡ್ಡವಳಾಗಿರುವೆ. ನೀನು ಚಿಕ್ಕಂದಿನಲ್ಲಿ ಆ ರಾಜಕುಮಾರನೊಂದಿಗೆ ಆಟವಾಡಿದರೂ ಈಗ ನೀನು ಮೊದಲಿನ

ಹಾಗೆ ಆತನನ್ನು ಕಲೆಯುಲೆಣಿಸಬಾರದು. ”

“ ನಮಗೆ ಮದುವೆಯಾಗಿರುವುದು. ”

“ ಏನು! ನಿಮಗೆ ಮದುವೆಯಾಗಿರುವುದೇ? ನಿನಗೆ ಮದುವೆಯಾಗಿರವುದೆಂದು ನಿನ್ನ ತಂದೆಯು ನನಗೆ ಹೇಳಲಿಲ್ಲವಲ್ಲ. ”

“ ಅದನ್ನು ನನ್ನ ತಂದೆಯು ಕಾಣನು. ಅದು ಗಾಂಧರ್ವವಿವಾಹವು. ” ಎಂದು ಚಿಕ್ಕಂದಿನಲ್ಲಿ ತನಗೂ ರಾಜಕುಮಾರನಿಗೂ ನಡೆದ ವೃತ್ತಾಂತವನ್ನೆಲ್ಲ ವಿವರಿಸಿದಳು. ಆ ವಿರಾಗಿಣಿಯು, ದಾಕ್ಷಿಣ್ಯದಿಂದ ನಕ್ಕು “ ಎಲೆಗೆ, ಹುಚ್ಚು ಹುಡುಗಿ! ಚಿಕ್ಕತನದ ನೆಚ್ಚಿಕೆಗಳಿಗೆ ನಿನ್ನನ್ನು ಜನರೇನೆನುವರು? ಲೋಕವೆಲ್ಲವೂ ಮಾತ್ರವೇನು? ಇದೂ ಒಂದು ಹುಚ್ಚುತನವೇ! ಭಗವಂತನಾದ ಶ್ರೀಕೃಷ್ಣನೂ ಕೂಡ ಆಟಗಳಾಡಿದ ಗೋಪಬಾಲನೆ! ನೀನು ಸಣ್ಣ ಹುಡುಗಿಯು. ಲೋಕ ರೀತಿಯನ್ನರಿಯದವಳು. ಲೋಕದೊಳಗಿನ ಬಾಧೆಗಳಲ್ಲೊಂದೂ ನಿನಗೆ ತಿಳಿಯದು. ಆಗಣ ಆಟಗಳನ್ನು ನಿಶ್ಚಯವೆಂದೇ ಎಣಿಸಿದರೂ, ನಿನ್ನನ್ನು ಬೇರೆ ಹೇಳುವವರಾರೂ ಇಲ್ಲ. ಇದಕ್ಕೆ ರಾಜಕುಮಾರನೇನೆನುವನು? ತನ್ನ ಬಾಲ್ಯದಲ್ಲಿ ಕೈಹಿಡಿದ ಸಖಿಯನ್ನು ತನ್ನ ಗೃಹಿಣಿಯಾಗಿ ಅಂಗೀಕರಿಸುವನೋ? ”

ಈ ಮಾತುಗಳನ್ನು ಕೇಳಿದ ಶಕ್ತಿಗೆ ಅತ್ಯಂತ ವಿಚಾರವುಂಟಾಯಿತು. ತನ್ನ ಹೃದಯವನ್ನು ತಿಳಿದವರಾರೂ ಇಲ್ಲವೆ? ಯೋಗಿನಿಯೂ ಕೂಡ ರಾಜಕುಮಾರನು ಈಕೆಗೆ ದಕ್ಕಲಾರನೆಂದೇ ಎಣಿಸಿದಳಲ್ಲದೆ, ಆ ದಿನ ನಡೆದ ವೃತ್ತಾಂತವನ್ನು ಆಕೆಯರಿಯಳು. ಇನ್ನು ಲೇಶವೂ ಆಸೆಯಿಲ್ಲವೇ? ಯಾರೂ ಆಕೆಯನ್ನು ಗಣೇಶದೇವನ ಪತ್ನಿಯಾಗಿ ಅಂಗೀಕರಿಸಲಾರರೇ? ಎಲ್ಲರೂ ಒಂದೇತರವಾಗಿ ಆತನು ನಿನಗೆಂದಿಗೂ ಲಭಿಸಲಾರನು ! ಲಭಿಸಲಾರನೆಂಬ ಒಂದೇ ಪಟ್ಟಿನಿಂದ ನುಡಿಯುವರೇ? ಏನು ಮಾಡಲಿ; ಛಿ! ಛಿ! ಇನ್ನೇಕೆ? ಇದೆಲ್ಲವನ್ನೂ ಪಡೆದ ಶಕ್ತಿಯು ಗತಿಸಿದಳು. ಹೀಗೆ ನಿರಾಸೆಯಿಂದ ಆಕೆಗುಳ್ಳ ಮಾರ್ದವವಾದ ಊಹೆಗಳೆಲ್ಲವೂ ನಾಶವಾಗಿ, ಸಾಹಸವುಂಟಾಗಿ, “ ಈಗಲೂ ನನ್ನನ್ನು ಅಂಗೀಕರಿಸದಿದ್ದರೆ ಆತನನ್ನು ಹಾಳು

ಮಾಡಿಯೆ ತೀರುವೆನು ” ಎಂದು ನುಡಿದಳು.

ಇದಕ್ಕೆ ಮುಂಚಿತವಾಗಿಯೇ ಈ ಮಾತುಗಳನ್ನು ಪಖೀರನು ನುಡಿದರೆ ಆ ಮಾತುಗಳನ್ನು ಕೇಳಲು ಆಕೆಗೆ ಸಹ್ಯವಿಲ್ಲದಿದ್ದಿತು. ಈಗ ತಾನೇ ಈ ಮಾತುಗಳನ್ನಾಡುವುದಕ್ಕೆ ಹಿಂದೆಗೆಯಲಾರದವಳಾದಳು. ಒಳಗುಂಟಾದ ವುದ್ರೇಕವನ್ನು ಅಣಗಿಸಿಕೊಳ್ಳುವುದಕ್ಕೆ ಆಕೆಯು ಸ್ವಲ್ಪ ಹೊತ್ತು ಸುಮ್ಮನಿದ್ದು, ಯಾವುದೋ ಹೇಳಿ ಪುನಹ ಸುಮ್ಮನಾಗಿ, ಮರಳಿಯೂ,

“ ದೇವಿಯೆ! ನಾನು ನಿನಗೆಲ್ಲವನ್ನೂ ಸವಿಸ್ತಾರವಾಗಿ ಹೇಳುವೆನು. ಕೇಳುವವಳಾಗು. ನನ್ನನ್ನು ಆತನು ಮೋಸಮಾಡಿ ತ್ಯಜಿಸಿ ಬಿಟ್ಟಿರುವನು. ಈಗ ಅದಕ್ಕೆ ಪ್ರತೀಕಾರವನ್ನು ಹೊರತು ಬೇರೆಯಾವುದನ್ನೂ ನಾನೆಣಿಸುವುದಿಲ್ಲ. ಆ ಗಣೇಶದೇವನು ನನಗೆ ಪಾದಾಕ್ರಾಂತನಾಗಬೇಕು. ಎಂದಿಗಾದರೂ ಆತನನ್ನು ವಶಪಡಿಸಿಕೊಳ್ಳದೆ ಹೋದೇನೆ? ”

“ ಸೈರಿಸು ಮಗುವೇ! ಸೈರಿಸು! ಹೆಂಗುಸಿಗೆ ಪ್ರತ್ಯಪಕಾರ ಬುದ್ಧಿಯು ಸಲ್ಲದು. ನಾವು ಅಪೇಕ್ಷಿಸುವುದೆಲ್ಲ ಸಂಪ್ರಾಪ್ತವಾಗುವುದಕ್ಕೋಸ್ಕರವಾಗಿ ಭಗವಂತನು ಈ ಲೋಕವನ್ನು ಸೃಷ್ಟಿಸಿರಲಿಲ್ಲ. ಹಸ್ತಸ್ಪರ್ಶಮಾತ್ರದಿಂದ ಭೂಮಿಯಿಷ್ಟನ್ನೂ ಕದಲಿಸ ಬಲ್ಲೆವೇ? ನಿನ್ನ ಕೋರಿಕೆಗಳಿಗೇನೂ ಆತಂಕಗಳಿಲ್ಲದೆ ಮಾಡುವೆನೆಂದು ವಾಗ್ದಾನಮಾಡಿಯೆ, ಸೃಷ್ಟಿಸಿದನೇ, ನಿನ್ನನ್ನು ದೇವರು? ನಿನ್ನ ಜೀವನವಾದ ರೋಜಾಹೂಗಳಿಗೆ ಮುಳ್ಳುಗಳಿರಲಾರವೆಂದೆಣಿಸಿದೆಯಾ! ನಿನಗೆ ಆ ಕೋಪವು ವ್ಯರ್ಥವು. ಬಾಲ್ಯದೆಸೆಯಲ್ಲಿ ಆಡಿದ ಆಟದ ಮದುವೆಯು ರಾಜಕುಮಾರನನ್ನು ಹಿಡಿದು ಬಂಧಿಸಿಕೊಡಲಾರದು. ನಮಗೆ ನಮ್ಮಿಂದಲೇ ದುಃಖಗಳುಂಟಾಗುವುವು. ಮಾನವರಿಗೆ ಕರ್ಮವೇ ಸುಖ ದುಃಖಗಳನ್ನುಂಟುಮಾಡುತಿರುವುವು. ನೀನು ಆತನ ಮುಂದೆ ಒಬ್ಬ ಯಾಚಕಳು. ಯಾಚಕರಿಗೆ ಯಾವುದಾದರೂ ಬಾಧ್ಯತೆಗಳುಂಟಾಗಿರುವುದೇ? ಭಗವಂತನ ದೃಷ್ಟಿಯಲ್ಲಿ ನಿನಗೆ ಆತನು ಯೇನೂ ಅಪರಾಧ ಮಾಡಲಿಲ್ಲ. ಅದನ್ನು ನೀನು ಅರಿತಿದ್ದರೆ ಆತನನ್ನು ನೀನು ಅನ್ಯಾಯವಾಗಿ ಕೋರುತಿರುವೆ ಯೆನುವುದು ಸಿದ್ಧವು. ”

"ಅನ್ಯಾಯವೇ! ನನಗೆ ಆತನಮೇಲೆ ಕೇವಲ ನ್ಯಾಯವಾದ ಭಾ ಧ್ಯತೆಯುಂಟು. ಅದು ಪ್ರೇಮೋಪಾರ್ಜಿತವು; ವಿಶ್ವಾಸ ಸಾಧಿತವು, ಅ ದು ನನ್ನ ಹೃದಯ ಸಾಕ್ಷಿಯಿಂದಲೇ ನಾನು ವಿಕ್ರಯಿಸಿದುದು. ತಲಬಾಗಿ ಲಲ್ಲಿ ಬಿದ್ದಿರುವ ಯಾಚಕರನ್ನು ತಿರಸ್ಕರಿಸುವುದು ಕೂಡ ಪಾತಕವೇ! ಅಂ ತಹ ಸಂಗತಿಯಲ್ಲಿ ಹೃದಯವನ್ನರ್ಪಿಸಿದ ಸಾಧ್ವಿಯನ್ನು ಬಿಟ್ಟುಬಿಡುವಿಕೆ ಯು ಯೆಂತಹ ಘೋರಪಾತಕವೋ ಕೇಳಬೇಕೇ? ಮತ್ತು ತಾಯೇ! ಲೋಕದ ಯೆಲ್ಲ ಗುಣಾವಗುಣಗಳು ನನಗೆ ತಿಳಿಯದೆ ಹೋದರೂ ನನ್ನ ಹೃದಯವನ್ನು ನಾನು ಬಲ್ಲೆನು. ನನ್ನ ಆತ್ಮನಿಗೆ ಪ್ರತ್ಯುತ್ತರವನ್ನೀಯು ತಿರುವ ಭಗವಂತನ ಮಾತನ್ನು ನಾನರಿತಿರುವೆನು. ಭಗವಂತನ ದೃಷ್ಟಿಯಲ್ಲಿ ಪುಣ್ಯವಾವುದೋ, ಪಾಪವಾವುದೋ, ನಾನರಿತಿರುವೆನು. ಅಂತಹ ನನ್ನ ನ್ನು ಮೋಸಪಡಿಸಿದವನು ಉತ್ತಮ ಧರ್ಮಕ್ಕೆ ತಪ್ಪಿದವನು. ಭಗವಂತ ನು ಮಾನವರಿಗೆ ದಯೆಪಾಲಿಸಿರುವ ಪರಮ ಧರ್ಮವಾದ ಪರಮಾತ್ಮ ಬೋ ಧೆಗಳನ್ನು ಮೀರಿ ನಡೆದಿರುತ್ತಾನೆ."

"ಮಗುವೇ! ನಿನ್ನ ವ್ಯಾಖ್ಯಾನವೆಲ್ಲವೂ ತಪ್ಪು. ಚಿಕ್ಕಂದಿನಲ್ಲಿ ಅಂತರಾತ್ಮವು ಬೋಧಿಸುವುದು ಉತ್ಕೃಷ್ಟ ಧರ್ಮವೇ ಆಗುವುದು. ಅ ದು ನಾನು ಕೋರಲಾರೆನೆಂದು ಕೊಂಡರೆ ಅದಕ್ಕೆ ಮಿತಿಯಿರುವುದು. ಅದ ರೊಳು ಎರಡು ಆತ್ಮಗಳ ಪ್ರೇಮಮಾತ್ರವೇ ಉಂಟು. ಅಂತಹ ಮೊಲಿಮೆ ಯು ಒಂದೇ ಇದ್ದು ಅದು ಯಾರಮೇಲೆ ಪ್ರಸರಿಸಿರುವುದೋ ಅವರು ಅದ ಕ್ಕೆ ಅಂಗೀಕರಿಸದಿದ್ದ ಪಕ್ಷದಲ್ಲಿ ನಿನ್ನ ಧರ್ಮಕ್ಕೆ ಭಂಗಬರುವುದು. ಆಗ ನಿನ್ನ ಮತವು ಪೂರ್ವಪಕ್ಷವಾಗುವುದು. ಇಬ್ಬರೂ ಅನ್ಯೋನ್ಯವಾಗಿ ಪ್ರೀತಿ ಸಿ, ತರುವಾಯ ಅವರಲ್ಲಿ ಮೊಬ್ಬರು ಆ ಬಂಧನವನ್ನು ಕಿತ್ತುಹಾಕಿದ ಪಕ್ಷ ದಲ್ಲಿ ಆಗ್ಗೆ ಹೃದಯಧರ್ಮವು, ವಿಶ್ವಾಸದ ವಿಧಿ, ಇವುಗಳನ್ನು ಮೀರಿದಂತೆ ಯೇ! ಅದು ನಿಶ್ಚಯವು. ಇಲ್ಲದ ಸಲ್ಲದ ನಟನೆಗಳನ್ನು ಮಾಡಿ, ಪುರು ಷನು ಸ್ತ್ರೀಯನ್ನು ವಂಚಿಸಿ, ಮೊಲಿಸಿ ಕೊನೆಗೆ ಮೋಸಮಾಡಿದರೆ, ಆಗ ಆ ಕೆಯ ಗೋಳು ಅವನಿಗೆ ತಟ್ಟುವುದು. ಆತನು ಕೃತಘ್ನನೇ; ಆಗಲಿ

ಕುಮಾರೀ! ಅಲ್ಲದ ಸಲ್ಲದ ಹುಚ್ಚು ಮಾತುಗಳಿಗೆ ಹೋಗದಿರು. ಬಾಲ್ಯದಲ್ಲಿ ಆಟವಾಡಿಕೊಂಡ ಮಾತ್ರದಲ್ಲಿಯೇ ಆತನು ನಿನಗೆ ಬದ್ಧನಾಗಿರಬೇಕೆಂದು ಊಹಿಸದಿರು. ಏಕಪಕ್ಷವಾಗಿದ್ದ ಪ್ರೇಮದ ದೆಸೆಯಿಂದ ಎರಡನೆಯವರ ಮೇಲೆ ಯಾವ ಬಗೆಯಾದ ಸ್ವತ್ವವೂ ಉಂಟಾಗಲಾರದು. ಅದು ಅವರ ದಯಾಸಂಪಾದನೆಯ ಮಟ್ಟಿಗಾದ ಪ್ರಾರ್ಥನೆಯ ಮಾತ್ರವೇ ಅಲ್ಲದೆ ಬೇರೆ ಇಲ್ಲ. ನಮ್ಮ ಕೋರಿಕೆಯು ನ್ಯಾಯವಾದುದೇ ಆಗಿದ್ದರೂ, ನಿರಾಕರಿಸಿದುದಕ್ಕೆ ಪರಿತಾಪವು ಅನವಶ್ಯಕವು."

"ಈ ಪ್ರೇಮರಸವು ನನಗೊಬ್ಬಳಿಗೇ ಇದ್ದುದಾದರೆ ಪ್ರತಿದಿನವೂ ಆತನು ನನ್ನನ್ನು ಪ್ರೀತಿಸಿದಂತೇಕೆ ನಟಿಸಬೇಕು? ಪುಷ್ಪಮಾಲೆಯನ್ನು ನನ್ನ ಕೊರಳಲ್ಲಿ ಹಾಕಿ ನನ್ನನ್ನು ತನ್ನ ರಾಣಿಯೆಂದೇಕೆ ನುಡಿಯಬೇಕು?"

"ಅದೊಂದು ಆಟವು. ಆಟಕ್ಕೋಸ್ಕರ ಮಾಡಿದ ಕಾರ್ಯದೊಳಗಾತನನ್ನು ಉತ್ತರವಾದಿಯನ್ನು ಮಾಡನೋಡದಿರು!

"ಆಗ ನಾನು ಮಾತ್ರ ಸಣ್ಣವಳಲ್ಲವೋ? ಆದರೂ ನಾನು ಆತನನ್ನು ಒಲಿದೆನು. ಒಲಿಯುತಿದೇನೆ. ಆದರೆ ಆತನ ಪ್ರಮಾಣ ಮಾತ್ರ ಮಾತಿನಮೇಲೆ ತಳ್ಳಿಹಾಕಬೇಕಾದುದೇ?"

"ಹಾಗಲ್ಲ, ಸಾವಧಾನವಾಗಿ ಕೇಳು! ನಿನ್ನ ಕೋರಿಕೆಗಳು ಘನವಾದುವುಗಳಾಗಿದ್ದಾವು. ಅದಕ್ಕೆ ಸಂದೇಹವಿರಲಾರದು. ಆದರೆ ಪ್ರೇಮವೆಂಬುದು ಮುಖ್ಯವಾಗಿ ಪುರುಷರಲ್ಲಿ ಯೌವನ ಪರ್ಯವಸಾನವಾಗಿರುವುದು. ವಯಸ್ಕಳಾದ ತರುವಾಯ ನೀನು ಆತನನ್ನು ಕಲೆತುಕೊಳಲಿಲ್ಲ. ನಿನ್ನೊಳು ಆತನಿಗೆ ಪ್ರೀತಿಯು ವೃದ್ಧಿಯಾಗುವುದಕ್ಕೆ ಅವಕಾಶ ಉಂಟಾಗಲಿಲ್ಲ. ವರನು ವಧುವನ್ನು ವರಿಸಿದಂತೆ ನಿನ್ನನ್ನು ಆತನು ವರಿಸಿರಲಿಲ್ಲ. ಆದುದರಿಂದ ಮನಸಿನಲ್ಲಾಗಲಿ, ಲೋಕದಲ್ಲಾಗಲಿ ನಿನಗೆ ಆತನು ಮಾಡಿದ ಮೋಸವೇನೂ ಇಲ್ಲ. ನೆಮ್ಮದಿಯಾಗಿ ಆಲೋಚಿಸಿಕೊಂಡೆಯಾದರೆ ಇದು ನಿನಗೆ ತಕ್ಷಣವೇ ಬೋಧೆಯಾಗುವುದು."

"ತಾಯೇ! ಇದು ಸರಿಯಲ್ಲ. ನೀನಿಲ್ಲಿ ಯೆಡೆಹರುವಂತೆ ತೋ

ರುತ್ತಿದೆ. ಈ ದಿನದವರೆಗೆ ಆತನ ಪ್ರತಿವಚನಗಳೂ, ಪ್ರತಿದೃಷ್ಟಿಯೂ. ಆತನಿಗುಳ್ಳಂತಹ ನಿಶ್ಚಲವಾದ ಪ್ರೇಮವನ್ನು ತಿಳಿಸುತಲೇ ಇವೆ. ಆದರೆ ಆತನಿಗೆ ಧೈರ್ಯವಿಲ್ಲ. ಶುದ್ಧವಾಗಿ ಹೇಡಿಯು, ತಾಯಿಗೆ ಹೆದರಿ ತನ್ನ ಹೃದಯೇಶ್ವರಿಯನ್ನು ಬಿಟ್ಟುಕೊಟ್ಟಿರುವನು. ಗಾಳಿಯ ಮಾತುಗಳನ್ನೆಲ್ಲ ನಂಬುತ್ತಾನೆ. ಮನೋಹರಲಾಲನ ತಂಗಿಯು ತನ್ನ ವಂಶಕ್ಕೆ ಅಪಕೀರ್ತಿಯನ್ನು ತಂದಿರುವಳಂತೆ. ಎಲೆಲೆ ಪಾಪಾತ್ಮಳೆ! ನಿನ್ನ ಮಾತುಗಳೆಲ್ಲವೂ ಶುದ್ಧ ಸುಳ್ಳೆ. ಮೇಲೆ ಭಗವಂತನೇ ಇದ್ದುದಾದರೆ ಮನೋಹರಲಾಲನ ತನೂಜಾತೆಗೆ ನಿನ್ನ ವಂಶೀಯರೆಲ್ಲರೂ ಪಾದಾಕ್ರಾಂತರಾಗುವ ದಿನಗಳು ಬಾರದಿದ್ದೀತೇ ಏನು? ಆಗ ನಿನ್ನ ಗರ್ವಭಂಗವಾಗದಿದ್ದೀತೇ? ಇದುವೇ ನನ್ನ ಶಾಪವು. ನೀನು ಮಾಡಿದ ಪಾಪಕ್ಕೆ ದೇವರು ನಿನ್ನ ತಲೆಯಮೇಲೆ ಕೈಯಿಡದೆ ಹೋಗಲಾರನೇಳು. ”



## ಪ್ರಕರಣ ೧೩.

ಶಕ್ತಿಗುಂಟಾದ ಮನಸ್ತಾಪವು ವಿವಶತೆಯನ್ನುಂಟುಮಾಡಲು ಮೌನಧಾರಿಣಿಯಾಗಿ ಸುಮ್ಮನಿದ್ದಳು. ಗುಂಡಿಗೆಯು ಡವಡವನೆ ಬಡಿದುಕೊಳ್ಳುತ್ತಿದ್ದಿತು. ಯೋಗಿನಿಯು ಕೂಡ ಮೌನದಿಂದಿದ್ದಳಾದರೂ ಸ್ವಲ್ಪಹೊತ್ತಿಗೆ ಆಕೆಯು ಹೀಗೆ ಮಾತಾಡಲು ಪ್ರಾರಂಭಿಸಿದಳು.

“ ಅದೃಷ್ಟವನ್ನು ಹಾಗೇತಕೆ ನಿಂದಿಸುತಿರುವೆ? ಮಗುವೇ! ಧರ್ಮನಿಯಂತೃವಾದ ಭಗವಂತನನ್ನು ನೋಡುವಳಾಗು. ಆತನು ನಮ್ಮನ್ನು ಆಳುವುದಕ್ಕೋಸ್ಕರವೇ ದುಃಖವನ್ನು ತಂದೊಡ್ಡುತಿರುವನು. ರಾಜಕುಮಾರನು ನಿನ್ನನ್ನು ಪ್ರೇಮಿಸಿದ್ದು ಕೂಡ ನಿರಾಕರಿಸಿದುದಕ್ಕೆ ಕಾರಣವು, ಅಂತರಾತ್ಮನ ಬಾಧೆಯೂ, ಧರ್ಮರತಿಯೂ ಅಲ್ಲದೆ ಬೇರೊಂದಿಲ್ಲ. ನಿನ್ನ ಸುಖದೊಡನೆ ಆತನ ಜನ್ಮಸುಖವೂ ಕೂಡ ಬಲಿಯಾಗಿಹೋಗಿರುತ್ತದೆ. ನಿನ್ನೊಳು ಪ್ರೇಮವಿದ್ದು ಕೂಡ ನಿನ್ನನ್ನು ಕೈಹಿಡಿಯದೆ ಹೋದ ಪಕ್ಷದಲ್ಲಿ

ಆತನಿಗೆ ಜನ್ಮಮಧ್ಯದಲ್ಲಿ ಯೆಂದಾದರೂ ಸುಖವಿರಲಾರದು. ಆತನಮೇಲೆ ಹಗೆಸಾಧಿಸಲೆಣಿಸದೆ ಗೌರವಿಸಿ ಮೇಲನ್ನೇ ಕೋರುತಿರುವಳಾಗು. ಅವತಾರಪುರುಷನಾದ ಶ್ರೀ ರಾಮಚಂದ್ರ ಮೂರ್ತಿಯು ಯಾವ ಮಾರ್ಗವನ್ನವಲಂಬಿಸಿದನೋ ಬಲ್ಲೆಯಾ? ಗಣೇಶನು ನಿನ್ನನ್ನು ಮದುವೆಯಾದ ಪಕ್ಷದಲ್ಲಿ ಆತನ ವಂಶಕ್ಕೆ ಅಪಕೀರ್ತಿ ಬರುವುದೆಂದು ನಿನ್ನನ್ನು ಬಿಟ್ಟು ಮತ್ತೊಬ್ಬಳನ್ನು ವರಿಸುವಿಕೆಯು ಒಳ್ಳೆಯ ಕೆಲಸವನ್ನೇ ಮಾಡಿದಂತಾಯಿತು.

"ಅಹುದು! ಆತನು ಇನ್ನೊಬ್ಬರನ್ನು ವರಿಸಿದುದು ನ್ಯಾಯವೇ! ಆದುದರಿಂದ ನಾನು ಪ್ರಾರ್ಥಿಸಬೇಕು. ಪ್ರೇಮಕ್ಕಿಂತಲೂ ಮಾನವನಿಗೆ ಉತ್ತಮಧರ್ಮವಾವುದು? ಸೀತೆಯನ್ನು ಅಪವಿಯಪಾಲು ಮಾಡುವಿಕೆಯು ಶ್ರೀರಾಮಚಂದ್ರನಿಗೆ ಘನತೆಯಲ್ಲ. ಅದಕ್ಕೆ ಆತನ ಪ್ರಜೆಗಳೆಲ್ಲರೂ ಆತನನ್ನು ಹೊಗಳಿದರೇ ವಿನಾ, ಸೀತೆಯು ಅಕಾಲದಲ್ಲಿ ಬಿದ್ದ ಬಾಧೆಯು ಹೆಂಗುಸರಿಗೆ ಮಾತ್ರಗೆ ಗೊತ್ತುಂಟು. ಅವರಾರೂ ಅದು ಘನಕಾರ್ಯವೆಂದು ನುಡಿಯಲಾರರು. ಅದು ಅನ್ಯಾಯವೇ, ಆತನ ಕೀರ್ತಿಗೆ ಕಳಂಕವನ್ನು ತಂದಿತಾದರೂ ಜನರು ಮಾತ್ರ ಆತನನ್ನು ಈಗಲೂ ಸ್ತುತಿಸುತಿರುವರು. ಸೀತೆಯು ಈತನಿಗೆ ಪತ್ನಿಯೇ ಅಲ್ಲದೆ ಪ್ರಜೆಗಳಲ್ಲಿ ವೊಬ್ಬಳು ಕೂಡ ಅಹುದು. ಆಕೆಯು ಪರಿಶುದ್ಧಳೆಂದರಿತಿದ್ದು ಕೂಡ ಲೋಕಕ್ಕೆ ಹೆದರಿ ಆಕೆಯನ್ನು ಪರಿತ್ಯಾಗ ಮಾಡಿದನು. ಆದುದರಿಂದ ಆತನ ರಾಜಧರ್ಮವೂ ಭರ್ತೃಧರ್ಮವೂ ಕೂಡ ಕೆಟ್ಟವು."

"ಸನ್ಯಾಸಿನಿಯು" — ಆಗಲಿ! ಹೋಗುವೇ, ಸ್ಮರಿಸು!

ಶಕ್ತಿ — ಆಗಲಿಯೂ ಇಲ್ಲ, ಗೀಗಲಿಯೂ ಇಲ್ಲ. ದೇವೀ! ಅಪನಿಂದೆಗೆ ಹೆದರಿ ರಾಜಕುಮಾರನು ತಾನು ಮನಃಪೂರ್ವಕವಾಗಿ ಪ್ರೀತಿಸಿ ವಿವಾಹವಾದ ವನಿತೆಯನ್ನು ತ್ಯಜಿಸಿದನು. ನನ್ನ ಪ್ರೇಮ, ಪ್ರಾಣ, ಭಕ್ತಿ, ಆತ್ಮ, ಇವೆಲ್ಲವನ್ನೂ ಆತನಿಗೆ ಅರ್ಪಿಸಿದೆನು. ಆತನು ನಿರ್ದಯಹೃದಯನಾಗಿ ತಳ್ಳಿಹಾಕಿದನು. ಆತನು ಅಂತರಾತ್ಮನಿಗೆ ವ್ಯತಿರೇಕಿಸಲಿಲ್ಲೆಂದು ಎಂದೆಂದಿಗೂ ಹೇಳಲಾರೆನು. ನನ್ನ ಗೋಳೂ, ಆತನ ಗೋಳೂ, ಕೂಡ ಆತ

ನಿಗೇ ತಿಳಿಕವಿರಲಾರದು. ಏಕೆಂಬೆಯಾ? ನಾನು ಮದುವೆಯಾಗದೆ ಕೀರದ ಲ್ಲವೆ? ಸದಾಚಾರವು ಹಾಗೆ ವಿಧಿಸುತ್ತದೆ. ನಾನು ವಿವಾಹ ವಾಗುವುದೊಂದೇ ವಿನಾ ನನ್ನ ಹೃದಯವನ್ನೇನೋ ಅನ್ಯನಿಗೆ ಕೊಡಲಾರೆನು. ನಾನು ರಾಜಕುಮಾರನನ್ನು ಗೌರವಿಸಬೇಕೆ ? ಆತನು ಹೇಡಿಗಳಿಗೆ ಮುಂದಾಳು. ನ್ಯಾಯ ದೂರನು. ಪಾಪಾತ್ಮನು. ನನ್ನ ವಂಶದವರಲ್ಲಿ ಒಬ್ಬಾಕೆಯಾದ ನನ್ನ ಸೋದರತ್ತೆಯು ನನ್ನ ವಂಶಕ್ಕೆ ಅಪಕೀರ್ತಿ ತಂದವಳೆಂದು ಪ್ರಖ್ಯಾತಿಯುಂಟಂತೆ? ಆಕೆಯು ಗತಿಸಿ ಸ್ವರ್ಗಸ್ಥಳಾಗಿ ಸ್ವರ್ಗವನ್ನು ಕೂಡ ಪವಿತ್ರವಾಡಿದ ಸಾಧ್ವೀಮಣಿಯು. ಅಯ್ಯೋ! ಎಂತಹ ಅಸತ್ಯವು, ಎಂತಹ ಅಸತ್ಯವು. ''

ಈ ತೀಕ್ಷ್ಣೋಕ್ತಿಗಳು ಆ ನಿಶೀಥ ಸಮಯದ ಮೌನವನ್ನು ಭೇದಿಸಿತು. ಆದರೆ ಶಕ್ತಿಯು ಮರಳಿ ಸುಮ್ಮನಾದಳು. ಕೂಡಲೇ ಯೋಗಿನಿಯು ಮೆಲ್ಲನೆ ಮೊದಲಿನಂತೆಯೇ ಆರಂಭಿಸಿದಳು. " ಸ್ಮರಿಸು! ಮಗುವೇ! ಸ್ಮರಿಸು. ನಿಶ್ಚಯವೆಲ್ಲವನ್ನೂ ಭಗವಂತನು ಬಲ್ಲನು. ಲೋಕನಿಂದೆಗೆ ಗುರಿಯಾದ ಆ ನಿನ್ನ ಸೋದರತ್ತೆಯು ನಾನೇ! ನಾನಿನ್ನೂ ಜೀವಿಸಿರುವೆನು. ನನಗೆ ಸ್ವರ್ಗವು ದೊರೆಯುವುದೋ, ಇಲ್ಲವೋ, ಅರಿಯೆನಾದರೂ ನನಗಿದುವರೆಗೆ ನರಕದಲ್ಲಾದರೂ ಇನ್ನೂ ಸ್ಥಳ ಸಿಕ್ಕಿದುದಿಲ್ಲ. ಎನಲು ಶಕ್ತಿಯು ಆಶ್ಚರ್ಯ ಚಕಿತಳಾಗಿ ಗಾಬರಿಯಿಂದ ನೋಡುತ ಸ್ತಂಭೀಭೂತಳಾಗಿನಿಂತಳು." ಕೇಳು! ಕುಮಾರೀ! ಕೇಳು! ನನ್ನ ವ್ಯಸನಕರವಾದ ಕತೆಯೆಲ್ಲವನ್ನೂ ಕೇಳಿ ಅದರಿಂದ ಕಲಿಯಬೇಕಾದ ಪಾಠಗಳನ್ನು ಗ್ರಹಿಸುವಳಾಗು.' ನಿನ್ನಹಾಗೆಯೇ ಅಂತರಾತ್ಮ ಧರ್ಮವೇ ಸರ್ವೋತ್ಕೃಷ್ಟವಾದುದೆಂದೂ, ಅದುವೇ ಧರ್ಮವೆಂದೂ, ಎಣಿಸುವರಲ್ಲಿ ನಾನೂ ಒಬ್ಬಳು. ನನ್ನ ಆತ್ಮೇಶ್ವರನು ನನಗೆ ದೇವರಂತಿದ್ದನು. ಲೋಕದಲ್ಲಿದ್ದ ಸೌಂದರ್ಯವು! ಸತ್ಯವು. ಸದ್ವರ್ತನವು, ಪಾವನತ್ವವು, ಇಂತುವೆಲ್ಲವನ್ನೂ ಆತನಲ್ಲಿ ಲೀನವಾಡಿ ಆತನನ್ನೇ ಆರಾಧಿಸುತಿದ್ದೆನು. ಆತನ ಮಾತುಗಳನ್ನು ವೇದವಾಕ್ಯಗಳೆಂದೂ, ಆತನ ಚೇಷ್ಟೆಗಳೆಲ್ಲವೂ ಧರ್ಮವರ್ತನಗಳೆಂದೂ, ಪರಿ

ಗಣಿಸುತಿದ್ದನು. ಆತನು ಲೋಕದೊಳಗಿನ ಪ್ರಾಣಿಗಳಂತಲ್ಲದೆ ದಿವ್ಯಪು ರುಷನೆಂಬದಾಗಿಯೂ, ಅಗ್ನಿಹೋತ್ರದಂತವನೆಂಬದಾಗಿಯೂ, ಎಣಿಸುತಿ ದ್ದೆನು. ಅಂತಹ ನನ್ನ ವಿಶ್ವಾಸವು ನಿಮಿಷ ಮಾತ್ರದಲ್ಲಿ ನೀರೊಳು ಕಲೆತು ಹೋಯಿತು. ಭಗವಂತನೇ ಸ್ವತಃ ಬಂದು ಮಾನುಷಾಕಾರ ತಾಳಿ ಭೂಮಿ ಯಮೇಲೆ ನಿವಾಸವಾಗಿರಬೇಕಾದರೆ ಆತನುಕೂಡ ಲೋಕಸ್ಥಿತಿ ಗತಿಗಳಿಗನು ಗುಣವಾಗಿ ನಡೆದುಕೊಳದೆ ತೀರದು. ಹೃದಯ ಧರ್ಮಗಳನ್ನು, ಲೋಕ ಧ ರ್ಮಗಳೊಂದಿಗೆ ಸರಿಹೋಲಿಸಿಕೊಂಡು ನಡೆಯುತ ಅಂತರಾತ್ಮದ ಪಾವನ ತ್ವವನ್ನೂ, ಘನತೆಯನ್ನೂ, ಕಾಪಾಡಿಕೊಳುತಿರಬೇಕು. ಹಾಗಲ್ಲದೆ ಲೋ ಕಧರ್ಮಗಳಿಗೆ ವ್ಯತಿರೇಕವಾಗಿ ನಡೆದರೋ, ಅಂತರಾತ್ಮ ಧರ್ಮವು ಪ್ರತಿ ಷ್ಠಿಸಲ್ಪಡಲಾರದು. " ಆದರೆ ಪ್ರೇಮಾತಿಶಯವುಳ್ಳವಳಾಗಿ ಪತಿವ್ರತೆಯಾದ ಹೆಂಗುಸು ಮಾತ್ರ ಸಂತೋಷವೂ, ಸುಖವೂ, ಇಂತಹುದೆಂಬುದನ್ನರಿಯದೆ ಬಾಧೆಪಡುತ ವರ್ತಿಸುತಿರಬೇಕು. ಪಾಪಾತ್ಮರಾದ ಈ ಭೂಲೋಕ ರಾಕ್ಷ ಸರು ಮಾತ್ರ ತಮ್ಮನ್ನು ನಂಬಿದ ನಿರಪರಾಧಿನಿಯರನ್ನು ಸುಖಕ್ಕೆ ದೂರಮಾ ಡಿ, ಚಲ್ಲಾಟಗಳನ್ನಾಡುತ ವಿನೋದಿಸಬೇಕು. ಈಗ ನಿನ್ನ ದುರ್ದೆಸೆಗೆ ಕಾರಣವೇನೋ ನನಗೆ ತಿಳಿಯಿತು. ಗಣೇಶನು ನನ್ನನ್ನು ಮಾಡಿದಂತೆ ಯೇ ಆತನ ತಂದೆಯು ನಿನ್ನನ್ನು ಮಾಡಿರುವನು. ಇನ್ನೂ ಆತನ ಮೇಲೆ ನಿನಗೆ ಪ್ರೇಮ. "

ಮೊದಲು ಶಕ್ತಿಯು ತನ್ನ ಅತ್ತೆಯಮಾತಿಗೆ ಅಡ್ಡಬಂದು ಆಕೆಯ ನ್ನು ಮಾತನಾಡಲೀಸದೆ " ಇದಕ್ಕೆ ಹಗೆಯನ್ನು ತೀರಿಸಿಕೊಳ್ಳೆಂದು ಮೊಂ ದುಸಾರಿಯಲ್ಲ, ಸಾವಿರಸಲಗಳಾಗಿ ಹೇಳುವೆನು. " ಓ ಭಗವಂತನೇ! ನಿನ ಗೆ ನಿನ್ನ ಧರ್ಮವು ಸಂದಿತೇ.? ಸ್ತ್ರೀಯನ್ನು ಅಬಲೆಯನ್ನಾಗಿಯೂ, ವಿ ಶ್ವಾಸವುಳ್ಳವಳನ್ನಾಗಿಯೂ ಸೃಷ್ಟಿಸಿದುದೇತಕೆ ? ಅಬಲೆಯನ್ನು ಪುರುಷ ನು ಕಾಲಿಂದ ತುಳಿಯುವುದು ನಿನಗೆ ತೃಪ್ತಿಯೇ? "

" ಕುವರಿಯೇ ! ಸೃಷ್ಟಿಕರ್ತನನ್ನು ನಿಂದಿಸದಿರು. ಆತನಿಗೆ ತಾನು ಬಾಧೆಪಡಿಸುವರ ಮೇಲೆ ಅಪಾರವಾದ ಅಂತಃಕರುಣೆಯುಂಟು. ಅದರ

ದೆಸೆಯಿಂದಲೇ ಬಾಧೆಪಡಿಸುತಿರುವನು. ಆವ ಜಂತುವನ್ನಾದರೂ ಕ್ರೌರ್ಯ ದಿಂದ ಬಂಧಿಸಲು ಪ್ರಯತ್ನಿಸಿ ಹಿಂಸಿಸಿದೆವಾದರೆ ಕೂಡಲೇ ಅದು ಮೇಲೆ ಬೀಳುವುದು. ಆದರೆ ಸಮಯೋಚಿತವಾಗಿ ಪೊದಗುತಿರುವ ಹಿಂಸೆಯನ್ನು ಸಾಹಸದಿಂದ ತಡೆಯುವುದು ಮಾನವಧರ್ಮವು. ಬಾಧೆಗೆ ಸಹಿಸಿಕೊಂಡು ಬಾಧಿಸುವರ ಮೇಲನ್ನು ಕೋರುತಿರುವುದು ಪರಮ ಧರ್ಮವು. ನಿನಗೆ ದುಃಖವನ್ನುಂಟುಮಾಡಿದವರ ಶ್ರೇಯಸ್ಸನ್ನು ಅಪೇಕ್ಷಿಸಿ ಭಗವಂತನನ್ನು ಪ್ರಾರ್ಥಿಸುವಳಾಗು. ಆಗ ನಿನ್ನಲ್ಲಿರುವ ದಿವ್ಯಮಹಿಮೆಯು ವ್ಯಕ್ತವಾಗು ವುದು. ಕರ್ಯವು ಪ್ರಾಪಂಚಿಕವು. ನೇಮವು ದಿವ್ಯವಾದುದು. ಅದುವೆ, ದೈವ ಪ್ರಸಾದಿತವರವು. ಅದರ ಮಹಿಮೆಯು ಅನಂತವು.ಅದು ಇತರರ ದುಃಖಗ ಳಿಗೆ ತಾಳಿಕೊಳುವುದು. ದುಃಖವು ಅದನ್ನು ತಡೆಯಲಾರದು, ಇದುವೇ, ಮಾ ನವನಿಗೆ ಭಗವಂತನು ಪ್ರಸಾದಿಸಿರುವ ಮಹಾವರವು. ಅದರೊಳು ಈಅಮೂ ಲ್ಯವಾದ ವರವನ್ನು ನಮಗೆ ಪ್ರಸಾದಿಸಿರುವನು. "

"ಸ್ಥೈರಣೆಯುಳ್ಳವರು ಸೈರಿಸಿಕೊಳಲಿ ನನಗೆಮಾತ್ರ ಆತನು ಮಾಡಿರುವ ಹಿಂಸೆಯೂ, ಮೋಸವೂ, ಸಹಿಸಲು ಶಕ್ಯವಾದುವುಗಳಲ್ಲ " "ಮಗುವೇ! ಸೈರಿಸು, ಸೈರಿಸು, ಹಗೆಯನ್ನು ನೀಗುವುದು ಭಗವಂತನ ಕಾರ್ಯವು. ಆ ಮಹಾ ಮಹನೇ ಅವಸರವಾದಲ್ಲಿ ನ್ಯಾಯಮಾರ್ಗದಲ್ಲಿ ಶಿಕ್ಷಿಸುವನು. ಅಲ್ಪರಾದ ಮಾನವರು ಪುಣ್ಯಪಾಪಗಳನ್ನೂ, ಗುಣಾವಗುಣಗಳನ್ನೂ, ವೃತ್ತಾ ಮಾಧಮಗಳನೂ , ವಿವರಿಸಲಾರರು. ಸ್ತ್ರೀಯರಿಗೆ ಭಕ್ತಿಯು ಧರ್ಮವೆ ಅಲ್ಲದೆ ಹಗೆತನವನ್ನು ಸಾಧಿಸುವುದಲ್ಲ. ನಿಶ್ಚಲವಾದ ಪ್ರೀತಿಯು ಹಗೆತನವನ್ನು ಸಾಧಿಸಲರಿಯದು. ಕುಮಾರೀ ! ನೀನು ಬಹು ಬಾಧೆಪಟ್ಟಿರುವೆ. ನಿನ್ನ ಪ್ರೇಮವು ವ್ಯರ್ಥವಾದುದರಿಂದ ನಿನ್ನ ಮನಸ್ಸು ಕುದಿಯುತಿದೆ. ನಿನಗೆ ಸುಖಾ ಪೇಕ್ಷೆ ಯಿದ್ದಿತೋ, ಅದನ್ನು ಕೈವಶಮಾಡಿಕೊಳಲಿಚ್ಛಿಸುವೆಯೊ, ಹಾಗಾದರೆ ನಿನ್ನ ಮನಸ್ಸಿನ ಕಾರ್ಪಣ್ಯವನ್ನು ತೊರೆಯುವಳಾಗು. ನಿನಗಪಕಾರಮಾಡಿ ದವರಿಗೆ ಉಪಕಾರವಾಗಲೆಂದು ಪ್ರಾರ್ಥಿಸುತಿರು. ಇಂತಹ ಮನಶ್ಶಾಂತಿ

ಯನ್ನು ಸಂಪಾದಿಸಿಕೊಳ್ಳುವುದಕ್ಕೆ ಪ್ರಯತ್ನಿಸುವಳಾಗು. ಅದಕ್ಕೂ ಹೆಚ್ಚಾಗಿ ನನಗಾವುದೂ ಅಗತ್ಯವಿಲ್ಲ.

"ಅದು ಭಗವಂತನ ಉದ್ದೇಶವಾಗಿದ್ದ ಪಕ್ಷದಲ್ಲಿ ನನ್ನ ಮನಸ್ಸಿಗೆ ಅದು ಬೋಧೆಯಾಗುವಂತೆಯೇ ನನ್ನನ್ನು ಸೃಷ್ಟಿಸಿರುತಿದ್ದನು. ಪುಷ್ಪವೂ, ಕಂಟಕವೂ ಒಂದೇ ತಾಯಿಗಿಡದಲ್ಲಿ ಹುಟ್ಟಿ ವೊಂದೇ ಪ್ರಯೋಜನಕ್ಕೋಸ್ಕರ ಸೃಜಿಸಲ್ಪಟ್ಟುವಾದರೂ ಅವಕ್ಕಿರುವ ಭೇದವನ್ನು ನೋಡಿದೆಯಾ ? ಯೆರಡನ್ನೂ ವೊಬ್ಬ ಭಗವಂತನೇ ಸೃಜಿಸಿದಾನೆ. ಆತನ ಉದ್ದೇಶಗಳುಕೂಡ ಪುಣ್ಯಪಾಪಗಳೆರಡರೊಡನೆಯೂ ನೆರವೇರಿಸಲ್ಪಡುತಿವೆ. ಲೋಕವು ವೊಳ್ಳೆಯದೆನುವಂತವರು ಧರ್ಮದಿಂದಲೂ, ಪುಣ್ಯದಿಂದಲೂ, ಪಾಪವನ್ನು ಜೈಸುವರು ಲೋಕವು ಕೆಟ್ಟದೆನುವಂತವರು ಅದನ್ನು ಬಲದಿಂದ ಜೈಸುವುದಕ್ಕೆ ನೋಡ್ವವರು. ಆ ಶಾಂತವೂ, ಈ ಕಾರ್ಪಣ್ಯವೂ, ಒಂದೇ ಪ್ರಯೋಜನವನ್ನುಂಟಾಗಿವೆ. ಭಗವದುದ್ದೇಶವನ್ನು ನೆರವೇರಿಸುವುದಕ್ಕೆ ಯೆರಡೂ ಆವಶ್ಯಕಗಳಾಗಿಯೆಇವೆ. ನೀನು ಹುಟ್ಟಿದಾಗ ನಿನ್ನ ಜಾತಕವನ್ನು ಅನುಸರಿಸಿ ನೀನುಪುಣ್ಯಕಾರ್ಯದಿಂದಲೂ, ಧರ್ಮವರ್ತ್ತನದಿಂದಲೂ, ಪಾತಕವನ್ನು ಜೈಸತಕ್ಕವಳಾದೆ. ನಾನುಪಾಪವನ್ನು ಪಾಪದಿಂದಲೇ ಜೈಸತಕ್ಕವಳಾದೆನು. ನಾನು ಇಂತಹ ದುರದೃಷ್ಟಶಾಲಿನಿಯಾಗಿಯೂ, ಹತಭಾಗ್ಯಳಾಗಿಯೂ, ಹುಟ್ಟುವುದಕ್ಕೆ ಪೂರ್ವಜನ್ಮದಲ್ಲಿ ನಾನೇನು ಕರ್ಮಗಳನ್ನು ಮಾಡಿದ್ದೆನೋ ತಿಳಿಯದು. ಭಗವಂತನ ಉದ್ದೇಶ್ಯವು ನಡೆದು ತೀರಬೇಕು. ನನಗೆ ಬೇಕಾದುದು ಹಗೆಯನ್ನು ಸಾಧಿಸುವಿಕೆ. ಅವನು ನನ್ನವನಾದರೇನೆ ಗಣೇಶನ ಪಾಪಗಳಿಗೆ ಕ್ಷಮಾಪಣೆಯುಂಟಾಗುವುದು. ಹಾಗಾಗದಿದ್ದರೆ ಕಾಳಿಕಾದೇವಿಯು—— "

"ಅಮ್ಮಾ! ಕಾಳಿಯು ಕಾರ್ಪಣ್ಯ ಸ್ವಭಾವವುಳ್ಳವರ ಕೋರಿಕೆಗಳನ್ನು ತೀರಿಸತಕ್ಕವಳಲ್ಲ. ಅನ್ಯಾಯಗಳು ನಡೆದೆಡೆಯೆಲ್ಲವೂ ಅವುಗಳನ್ನು ಸರಿಪಡಿಸುವಳು. ಹಗೆಯನ್ನು ಸಾಧಿಸುವುದಕ್ಕೋಸ್ಕರ ದೇವತೆಗಳನ್ನಾರಾಧಿಸುವಿಕೆಯು ರಾಕ್ಷಸಕೃತ್ಯವು. ಶಾಸ್ತ್ರಗಳಾವುವೂ ಹಗೆಯನ್ನು ಸಾಧಿ

ಸುವುದನ್ನು ಬೋಧಿಸುವುದಿಲ್ಲ. ಹಿಂದೂ ಮತವು ದಿವ್ಯಮಹಿಮಾತಿಶಯವುಳ್ಳುದು."

"ಅನ್ಯಾಯಕ್ಕೆ ಪ್ರತೀಕಾರ ಮಾಡದಿರುವಿಕೆಯೇ ಪುಣ್ಯವೆಂದು ತಿಳಿಸುವ ಮತವು ನನಗೆ ಅವಶ್ಯಕವಿಲ್ಲ. ನಾನು ಈಗಲೇ ದೇವಿಯ ಸನ್ನಿಧಿಗೆ ಹೋಗಿ ಆಕೆಯು ನನ್ನ ಕೋರಿಕೆಗಳೆಲ್ಲವನ್ನೂ ಕೊಟ್ಟಳೋ, ಹಿಂದೂವು ತದಲ್ಲಿರುವೆನು. ಅದಿಲ್ಲವೋ, ಈ ಮತವನ್ನು ಬಿಟ್ಟುಬಿಡುವೆನು."



## ಪ್ರಕರಣ ೧೪.

ಪ್ರತ್ಯುತ್ತರವನ್ನು ನಿರೀಕ್ಷಿಸದೆಯೇ ಶಕ್ತಿಯು ಆಸ್ಥಳವನ್ನು ಬಿಟ್ಟು ಹೊರಟು ಹೋದಳು. ಆ ಮನೆಗೆ ಅನತಿದೂರವೊಳು ಕಾಳಿಕಾಲಯ ವೊಂದುಂಟು. ತೋಟದ ನಡುವೆ ಕಾಲುದಾರಿಯೊಳು ನಡೆದು ಆ ಗುಡಿಯ ಬಾಗಿಲನ್ನು ಸೇರಿ ಅದರ ಬಾಗಿಲ ಚಿಲುಕ ತಗಲಿಸದಿದ್ದುದರಿಂದ ಮೆಲ್ಲನೆ ಅದನ್ನು ತೆರೆದಳು. ಆಗ ರಾತ್ರಿ ಯೆರಡು ಯಾಮಗಳಾಗಿವೆ. ಆಗ ತಾನೇ ಚಂದ್ರಾಸ್ತಮಯವಾಗುತಿದೆ. ವಾಯುಮಂಡಲದಲ್ಲಿ ಪ್ರಕಾಶಿಸುತಿರುವ ನಕ್ಷತ್ರಗಳ ಕಾಂತಿಯು ಸ್ವಲ್ಪವಾಗಿ ಬಾಗಿಲಿಂದೊಳಕ್ಕೆ ಪ್ರಸರಿಸಿ ಆ ಕತ್ತಲೊಳು ಸ್ವಲ್ಪಮಟ್ಟಿಗೆ ಆಕಾರವು ದೃಷ್ಟಿಗೋಚರವಾಯಿತು. ಭಯಾಧಿದೇವತೆಯು ಅಲ್ಲಿ ನಿದ್ರಿಸುತಿದ್ದು ಆಗತಾನೇ ಯೆಚ್ಚತ್ತು ಮೇಲಕ್ಕೆದ್ದಂತೆ ಆ ಸ್ಥಳವು ಬಹು ಭೀತಿಗಾಕರವಾಗಿದ್ದಿತು.

ಆ ಸಮಯದಲ್ಲಿ ಶಕ್ತಿಯು ತನ್ನ ದೃಷ್ಟಿಯನ್ನು ನಕ್ಷತ್ರಗಳ ಬೆಳಕಿನಿಂದ ಕಾಣ್ಬರುವ ಕಾಳಿಕಾದೇವಿಯ ಭಯಂಕರವಾದ ಮುಖದಮೇಲೆ ನಿಲಿಸಿ ಆ ವಿಗ್ರಹದ ನಟ್ಟನಡುವೆ ಕದಲಮೊದಲದೆ ನಿಂತಿದ್ದಳು. ಆವಿಗ್ರಹದ ಕೆಂಪಾದ ನಾಲಗೆಯು ರಕ್ತವನ್ನು ಸವಿನೋಡಲು ಆಪೇಕ್ಷಿಸುತಿದ್ದಂತೆ ತೋರುತಿದ್ದಿತು. ಆ ಮಸ್ತಕಗಳು ರಕ್ತವನ್ನು ಕಾರುತ ಆಕೆಯನ್ನು ನೋಡುತಿದ್ದಿತು. ರಕ್ತ! ರಕ್ತ!! ರಕ್ತ!!! ಯೆಂದು ಕಾಳಿಯು ಅಭಟಿ

ಸುತ್ತಿರಲು ತಲೆಗಳು ಕೊರಲಿಂದ ತಮ್ಮ ಶಿಕ್ಷೆಗೆ ತಾವೆ ಸೆಡಲಿಬಂದು ಆಕೆಯು ಸುತ್ತಲೂ, "ತೀರಿಸಿಕೊಳ್ಳು, ಹಗೆಯನ್ನು ತೀರಿಸಿಕೊಳ್ಳು" ಯೆಂದು ಕೂಗಿಡುತ ಧುಮುಧುಮುಕಿಡುತಿರುವಂತೆ ತೋರಿತು.

ಹೀಗೆ ಶಕ್ತಿಯು, ಪಿಶಾಚಾವೇಶವಾದವಳಂತೆ ಬೆಚ್ಚಿಬಿದ್ದು ಅರ್ಧ ಸ್ಮೃತಿಯಿಂದಿರುತ ಮೇಲಿನ ಮಾತುಗಳು ಆಕೆಯ ಮನಸಿನಲ್ಲಿ ಬೇರೂರಿದಾಗ ಆಕೆಗೆ ಪ್ರಪಂಚವಾವುದೂ ತಿಳಿಯಲಿಲ್ಲವಾದರೂ, ತನ್ನ ಹೃದಯವನ್ನು ಕದಡಿದ ಆ ಶಕ್ತಿಯ ಪಟುತ್ವಮಾತ್ರ ಗಾಢವಾಗಿ ಮನಸಿನಲ್ಲಿ ಸೇರು ಹುಚ್ಚರವಳಂತೆ "ಪ್ರತೀಕಾರವು! ಪ್ರತೀಕಾರವು! ಅದುವೇ ನನಗೆ ಬೇಕಾದುದು," ಎಂದು ಕೂಗಿಟ್ಟಳು.

ಆಕೆಯು ಈ ಮಾತುಗಳನ್ನಾಡಿ ಸುಮ್ಮನಾದೊಡನೆಯೇ ಪುನಃ ಅಪ್ರದೇಶವೆಲ್ಲವೂ ನಿಶ್ಶಬ್ದವಾಗಿ ಅಲ್ಲಿ ಇನ್ನೊಂದು ಕಂಠಧ್ವನಿಯು ಕೇಳಿಸಿತು. ಆಕೆಯ ಹೃದಯವು ಕಲ್ಲಾಗಿ ಬಿಟ್ಟಿತು. ಕದಲುವುದಕ್ಕೂ ಧೈರ್ಯವಿಲ್ಲದಂತಾಯಿತು. ಆದರೆ ಆ ಮಾತುಗಳು ಮಾತ್ರ ಆಕೆಯ ಕಿವಿಯಲ್ಲಿಬಿದ್ದಿತು.

"ಹಾಗೆಯೇ ಆಗಬಾರದೇಕೆ! ನಿನ್ನ ಕೋರಿಕೆಯು ಸಿದ್ಧಿಸಲಿ! ಅವನ ನಾಶನಕ್ಕೆ ನೀನೇ ಮೂಲವಾಗುವೆ!"

ಈ ಮಾತುಗಳನ್ನು ಕೇಳುತಲೆ ಕಂಪಿತವಾದ ಅಧರಗಳೂ, ಚಂಚಲವಾದ ನೇತ್ರಗಳೂ, ಉಳ್ಳವಳಾಗಿ ಶರೀರವೆಲ್ಲವೂ ಭಯವಿಹ್ವಲವಾಗಿ ಭೀತಚೇತಸ್ಕಳಾಗಿರುವ ಶಕ್ತಿಯ ಕಣ್ಣಿಗೆ ನಿಶ್ಚಲವಾದ ಕಾಳಿಕಾದೇವಿಯ ವಿಗ್ರಹವೊಂದಲ್ಲದೆ ಬೇರೆಯಾವುದೂ ಕಾಣಲಿಲ್ಲ. ಆದರೆ ಆಕೆಯು ನೋಡುತ ನೋಡುತ ಆ ವಿಗ್ರಹದ ನಾಲಗೆಯು ಅಲುಗಾಡುತಿರುವಂತೆಯೂ, ಭೀಕರವಾದ ಕಣ್ಣುಗಳು ಕೆಂಡಗಳನ್ನು ಕಾರುತಿರುವಂತೆಯೂ, ತೋರಿ, ಧೈರ್ಯವತಿಯಾದ ಆ ತರುಣಿಯು ಭೀತಿಯನ್ನು ತೊರೆದು ಹೀಗೆ ಪ್ರಾರ್ಥಿಸಿದಳು. "ಎಲೌ! ದೇವಿಯೆ! ನನಗೆ ಪ್ರತೀಕಾರವಾಗಬೇಕು. ಆದರೂ ಆತನ ರಕ್ತವು ನನಗೆ ಬೇಡ. ಆತನ ಅವಸಾನವನ್ನು ನಾನು ಬಯಸುವುದಿಲ್ಲ. ನನಗೀಪ್ರಪಂಚದಲ್ಲಿ ಪ್ರೇಮಾಸ್ಪದವಾದುವೆಲ್ಲವೂ ಹೋಗಿಬಿಟ್ಟಿತು. ನನಗೆ ಬೇಕಾದು

ಷು ಆತನ ಪ್ರೀತಿಯೊಂದಲ್ಲದೆ ಬೇರೆ ಯಾವುದೂ ಇಲ್ಲ. ನನಗೆ ಈ ವು ಹಾವರವನ್ನು ಪ್ರಸಾದಿಸು. ಆತನನ್ನು ನನ್ನವನನ್ನಾಗಿ ಮಾಡು. ”

ಒಡನೆಯೇ “ ಆತನು ನಿನ್ನೊಡನೆಯಾಗಲಾರನು. ಯೆಂದಿಗೂ ಆಗಲಾರನು. ಆಗುವುದೇ ಇಲ್ಲ. ” ಎಂಬ ಪ್ರತಿಧ್ವನಿಯು ಕೇಳಿಸಿತು.

ಅಷ್ಟಕ್ಕೆ ಆಕೆಯು ಶರೀರದೊಳಗಿನ ರಕ್ತವು ಬಿಸಿಯಾಗಿ ರಾಜಪುತ್ರ ಸಹಜವಾದ ಕ್ಷಾತ್ರಾಭಿಮಾನವು ಆಕೆಯಲ್ಲಿ ಮೂರ್ತೀಭವಿಸಿ, ಲೇಶಮಾತ್ರವೂ ಭೀತಿಯಿಲ್ಲದೆ ನಿರ್ಭೀಕ ಧೈರ್ಯ ಗಾಂಭೀರ್ಯ ವೃತ್ತಿಯೊಡನೆ “ ಯಾರು ನೀನು? ಇದು ದೇವಿಯ ವಾಕ್ಯವಲ್ಲ! ನೀನಾರು ಬೇಗಹೇಳುವಳಾಗು ” ಎಂದು ಗದ್ದಿಸಿ ನುಡಿದಳು.

ನಂತರ ಆ ವಿಗ್ರಹದ ಹಿಂಭಾಗದಿಂದ ಒಬ್ಬ ಪುರುಷನು ಈಚೆಗೆ ಬಂದನು. ಕತ್ತಲು ಅಷ್ಟುಮೋರೆಯಾಗಿರಲು ಆಕೆಯ ಕಣ್ಣುಗಳು ಅವನನ್ನು ನೋಡುವಂತಾಯಿತು. ಆತನು ಕಾಪಾಲಿಕ ಮತಸ್ಥನಾದ ಕಾಳಿಕಾ ಭಕ್ತನೆಂತಿದ್ದನು.

ಅವನ ಉಡುಪುಗಳು ಕಾಷಾಯುವರ್ಣಗಳುಳ್ಳುದಾಗಿದ್ದುವು. ಆತನ ಶಿಖೆಯು ಜಡೆಗಳಾಗಿ ಬೆಳೆದಿದ್ದಿತು. ಆತನ ಫಾಲಮಧ್ಯದೊಳು ರಕ್ತಚಂದನ ತಿಲಕವು ಪ್ರಕಾಶಿಸುತಿದ್ದಿತು. ಆತನ ಕೊರಳಲ್ಲಿ ಕಪಾಲಮಾಲಿಕೆಯು ನೇತಾಡುತಿದ್ದಿತು. ಆದರೂ ಶಕ್ತಿಯು ಆತನನ್ನು ನೋಡಿ ಅಂಜದೆ ಚೆನ್ನಾಗಿ ದೃಷ್ಟಿಸಿ, “ ನೀನು ಯಾರು? ” ಯೆಂದು ಪುನಃ ಕೇಳಿದಳು.

“ ನಾನು ದೇವೀಸೇವಕನು. ಆ ಮಹಾದೇವಿಯ ಅಜ್ಞೆಯಂತೆ ಇಲ್ಲಿಗೆ ಬಂದಿರುವೆನು. ಆ ದೇವಿಯ ಅನುಗ್ರಹದಂತೆ ನಾನು ನಿನಗೊಂದು ಸಂಗತಿಯನ್ನು ಹೇಳಬೇಕಾಗಿದೆ. ಪ್ರಬಲತಮವಾದ ನಿನ್ನ ಭಾವಿಭಾಗ್ಯಕೊಂದು ದೊಡ್ಡ ಕೇಡು ಮೂಡುವಂತಿದೆ. ಚಂದ್ರನಿಗೆ ರಾಹು ನಿರೋಧದಂತೆ ನಿನ್ನ ವಿನಿರ್ಮಲ ಭವಿಷ್ಯಚ್ಛುಭೋದಯಕ್ಕೆ ವೊಬ್ಬ ಕ್ರೂರಾತ್ಮನು ಭಂಗ ಪಡಿಸುವುದಕ್ಕಿರುವನು. ಆ ಪೆಟ್ಟನ್ನು ತಪ್ಪಿಸಿಕೊಳದಿದ್ದರೆ ಕೇಡುಮೂಡುವುದು ನಿಜವು. ನಿನ್ನ ಕ್ಷೇಮವನ್ನೆ ಬಯಸುತಿರುವಳಾದರೆ, ನಿನ್ನ ಹೃದ

ಯುವೀಧಿಯಲ್ಲಿ ಕಿಂಚಿತ್ತಾದರೂ ಕಾಳೀಭಕ್ತಿಯು ಇದ್ದಿತಾದರೆ, ನಿರ್ದಿಷ್ಟವಾದ ಉದ್ದೇಶದಿಂದ ನಿನ್ನ ಹೃದಯವು ಯಾರಿಗೋಸ್ಕರ ಅನವಶ್ಯಕವಾಗಿ ಪರಿತಪಿಸುತಿದೆಯೋ, ಅವನನ್ನು ಕೊನೆಮುಟ್ಟಿಸಬೇಕೆಂದು ಶ್ರೀದೇವಿಯನ್ನು ಪ್ರಾರ್ಥಿಸುವಳಾಗು. ನಿನ್ನ ಹೃದಯವನ್ನು ಬೇರ್ಪಡಿಸಿ, ಸ್ತ್ರೀಪ್ರಾರ್ಥನೆಯೆಂಬ ಕೋಮಲ ಶಿರೀಷಕುಸುಮವನ್ನು ನಿರ್ದಯವಾಗಿ ಹಿಸುಕಿಹಾಕಿ, ನಿನ್ನನ್ನು ಅಧೋಗತಿಯ ಪಾಲುಮಾಡಿದ್ದ ಆ ನಿಷ್ಕರುಣಿಯ ದಯೆಯನ್ನೇ ನೀನು ಸಂಪಾದಿಸಿಕೊಳ್ಳಲೆಣಿಸುವೆಯಾದರೆ. ನಿನ್ನ ದಾರಿಯೊಳು ನೀನು ಹೊರಡುವಳಾಗು. ನಿನ್ನ ಅವ್ಯಕ್ತ ಪ್ರಾರ್ಥನೆಗಳಿಂದ ದೇವಿಯನ್ನು ಅಪಮಾನಪಡಿಸದೆ, ಆತನ ಬಳಿಗೆ ಹೋಗಿ ಕಾಲ್ಗಳಮೇಲುರುಳಿ ಬೇಡಿಕೊಳುವಳಾಗು. ನಂತರ ಆತನು ತನ್ನ ಹೃದಯವನ್ನು ನಿನಗೆ ಕೊಡದಿದ್ದರೆ ಆತನು ಮಾಡುವ ಅವಮಾನವನ್ನು ಅನುಭವಿಸುವಳಾಗು. ಆತನು ನಿನ್ನನ್ನು ಪತ್ನಿಯಾಗಿ ಪರಿಗ್ರಹಿಸಲಾರನು. ಆದರೆ ಆತನ—— ”

ಎಂದು ಯೇನನ್ನೋ ಹೇಳಹೋಗುತಿರಲು ಶಕ್ತಿಗೆ ಅಪರಿಮಿತವಾದ ಕೋಪಬಂದು ಹಿಂದಿನದಿನದ ಪರಾಭವವು ಮನಸಿನೊಳು ಬೇರೂರಿ ಚೇಳು ಹೊಡೆದಂತಾಗಿ “ ಯಾರುನೀನು? ಸನ್ಯಾಸಿಯೇ? ಅಥವ ರಾಕ್ಷಸನೇ! ಆತನು ನನಗೆ ಅಗತ್ಯವಿಲ್ಲ. ಈಗ ಆತನ ಮಾತನ್ನೆತ್ತಿದರೆ ನನಗೆ ಮೈಯೆಲ್ಲವೂ ಉರಿಯುತ್ತದೆ ” ಅಂದಳು.

“ ನೀನು ಕೋರಿದವನು ನಿನಗೆ ಲಭಿಸಲಾರನು. ಆತನು ಯೆಂದೆಂದಿಗೂ ನಿನಗೆ ದಕ್ಕಲಾರನು. ನಿನ್ನನ್ನು ಆತನು ಯೆಂದೆಂದಿಗೂ ಧರ್ಮಪತ್ನಿಯಾಗಿ ಅಂಗೀಕರಿಸನು. ನನಗೆ ಈಗ ಸಮಾಧಾನವನ್ನು ಹೇಳುವಳಾಗು. ನಿನ್ನ ಹೃದಯವನ್ನು ಭಿನ್ನಪಡಿಸಿದ ಅವನಿಗೆ ಬಾಣಸಗಿತಿಯಾಗಿರುವೆಯಾ? ” ಇಲ್ಲದೆ:--

ಅನುತಿರಲು “ ಓಹೋ ! ನೀನು ನನಗೆ ರಾಣಿಯಾಗಿರುವೆಯಾ ? ” ಎಂದು ಇನ್ನೊಂದು ಧ್ವನಿಯು ಕೇಳಿಸಿತು. ಅದು ಮೃದುವಾಗಿಯೂ ಶಾಂತವಾಗಿಯೂ ಇದ್ದಿತು, ಪ್ರೊಢನೆಯ ಕಾರುಣ್ಯದಿಂದ ಕಳಕಳಿಸುವ ಪುರುಷ

ವಿಗ್ರಹವೊಂದು ಹಿಂಭಾಗದಿಂದ ಬಂದಿತು. ಅಷ್ಟರೊಳು ರಾತ್ರಿಯೆಲ್ಲವೂ ಕಳೆದು ಬೆಳಕಾಗುತ ಬಂದಿತು. ಆ ಬೆಳಗಿನ ಝಾವದ ಬೆಳಕಿನಲ್ಲಿ ಶಕ್ತಿಯು ಸುಲ್ತಾನನ ಕುಮಾರನಾದ ಗಿಯಾಜುದ್ದೀನನ ಗುರುತು ಕಂಡಳು. ಆತನು ಸ್ವಲ್ಪ ಸಮೀಪಿಸಿ ಆಕೆಯ ಕೈಯನ್ನು ತನ್ನ ಕೈಯಿಂದ ಹಿಡಿದುಕೊಂಡನು. ಸಂಕಟಸಂತೋಷಗಳೂ, ದಾಕ್ಷಿಣ್ಯಸಂಕೋಚಗಳೂ, ಏಕಕಾಲದಲ್ಲಿ ಆವರಿಸಿದುವು. ಆಕೆಯ ಮನಸ್ಸಿನೊಳು ಭಯಸಂಶಯಗಳು ಮುಪ್ಪುರಿಗೊಂಡುವು. ಆಕೆಗೀಗ ಒಂದುದಾರಿಯಲ್ಲಿ ಅಧಿಕಾರ, ಗೌರವ, ಪ್ರೇಮ, ಇವು ಬಾ! ಬಾರೆಂದು ಆಹ್ವಾನ ಮಾಡುತ್ತಿವೆ. ಯೆರಡನೆಯ ಮಾರ್ಗದಲ್ಲಾದರೊ, ತಿರಸ್ಕಾರ, ಪರಾಭವ, ಅಪಕೀರ್ತಿ, ಇವು, ಮೇಲೆ ಕವಿಯಲು ಸಂಸಿದ್ಧವಾಗಿರುತ್ತಿವೆ. ಯೆರಡನೆಯವನಿಗೋಸ್ಕರ ಆಕೆಯು ತನ್ನ ಸರ್ವಸ್ವವನ್ನೂ ಅರ್ಪಿಸಲು ಸಿದ್ಧಳಾಗಿದ್ದಳಾದರೂ, ಆತನಮೇಲಣಾಸೆಯು ನಿರಾಸೆಯಾಯ್ತು. ಆಕೆಯ ಸ್ಥಿತಿಯು ಬೇಟೆಗಾರರಿಂದ ಸಮುದ್ರತೀರಕ್ಕೆ ವೋಡಿಸಲ್ಪಟ್ಟ ಜಿಂಕೆಯಂತಿದ್ದಿತು. ಹೇಗುಸಾಹೆ ಆಕೆಯ ಹೃದಯವು ಅಂಗೀಕರಿಸದಿದ್ದರೂ ತುಟಿಗಳು ಮಟ್ಟಿಗೆ "ಲೋಕನಾಥನೇ! ನಾನು ನಿನ್ನವಳಾಗಿರುವೆನು." ಎಂಬು ನುಡಿದುವು. ನಂತರ ಆ ಯುವರಾಜನು ತನ್ನ ಕೊರಳಲ್ಲಿದ್ದ ರತ್ನಹಾರವನ್ನು ತೆಗೆದು ಆ ಕಂಬುಕಂಠಿಯ ಕಂಠವನಲಂಕರಿಸಿ ಮುಗುಳ್ನಗೆಯನ್ನು ತೋರಿದನು. ಆದರೆ ಆ ತರುಣೀಮಣಿಗೆ ಧೈರ್ಯವು ತೊಲಗಿ, ಮುಖವು ಬಿಳುಪೇರಿ, ತುಟಿಗಳು ಝಂಝಾಮಾರುತನಿಗೆ ಚಲಿಸುವ ಪದ್ಮಪತ್ರಗಳಂದದಿ ಕಂಪಿಸುತ್ತಿದ್ದುವು.



## ಪ್ರಕರಣ ೧೫.

ಶಕ್ತಿಯು—ತನ್ನನ್ನು ಬಿಟ್ಟು ಹೊರಟು ಹೋದುದನ್ನು ಯೋಗಿನಿಯು ನೋಡಿರಲಿಲ್ಲ. ಆದುದರಿಂದ ಹಿಂದೆ ತಾನು ಮಾತನಾಡುತಿದ್ದುದನ್ನು ಅನುಸರಿಸಿಯೆ ಪಾಪದಿಂದ ಪಾಪವನ್ನು ಕಳೆಯಲೆಣಿಸುವುದೂ, ಅನ್ಯಾಯದಿಂದ ನ್ಯಾಯವನ್ನು ಸಾಧಿಸಲೆಣಿಸುವುದೂ, ಸರಿಯಲ್ಲ. ಅದರ ದೆಸೆಯಿಂದ

ದೋಷಭಾರವೂ ಅನ್ಯಾಯಭಾರವೂ ಹೆಚ್ಚುವುದು. "ಪುಣ್ಯಃ ಪುಣ್ಯೇನಕರ್ಮ ಣಾಭವತಿ, ಪಾಪಃ ಪಾಪೇನ! "ಇದು ಸರಿಯಾದ ಶಾಸ್ತ್ರೋಪದೇಶವು." ಎಂದು, ತಾನೊಬ್ಬಳಾಗಿಯೇ ಅಲ್ಲಿರುವುದನ್ನು ನೋಡಿ ಮೌನವನ್ನು ವಹಿಸಿದಳು. ಆದರೂ ಆಕೆಯ ಮನಸ್ಸುಮಾತ್ರ ಕಳವಳಿಸುತಿದ್ದಿತು. ಕಟ್ಟಡದ ಬಾಗಿಲು ತೆರೆಯಲ್ಪಟ್ಟಿದ್ದ ಗಾಳಿಯಿಂದ ದೀಪವು ತಣ್ಣಗಾಯ್ತು. ವೊಳಗಿಂದಲೆ ನಕ್ಷತ್ರಗಳಿಂದ ಪ್ರಕಾಶಿಸುತಿರುವ ಆಕಾಶವನ್ನು ನೋಡಿದಳು. ಉತ್ತರ ದಿಗ್ಭಾಗದಲ್ಲಿ ಸಪ್ತರ್ಷಿಮಂಡಲವೂ, ಧೃವನಕ್ಷತ್ರವೂ, ಪ್ರಕಾಶಿಸುತಿದ್ದಿತು. ಯೋಗಿನಿಗೆ ಅದ್ಭುತವು ತೋರಿತು. ಭಗವನ್ಮಾಯೆಯು ವಿಚಿತ್ರವಾಗಿ ಕಂಡು ಬಂದಿತು. ಯೋಗಾಭ್ಯಾಸಕ್ಕೆ ಆಶ್ರಯಭೂತವಾದ ಭಗವದ್ಭಕ್ತಿಪೂರಿತವಾದ ಆಕೆಯ ಮನಸ್ಸಿಗೆ ಆ ನಕ್ಷತ್ರಗಳನ್ನು ನೋಡಿ ಅನೇಕಾನೇಕ ಮಹದ್ವಿಷಯಗಳು ಬೋಧೆಗೆ ಬಂದು ಭಗವತ್ಸಾನ್ನಿಧ್ಯವನ್ನು ಹೊಂದಿದಂತಾಯ್ತು. ಆಗ ಆಕೆಯು ಹೀಗೆ ಪ್ರಾರ್ಥಿಸಿದಳು.

"ಎಲೈ ಭಗವಂತನೇ! ಮಹತ್ತರವಾದ ನಿನ್ನ ನಿರ್ಮಾಣವನ್ನು ವಿಧೇಯಳಾಗಿಯೂ, ಭಕ್ತಿಪೂರ್ಣಳಾಗಿಯೂ, ಇರುವ ನನಗೆ ತೋರುವನಾಗು. ಈ ಭೂಮಿಯಮೇಲೆ ವೋಡಾಡುವ ನಾವು ಎಷ್ಟಾದರೂ ಅಲ್ಪಮತಿಗಳು. ಅಲ್ಪರು. ನಮ್ಮ ಕಾರ್ಯಗಳಮೇಲೆಯೂ, ನಮ್ಮ ಪ್ರವೃತ್ತಿಯಮೇಲೂ, ನಾವುಯಾವಬಗೆಯಿಂದಲೂ ಕೈಹಾಕುವಂತಿಲ್ಲವಷ್ಟೆ? ನಿನ್ನ ಕೈಕೇಲು ಬೊಂಬೆಗಳಾಗಿ ಅಲಸಿಕೆ ಹೊಂದಿದ ಪಾಂಥರ ಚಿತ್ತವೃತ್ತಿಯಂತೆ ಆಚರಿಸುತಿರತಕ್ಕವರೆ! ಪುಣ್ಯ ಪಾಪಗಳು, ಸುಖದುಃಖಗಳು, ಭಾಗ್ಯಾಭಾಗ್ಯಗಳು, ಮೊದಲಾದುವೆಲ್ಲವೂ, ವ್ಯಷ್ಟಿಯಲ್ಲಿ ನಿನ್ನ ಸೃಷ್ಟಿಯೆಲ್ಲವನ್ನೂ ಸಂರಕ್ಷಿಸುವಿಕೆಯೊಂದೇನೇ ಪ್ರಯೋಜನವು? ಹಾಗಾಗಿದ್ದ ಪಕ್ಷದಲ್ಲಿ ಮಾನವನು ಮಾಡುವ ಪುಣ್ಯಪಾಪಗಳಿಗೆ ಅಂತಹ ದುಸ್ತರವಾದ ಬಹುಮಾನಗಳೂ, ಶಿಕ್ಷೆಗಳೂ, ಇರುವಿಕೆಯೇಕೆ? ನಾವು ಮಾಡುವ ಕೆಲಸಗಳು ವಿಸ್ತೃತವಾದ ವಾಯುವಿನಂತಿವೆ. ನಾವು ಇದನ್ನು ಮಾಡಬೇಕೆಂಬ ಉದ್ದೇಶದಿಂದ ಮಾಡುವ ಅವಶ್ಯವಿಲ್ಲ. ಅವುದೋ. ಪ್ರಾರಂಭಿಸಲು ಅದು ಅವುದೋ ಬಗೆಯಿಂದ ಬೆಳೆದು ಹೋಗುತಿವೆ. ಅದಕ್ಕೆ ಅಂತವೆ.

ಲ್ಲಿಯೋ, ಹೇಗೋ, ನಮಗೆ ತಿಳಿಯದು. ತಂದೆಗಳು ಮಾಡಿದ ಪಾಪವು ಮಕ್ಕಳನ್ನು ಸೇರುತವೆ. ಒಬ್ಬರು ಮಾಡಿದುದಕ್ಕೆ ಮತ್ತೊಬ್ಬರು ಬಾಧೆಪಡಬೇಕೆ? ನಾನು ಮಾಡಿದ ಪಾಪಕ್ಕೇ ಮಗುವು ದುಃಖಭಾಗಿನಿಯಾಗಬೇಕೇ? ಇದು ನಿನ್ನ ಅಭೀಷ್ಟವೇ? ಅಥವ ನಿನ್ನ ಉದ್ದೇಶ್ಯವನ್ನು ತಿಳಿಯಲಾರದ ನನ್ನ ಅಜ್ಞಾನವೇ ? ಬಹುಶಃ ಈ ಮೂಲಕವಾಗಿ ಆಕೆಯ ಅದೃಷ್ಟವು ಫಲಿಸುವುದಕ್ಕಿರುವುದೇ ? ಹಾಗಲ್ಲದೆ ಪೂರ್ವಜನ್ಮದೊಳಗಿನ ದುಷ್ಕರ್ಮ ವಿಮೋಚನೆ ಮಾಡುವುದಕ್ಕೋಸ್ಕರ ನನಗೂ ಆಕೆಗೂ ಈ ಅನುಬಂಧವನ್ನು ವಿಧಿಯೇ ಕಲ್ಪಿಸಿತೇ ? ”

ಈಗ್ಗ ಆ ಯೋಚನೆಗಳೆಲ್ಲವನ್ನೂ, ತಡೆದಿಟ್ಟು ಆಕೆಯು ಕಣ್ಣುಗಳನ್ನು ಮುಚ್ಚಿ ಯೋಗಸಮಾಧಿಯಲ್ಲಿ ಮನಸ್ಸನ್ನು ಲೀನಮಾಡಿದಳು. ಅಸಂಖ್ಯಾತವಾದ ನಕ್ಷತ್ರಕಾಂತಿಗಳು ಆಕೆಯ ಆತ್ಮನಲ್ಲಿ ಪ್ರಕಾಶಿಸುತಿದ್ದಿತು. ಆಪ್ರಕಾಶದ ದೆಸೆಯಿಂದ ಸೃಷ್ಟಿರಹಸ್ಯವು ಆಕೆಗೆ ದೃಷ್ಟಿಗೋಚರವಾಯ್ತು. ಆಕೆಯಮನಸ್ಸು ಅಮಂದಾನಂದ ಕಂದಳಿತವಾಗಿ ಬಿಟ್ಟಿತು. ಅಂತಹ ಹೃದಯದಿಂದ ಆಕೆಯು ಪುನಃ ಹೀಗೆ ಪ್ರಾರ್ಥಿಸತೊಡಗಿದಳು. “ಓ ಭಗವಂತನೇ ! ನನಗೆ ಸತ್ಯವು ಬೋಧೆಯಾಯ್ತು. ನಿನ್ನ ಸೃಷ್ಟಿಯಲ್ಲಿ ಯಾವುದೂ ವ್ಯರ್ಥವಲ್ಲ. ಉತ್ತಮರುಗಳಾದ ದೇವತೆಗಳಮೊದಲು ಅಣುರೇಣುವಿನವರೆಗೂ ಪ್ರತಿವಸ್ತುವಿಗೂ,ನಿರ್ದಿಷ್ಟವಾದಉದ್ದೇಶವೂ,ಪ್ರಯೋಜನವೂ, ಕರ್ತವ್ಯವೂ, ಉಂಟು. ನಿನ್ನ ದೃಷ್ಟಿಗೆ ಇದು ಸ್ವಲ್ಪ,ಇದು ಹೆಚ್ಚೆಂಬ ಭೇದವೇನೂ ಇಲ್ಲ, ಅಣುವಿನಲ್ಲಿಯೂ, ಬ್ರಹ್ಮಾಂಡದಲ್ಲಿಯೂ, ನೀನು ವ್ಯಾಪ್ತವಾಗಿರುವೆ. ಅಣುವಿನಲ್ಲಿರುವ ನಿನ್ನ ತೇಜೋರೇಣುವು, ಕಾಲವು ನಡೆಯೆ ನಡೆಯೆ ಮಹತ್ತರವಾದ ಜೀವಿಯಾಗಿ ಪರಿಣಮಿಸುವುದು. ಕೊಟ್ಟ ಕೊನೆಯವರೆಗೆ ನಿನ್ನ ಸ್ವರೂಪವೇ ಪರಿಪಾಲಿಸುವುದು. ಸೃಷ್ಟಿಯೆಲ್ಲವೂ ಪರಿಣಾಮದಲ್ಲಿ ವೃದ್ಧಿಹೊಂದಿ ಸಾರ್ವತ್ರಿಕವಾದ ವ್ಯಕ್ತಿಯಲ್ಲಿ ಪರ್ಯವಸಿತವಾಗುವುದು. ಅಣುವಿನ ಮೊದಲು ಬ್ರಹ್ಮವಿದರವರೆಗಿನ ಯೆಲ್ಲರೂ ಸಂಸಾರ ಚಕ್ರದಲ್ಲಿ ಸಿಲುಕಿ ಪರಿಭ್ರಮಿಸಿ, ಕೊನೆಗೆ ಗಮ್ಯಸ್ಥಾನವನ್ನು ಸೇರುವರು. ಸೃಷ್ಟಿರಹಸ್ಯಗಳನ್ನು ತಿಳಿದು, ಮೋ

ಕ್ಷವನ್ನು ಸಂಪಾದಿಸಿಕೊಂಡು, ಆನಂದವನ್ನು ಅನುಭವಿಸುವುದಕ್ಕೋಸ್ಕರ ಅನೇಕ ಜನನ ಮರಣಗಳನ್ನು ಹೊಂದುತಿದೇವೆ. ಸಂಸಾರ ಸಾಗರ ಯಾತ್ರೆಯಲ್ಲಿ ಪುಣ್ಯಪಾಪಗಳು, ರಾಗವಿರಾಗಗಳು, ಸುಖದುಃಖಗಳು, ಇವೆಲ್ಲವೂ ತರಣಿಯನ್ನು ಅಪರತೀರಕ್ಕೆ ಸೇರಿಸುವುದಕ್ಕೋಸ್ಕರ ಕೆಲಸ ಮಾಡುತಿರುವುದು. ಆಹಾ ! ಪರಮೇಶ್ವರಾ ! ಸೃಷ್ಟಿಕರ್ತನೇ ! ಈ ಯಾತ್ರಾಜನರ ತರಣೋಪಾಯವನ್ನು ಕುರಿತು ನೀನು ಮಾಡಿದ ಮಾರ್ಗಗಳನಂತಗಳು. ಅವುಗಳಲ್ಲಿ ಯಾರಿಗೆ ಇಚ್ಛೆ ಬಂದ ಯಾನಪಾತ್ರೆಯನ್ನವರು ಯೇರಬೇಕಾಗಿದೆ. ನಮ್ಮ ದೃಷ್ಟಿಯು ಅಲ್ಪವು. ಸ್ವಲ್ಪ ದೂರದ ಮಟ್ಟಿಗೇ ಅದು ಪ್ರಸರಿಸಬಲ್ಲುದು. ಆದುದರಿಂದ ನಟ್ಟನಡುವೆ ಯಾವುದಾದರೂ ಆತಂಕವುಂಟಾದೀತೆಂಬ ಭೀತಿಯು ನಮ್ಮನ್ನು ಪೀಡಿಸುತಿರುವುದು. ಆದರೂ ನಿತ್ಯವಾದ ಬ್ರಹ್ಮಜ್ಞಾನವು ಇವೆಲ್ಲಕ್ಕೂ ಚುಕ್ಕಾಣಿಯಂತಹುದು. ನಿನ್ನನ್ನೊಂದುಸಲ ತಿಳಿದುಕೊಂಡವನು ಸ್ವಸ್ಥನಾಗುವನು. ನೀನು ಪಾಪದಿಂದ ಪುಣ್ಯವನ್ನೂ, ಕೋರಿಕೆಯಿಂದ ವೈರಾಗ್ಯವನ್ನೂ ಉಂಟುಮಾಡುತಿರುವೆ. ಕತ್ತಲು ಕವಿದ ಮೋಡಗಳ ನಡುವೆ ನಿನ್ನ ಕರುಣೆಯು ಪ್ರಕಾಶಿಸುತಿರುವುದು. ನಿನ್ನ ಪ್ರಭಾವವು ಅಗ್ರಾಹ್ಯವು. ನಿನ್ನ ಶಕ್ತಿಯು ಅನಂತವು. ನೀನು ಯಾರಿಗೆ ಜ್ಞಾನವನ್ನು ಪ್ರಸಾದಿಸುವೆಯೋ, ಅವರು ಮಟ್ಟಿಗೆ ನಿನ್ನನ್ನು ವೊಂದುರೀತಿಯಾಗಿ ನೋಡಬಲ್ಲರು. ಎಲೈ ಲೋಕರಕ್ಷಕನೆ ! ನನ್ನನ್ನು ಈ ಪ್ರಪಂಚದಲ್ಲಿ ನಿಲಿಸಿರುವೆ ಯೇಕೆ? ಎಲೈ ಲೋಕನಾಯಕನೇ ! ನನಗೆ ಈ ಜನ್ಮವನ್ನು ನೀನು ಅನುಗ್ರಹಿಸಿ ಕರುಣೆ ತೋರಿರುವೆಯಾದುದರಿಂದ ನಾನು ಮಾಡಬೇಕಾಗಿರುವ ಕೆಲಸವಾವುದುಳಿದಿರುವುದೋ ಅನುಗ್ರಹಿಸುವನಾಗು.”

ಎಂದು ಇಂತಹ ಯೋಚನಾನಿಮಗ್ನಮಾನಸಳಾಗಿರಲು ಆಗ ತೇಜಿಯ ಖುರಪುಟಧ್ವನಿಯೊಂದು ಕಿವಿಗೆ ಬಿದ್ದು ಆಕೆಯ ಧ್ಯಾನಕ್ಕೆ ಆತಂಕಪಡಿಸಿತು. ಆ ಪ್ರಾತಃಕಾಲ ಸಂಧ್ಯಾರಾಗದಲ್ಲಿ ತಲೆಪಾಗನ್ನು ಧರಿಸಿದ ಮಹಮದೀಯ ವಿಗ್ರಹವೊಂದು ಆಕೆಯ ದೃಷ್ಟಿಗೋಚರವಾಯಿತು.

ಅವನು “ತಾಯೇ! ನಿನಗೊಂದು ಸಲಾಂ; ದಯೆಯಿಟ್ಟು ಮೊಂ

ದುಸಲ ಈಚೆಗೆ ಬರುವೆಯಾ? ಪಾದುಷಾಹರ ಅನುಗ್ರಹವನ್ನು ನಿಮಗೆ ತಿ ಳಿಸಬೇಕಾಗಿರುವುದು!" ಅಂದನು. ಕೂಡಲೇ ಆ ಯೋಗಿನಿಯು ಬಾಗಿಲ ಬಳಿಗೆ ಬಂದು ನಿಂತು ಸ್ವಲ್ಪದೂರದ ವೊಂದು ಮರದಡಿಯೊಳು ಶ್ರೇಷ್ಠವಾದ ಅಲಂಕಾರಗಳಿಂದೊಪ್ಪುವ ಪಲ್ಲಕ್ಕಿಯೊಂದನ್ನೂ, ವಾಹಕರನ್ನೂ, ರಾಜಭಟರನ್ನೂ ಕಂಡಳು. ಇವರನ್ನು ನೋಡಿ ಆಶ್ಚರ್ಯಮಗ್ನಮಾನಸಳಾಗಿ, ಇದೇಕೆಂದು ಆ ಕುದುರೆಯ ಸವಾರನನ್ನು ಕೇಳಿದಳು.

"ನಮ್ಮ ಬೇಗಂ ರಾಣಿಯವರನ್ನು ಕರೆದುಕೊಂಡುಹೋಗುವುದಕೆ! ನಮ್ಮ ಆಳುವ ಸುಲ್ತಾನರವರು ತಮ್ಮ ವಶದೊಳಿರುವ ಬಾಲಿಕೆಯನ್ನು ಮದುವೆಯಾಗಲಪೇಕ್ಷಿಸಿರುವರು. ದಯೆಯಿಟ್ಟು ಆಕೆಯವರನ್ನು ಹೊರಗೆ ಕಳಿಸಬೇಕು." ಎಂದು ಪ್ರತ್ಯುತ್ತರವಿತ್ತನು.

ಈ ಮಾತುಗಳನ್ನು ಕೇಳುತಲೆ ಆಕೆಗೆ ಸಹಜವಾದ ಶಾಂತವು ಹೋಗಿ "ಆಕೆಯು ಹಿಂದುವೆಂದು ನಿಮ್ಮ ಪಾದುಷಾಹನು ಅರಿಯನೋ? ಆಕೆಗೂ, ತನಗೂ, ಸಂಬಂಧವು ಕಲೆಯಲಾರದು." ಎಂದು ಕೋಪದಿಂದ ನುಡಿದಳು.

"ಮುಸಲ್ಮಾನರು ಹಿಂದುಗಳನ್ನು ಮದುವೆಮಾಡಿಕೊಳ್ಳಬಹುದು. ನಮ್ಮ ಮತವು ಘನತಮವಾದುದು. ನಮ್ಮ ಮಹಮುದುಮತವೇ ಲೋಕಮತವು; ಅದಕ್ಕೆಲ್ಲರೂವೊಂದೇ" ಎಂದು ಅಶ್ವಿಕನು ಸಮಾಧಾನ ನುಡಿದನು.

"ಇದ್ದೀತು, ಆಕೆಯ ಮತವನ್ನು ಆಕೆ ತ್ಯಜಿಸಬೇಕೇಕೆ?" ಎಂದು ಯೋಗಿನಿಯು ಬದುಲು ಹೇಳಿದಳು.

ಅದಕ್ಕೆ ಅವನುನಕ್ಕು "ಸುಲ್ತಾನನನ್ನು ಕೈಹಿಡಿಯಲು ಮತವನ್ನು ಬಿಡಲಾರದಂತಹ ತಿಳಿವು ಸಾಲದ ಹೆಂಗುಸು ಭೂಮಿಯಮೇಲಿರಲಾರಳು. ನಾನು ಆ ತರಳೆಯನ್ನು ಇಲ್ಲಿಗೆ ತಂದು ಬಿಡಬೇಕೆಂದು ಹೇಳುತಿದೇನೆ. ಮಿಕ್ಕುಳಿದ ಕಾರ್ಯಗಳೆಲ್ಲವೂ ಕ್ರಮವಾಗಿ ನಡೆಯುವುದು." ಎಂದುಹೇಳಿದನು.

"ಅದಾಗಲಾರದು. ಆಕೆಯ ತಂದೆಯು ಆಕೆಯನ್ನು ನನ್ನ ವಶಪಡಿಸಿರುವನು. ನಾನಾಕೆಯನ್ನು ಯಾರಿಗೂ ಕೊಡತಕ್ಕವಳಲ್ಲ."

ನೀನು ಪಾದುಷಹನ ಅಜ್ಞೆಯನ್ನು ತಿರಸ್ಕರಿಸುತಿರುವೆಯೋ ಏನು?

ನೀನು ಆಕೆಯನ್ನು ಕಳುಹಿಸದಿರುವೆಯಾದರೆ ದೇವಾಲಯದೊಳಕ್ಕೆ ನಾನೇ ಪ್ರವೇಶಿಸುವೆನು."

"ಪ್ರಜೆಗಳನ್ನು ಕಾಪಾಡುವುದು ರಾಜಧರ್ಮವೇ ಅಲ್ಲದೆ ಹಿಂಸಿಸುವಿಕೆಯಲ್ಲ. ನಾನೇನೋ ಆಕೆಯನ್ನು ಕೊಡತಕ್ಕವಳಲ್ಲ. ಹೋಗಿ ನಿನ್ನ ಪಾದುಷಹನೊಡನೆ ಅರಿಕೆಮಾಡು."

"ನೀನು ನಿನ್ನ ಕ್ಷೇಮವನ್ನೇ ಬಯಸುತಿರುವವಳಾದರೆ ಆ ತರುಣಿಯನ್ನೊಪ್ಪಿಸು. ಇಲ್ಲವೋ, ರಾಜದ್ರೋಹಿನಿಯಾಗಿ ನಿನ್ನನ್ನು ಸೆರೆ ಹಿಡಿಯುವೆನು." ಎಂದು ನುಡಿಯುತ ಆತನು ಕುದುರೆಯಿಂದಿಳಿಯುವಾಗ್ಗೆ, ಯೋಗಿನಿಯು ಕಾಳೀ ವಿಗ್ರಹದ ಹಿಂಭಾಗಕ್ಕೆ ವೋಡಿಹೋದಳು. ಆಕೆಯು ಸಮೀಪಿಸುತಲೇ ಆ ವಿಗ್ರಹದ ಹಿಂದಿದ್ದ ಶಕ್ತಿಯೂ, ಆಕೆಯ ಕೈಹಿಡಿದ ವೊಬ್ಬ ತರುಣನೂ ಹೊರಗೆ ಬಂದರು.

ಯೋಗಿನಿಯು ಯಿದನ್ನು ನೋಡಿ ತನ್ನ ಕಣ್ಣುಗಳನ್ನು ತಾನೇ ನಂಬದೆ ಗಾಬರಿಯಿಂದ ನಿಂತು "ಶಕ್ತೀ! ಈತನಾರು?" ಎಂದು ಗಟ್ಟಿಯಾಗಿ ಕೇಳಿದಳು.

"ಈತನು ನನ್ನ ಪತಿಯು, ಯುವರಾಜನಾದ ಗಯಜುದ್ದೀನನು." ಎಂಬೀ ಮಾತು ಕೇಳಿದ ಕೂಡಲೆ ಸನ್ಯಾಸಿನಿಗೆ ಬುದ್ಧಿಗೆಟ್ಟು ಗಾಬರಿಯಿಂದ ನೋಡುತಿದ್ದಳು. ಅಷ್ಟರೊಳು ಶಕ್ತಿಯೂ, ಅರಸನೂ, ಅಡವಿಯಲ್ಲಿ ನುಗ್ಗಿ ಕಾಣದಾದರು.

ಆಗ ಸೂರ್ಯೋದಯ ವಾಗುತಿದ್ದಿತು. ಪೂರ್ವದಿಗ್ಭಾಗದಲ್ಲಿ ಮೆಲ್ಲನೆ ಉದಯವಾಗುತಿರುವ ಅರುಣನನ್ನು ತಲೆಯೆತ್ತಿ ನೋಡುತ ನಿಂತಿರಲಾಗಿ ಯೋಗಿನಿಯು ಆರಂಭಿಸಿದಳು.

"ಎಲೈ ಜಗದ್ರಕ್ಷಕನೇ! ನಾನು ಜೀವಿಸಿರುವ ಪ್ರಯೋಜನವು ನನಗೆ ತಿಳಿವಿಕೆಗೆ ಬಂದಿತು. ನಾನು ನನ್ನ ದೇಹವು ಪಡುತಿರುವ ಬಾಧೆಗಳನ್ನು ತೊಲಗಿಸಬೇಕಾಗಿದೆ. ಈ ಕೆಲಸವು ನನ್ನ ಮಟ್ಟಿಗೆ ಅಲ್ಲ. ಈ ಬಾಲಿಕೆಯು ಕೂಡ ಅದಕ್ಕೆ ಸ್ವಾಧೀನವಾಗಿ ನಿನ್ನಿಂದ ಅಂಗೀಕರಿಸಲ್ಪಟ್ಟಿತು. ಈ

ಯಬ್ಬರನ್ನು ಕೂಡ ನೀನು ಉಪಯೋಗ್ಯ ಪಡಿಸುತಿರುವೆ. ವೊಬ್ಬರನು, ಕಾಮದಿಂದಲು, ವೊಬ್ಬರನ್ನು ವೈರಾಗ್ಯದೊಡನೆಯೂ, ನಿನ್ನ ಕೆಲಸಕ್ಕೆ ಪ್ರೇರೇಪಿಸುತಿರುವೆ. ಎಲೈ ಭಗವಂತನೇ! ನೀನು ಶಾಶ್ವತನು, ಸೃಷ್ಟಿಕರ್ತನು, ನೀನೆ ಸೃಷ್ಟಿಯು, ನೀನೆ ಜ್ಞಾನವು, ನೀನೆ ಅಜ್ಞಾನವು, ನೀನೆ ಕಾರಕನು, ನೀನೇ ಸಂಹಾರಕನು, ನೀನೆ ಕರ್ಮವು, ನೀನೆ ಫಲವು. ಸರ್ವಶಕ್ತಿಸ್ವರೂಪ ಸರ್ವಾಂತರ್ಯಾಮಿಯಾದ ಓ !!! ಜಗತ್ಪತಿಯೇ ! ನನ್ನನ್ನು ಪ್ರಬೋಧಿಸು. ನಿನ್ನ ಉದ್ದೇಶವನ್ನು ನೆರವೇರಿಸುವುದಕ್ಕೆ ಶಕ್ತಿಯನ್ನು ಪ್ರಸಾದಿಸು." ಓಂ.



## ಪ್ರಕರಣ ೧೬.

ವಸಂತಕಾಲ ಪ್ರಾಪ್ತವಾಯ್ತು. ವನವೆಲ್ಲವೂ ಯಿಂಪಾದ ಗಾನಗಳಿಂದ ಪ್ರತಿಧ್ವನಿಸುತಿದ್ದುವು. ತರುಶಾಖೆಗಳಿಂದ ಮಲಯ ಮಾರುತಗಳು ತಣ್ಣಗೆ ಬೀಸುತಿದ್ದುವು. ಚೂತಗಳು ತಮ್ಮ ಪುಷ್ಪಸೌರಭವನ್ನು ವಾಯುಮಂಡಲದಲ್ಲಿ ತುಂಬುತಿದ್ದುವು. ಈ ದಿನ ಬಾಲಿಕಾಮಣಿಯರು ವಸಂತೋತ್ಸವಕ್ಕೋಸ್ಕರ ಬಂದಿರುವುದರಿಂದ, ವನವೆಲ್ಲವೂ ಮತ್ತಷ್ಟು ವಿಲಾಸವಾಗಿ ಕಾಣ್ಬರುತಿದ್ದುವು. ವಯೋಧರ್ಮದಿಂದಲೂ, ಸೌಂದರ್ಯದಿಂದಲೂ, ಶೋಭಿಸುತ ಉತ್ಸಾಹಪೂರಿತರಾಗಿ, ತಾವು ಕೂಡ ವಯೋವಸಂತ ಪುಷ್ಪಗಳಂತಿರುವ ಆ ಬಾಲಿಕೆಯರು ತಮ್ಮ ನಗೆಗಳಿಗೆ ದಿಕ್ಕುಗಳು ಪ್ರತಿಧ್ವನಿಸುವಂತೆ ಕೇಕೆಗಳನ್ನು ಹಾಕಲಾರಂಭಿಸಿದರು. ಅವರು ಅಸ್ತ್ರಪರೀಕ್ಷಾಪ್ರದರ್ಶನಕ್ಕೋಸ್ಕರ ರಾಜಕುಮಾರನೊಡನೆ ಪಾಂಡುವಾ ನಗರಕ್ಕೆ ಹೋಗಿದ್ದ ದಿನಾಜಪುರಾಂತಃ ಪುರದಕಾಮಿನಿಯರು. ಆಮಹಾರಾಜನಿಗೆ ಆರಾಜಧಾನಿಯೊಳು ಬಹುರಮಣೀಯವಾದ ಅರಮನೆಯೊಂದುಂಟು, ನಮ್ಮ ಹಿಂದೂದೇಶವು ಪುರಾಣಗಳಿಗೆ, ಗಾದೆಗಳಿಗೆ ಸಹ ತೌರುಮನೆಯು. ಪ್ರತಿವೃಕ್ಷಕ್ಕೂ ಯಾವುದಾದರೊಂದು ಗಾದೆಯುಂಟು. ಚೂತಪುಷ್ಪವು ಮನ್ಮಥನ ಪಂಚಬಾಣಗಳಲ್ಲೊಂದು. ಕದಂಬವೃಕ್ಷದ ತಣ್ಣೆಳಲೊಳು ರಾಧಾಕೃಷ್ಣರಿಗೆ ಪರಸ್ಪರಾನುರಾಗಾಂಕುರವು. ಕನ್ನೆಯು ಕಾಲಿಂದ ತುಳಿದಲ್ಲದೆ ಅಶೋಕವು ಪುಷ್ಪಿಸದು. ಆದರೆ ಪಾಪ! ಎಲೆಲೆ ಅಶೋಕವೇ!

ಈಕಾಲದಲ್ಲಿ ನೀನು ದೋಹದವಿಲ್ಲದೆಯೇ ಪುಷ್ಪಿಸಬೇಕಾಗಿ ಬಂದಿದೆ. ಪುರಾತನದ ಗಾದೆಗಳು ಹೇಗಿದ್ದರೂ ಈ ಮಹೋತ್ಸವದಲ್ಲಿ ನಿನ್ನನ್ನು ಸ್ಪರ್ಶಿಸಿದವರೊಬ್ಬರಾದರೂ ಕಾಣಲಿಲ್ಲ. ಬಾಲ್ಯವು ತನಗೆ ತಕ್ಕ ಉತ್ಸಾಹವನ್ನು ನೋಡಿಕೊಳ್ಳುವುದು. ಅವರಿಗೆ ಜಂಬುನೇರಳೆಯ ಮರವನ್ನೇರುವುದು ಬಹು ಆಹ್ಲಾದಕರವಾಗಿದ್ದಿತು. ಪಲ್ಲವಾರುಣಗಳಾದ ತನ್ನ ಕೋಮಲಪದಗಳಿಂದ ವೊಂದು ಯೆಳೆಬಳ್ಳಿಯು ಉಲ್ಲಾಸದೊಡನೆ ಅದರ ಕೊಂಬೆಗಳಮೇಲೆ ಒಂದರಿಂದಿನ್ನೊಂದಕ್ಕೆ ಅತಿವೇಗವಾಗಿ ಏರುತಿದ್ದುದರಿಂದ ಕೊಂಬೆಗಳೆಲ್ಲವೂ ಅಲ್ಲಾಡುತಿದ್ದಿತು. ಆಬಾಲಿಕೆಯ ಸಖಿಯರು ಕೆಳಗೆ ಗಿಡದ ಸುತ್ತಲೂ ನಿಂತು ಕೆಲವರು ತಲೆಗಳೆತ್ತಿ ಮೇಲಕ್ಕೆ ಹೇಗೆ ಯೇರುತಿರುವಳೊ, ಎಂದು ಆಕೆಯ ಚಾತುರ್ಯಕ್ಕೆ ಮೆಚ್ಚಿಕೊಳುತಿದ್ದರು. ಮತ್ತೆ ಕೆಲವರು ಆಕೆಯನ್ನು ನೋಡಿ ಸಾಹಸದಿಂದ ತಾವುಕೂಡ ಗಿಡವನ್ನೇರಲು ಪ್ರಯತ್ನಿಸುತಿದ್ದರು. ಆದರೆ ಆಕೆಗಿರುವ ಜಾಣ್ಮೆಯು ಯಿವರಿಗಿಲ್ಲದಿರುವಂತೆ ತೋರುವುದು. ಇತರರೆಷ್ಟಾವರ್ತಿಯಾಗಿ ಪ್ರಯತ್ನಿಸಿದರೂ ಕೊನೆಸಾಗದೆ ಏರಿಹೋದಾಗೆಲ್ಲ ಭೂದೇವಿಯನ್ನು ಆಲಿಂಗಿಸಿಕೊಳುತಿರುವುದರಿಂದ ಜೊತೆಯವರು ಪಕಪಕನೆ ನಕ್ಕು ಪರಿಹಾಸ್ಯಮಾಡುತಿದ್ದರು. ಅವರಲ್ಲಿ ಈಚೇಷ್ಟೆಯನ್ನು ಸಹಿಸಲಾರದ ಉಚಿತಜ್ಞರೂ ಇರುವರು. ಅವರು ಯಿದು ವೊಳ್ಳೆಯದಲ್ಲವೆಂದು ಹೇಳುವುದಕ್ಕೆ ಅನುಮಾನಿಸಲಿಲ್ಲ. ಗಿಡದಮೇಲಿರುವ ಬಾಲಿಕಾಮಣಿಯನ್ನು ಜಾಣ್ಮೆಯಾದ ಪರಿಹಾಸೋಕ್ತಿಗಳಿಂದಲೂ, ಭಯದಿಂದಲೂ, ಕೆಳಗಿಳಿಯುವಂತೆ ಮೂದಲಿಸಿದರು. ಆದರೂ ಆ ಸಾಹಸವತಿಗೆ ಮತ್ತಷ್ಟು ಉತ್ಸಾಹ ಹೆಚ್ಚಿ ಅಷ್ಟಷ್ಟಕ್ಕೂ ಹೆಚ್ಚಾದ ಚಾತುರ್ಯವನ್ನು ತೋರ್ಪಡಿಸಲು ಮನಹುಟ್ಟಿ ನಸುನಗುತ ಗಿಡದಕೊಂಬೆಗಳನ್ನು ತೂಗಿ ಅವರ ಮೇಲೆ ಪಣ್ಮಳೆ ಸುರಿಸಿದಳು.

ಇನ್ನೊಂದು ಗಿಡದಿಂದ ನೇರಳೆಯ ಹಣ್ಣುಗಳುದುರಿದುವು. ಅದರ ಕೊಂಬೆಗಳು ಕೆಳಗೆ ಆವರಿಸಿದ್ದುದರಿಂದ ಆ ಬಾಲಕಯರೊಳೋರ್ವಳು ಕೆಳಗಿಂದಲೇ ಅವುಗಳನ್ನು ತೂಗಾಡಿದಳು. ಆ ಜಂಬೂವೃಕ್ಷಕ್ಕೆ ಬಾಲಿಕಾಪಾದ ಸ್ಪರ್ಶ ಲಾಭವಿಲ್ಲದಂತಾಯ್ತು: ಅದರ ಫಲಗಳನ್ನುದುರಿಸುವುದಕ್ಕೆ ಕೋಮಲಗಳಾದ

ತಳಿರನ್ನು ಹೋಲುವ ಅಂಗೈಗಳೇ ಸಾಕಾದುವು, ಅಷ್ಟರೊಳಾವೃಕ್ಷದ ಫಲಗಳು ದ್ರೌಪದಿಯ ವಸ್ತ್ರಗಳಂತೆ ಅಕ್ಷಯಗಳಾಗಿ ಕೊಳ್ಳೆಕೊಳ್ಳೆಯಾಗಿ ಉದುರಿದುವು. ಹೀಗೆ ಉದುರಿದ ಫಲಗಳುಕೂಡ ಕೆಳಗೆ ಬಹಳ ಹೊತ್ತಿರಲಿಲ್ಲ. ಉತ್ಸಾಹವಾಕ್ಯಗಳು ಪ್ರತಿಧ್ವನಿಸುತಿರುವಾಗ ಅಚ್ಚುಮೆಚ್ಚಾದ ಅಂದವಾಗಿರುವ ಕೈಗಳು ಅತಿತ್ವರೆಯೊಳಗದನ್ನಾರಿಸಿ ಬಿಟ್ಟುವು.

ಕೆಲವರಿಗೆ ಮಾತ್ರ ಯೀವಿನೋದವು ಶೃಂಗಾರವಾಗಿ ತೋರಲಿಲ್ಲ, ಅವರಾಗತಾನೆ ಯೌವನಾಂಕುರದಿಂದಅತ್ತೆಯುಮನೆಗೆ ಕಳಿಸಲ್ಪಡುವ ವಯಸಿನಲ್ಲಿರತಕ್ಕವರು. ಹೂ ಕೊಯ್ದು ಮಾಲೆಗಳಾಗಿ ಪೋಣಿಸಿ ಯೆಂತಹ ಉಲ್ಲಾಸಸಮಯಗಳಲ್ಲಿಯುಕೂಡ ತಮ್ಮ ಮನದೊಳು ನಿಂತಿರುವಂತವರಿಗೋಸ್ಕರ ಮನೆಗಳಿಗೆ ತೆಗೆದುಕೊಂಡು ಹೋದರು.

ಮತ್ತೆ ಕೆಲವರಿಗೆ ಹೂಗಳಮೇಲೆಯೂ, ಹಣ್ಣಿನ ಮೇಲೆಯೂ,ಮನಸು ಹುಟ್ಟಲಿಲ್ಲ. ಅವರ ಮನಸುಗಳು ತಮ್ಮತಮ್ಮ ಮೋರೆನೋಟಗಳಿಗೆ ದಾಸಾನುದಾಸರಾಗಿ, ಯೌವನವೆಂಬ ಬಲೆಯ ಕಣ್ಣಿನಲ್ಲಿ ಸಿಲುಕಿ ತಂತಮ್ಮ ಗೃಹಗಳಲ್ಲಿ ತಮಗಾಗಿ ಕಾದಿರುವ ಆಮಿಷಪ್ರಾಯರಾದ ಪ್ರಿಯರ ಮೇಲಕ್ಕೆ ಹೋಗಿರುವುವು.

ಅದರಲ್ಲಿಬ್ಬರು ಬಾಲಿಕೆಯರು ಮಾವಿನ ತೋಟಿನೊಳೊಂದು ಕಲ್ಲುಹಲಗೆಯಮೇಲೆ ಬೇರೆ ಬೇರೆ ಕುಳಿತುಕೊಂಡರು. ಅವರು ಹೂಗಳನ್ನು ಅಂದಚಂದಗಳಿಂದ ಪೋಣಿಸುತ ಯೌವನ ಸಹಜಗಳಾದ ತಂತಮ್ಮ ರಹಸ್ಯಗಳನ್ನು ಹೇಳಿಕೊಳುತಿದ್ದರು, ಆ ಸಮಯದಲ್ಲಿ ಆಕಸ್ಮಿತವಾಗಿ ಒಂದು ಕಿಲಕಿಲಧ್ವನಿಯು ಆ ಮಾಕಂದ ತರುಮಧ್ಯದಲ್ಲಿ ಶ್ರಾವ್ಯವಾಗಿ ಅವರಿಗೆ ಕೇಳಿಸಿತು. ಹಾಗೆ ಹಾಡಿದವಳು ರಂಗಿಣಿಯೆಂಬ ಪೂರ್ವತರುಣಿಯು. ಆಕೆಯನ್ನು ಆಸ್ಥಾನ ಕವೀಶ್ವರನೊಬ್ಬನು ಮದುವೆಯಾದನು. ಅತನ ವಯಸ್ಸು ಈಕೆಯ ವಯಸ್ಸಿಗೆ ಯೆರಡರಷ್ಟುಇರಬಹುದಾದರೂ,ಆತನು ತನ್ನಮನಸಿನಲ್ಲಿ ಯಿನ್ನೂ ಹುಡುಗನೆಂದೇ ತಿಳಿದು ಯುವತೀಮಣಿಯಾದ ತನ್ನ ಸತಿಯಮೇಲೆ ಅಲಂಕಾರಿಕವಾದ ಶೃಂಗಾರ ಪದ್ಯಗಳನ್ನು ಹೆಣೆಯುತಿರುವನು. ಈಗ ರಂಗಿಣಿಯು

ಹಾಡುತಿರುವ ಹಾಡು ತನ್ನ ಮುದಿಗಂಡನು ಹೆಣೆದ ಶೃಂಗಾರಗೀತಗಳೆ!

ಗೀತವು ಅವರು ಹೂಪೋಣಿಸುತಿದ್ದುದಕ್ಕೆ ಆತಂಕವನ್ನುಂಟುಮಾಡಲು ಅವರು ಮೇಲಕ್ಕೆ ನೋಡಿ ಅದರಲ್ಲಿ ಪ್ರೊಬ್ಬಾಕೆಯು "ಅಗೋ ಬರುತಿರುದಾಳೆ, ನಮ್ಮ ಸಖಿಯಾದ ಮುದಿಮುತ್ತೈದೆ ರಂಗಿಣಿಯು," ಎನುತಿರಲು ರಂಗಿಣಿಯು ಕಣ್ಣೋಟದ ಮೇರೆಯು ತೋಟವನ್ನು ಸಮೀಪಿಸಿತು.

ಅವರಿಬ್ಬರೊಳು ಕುಸುಮೆಯೆಂಬ ಬಾಲಿಕೆಯು, ರಂಗಿಣಿಯನ್ನು ನೋಡಿ "ಸಾಕುಮಾಡು ಹಾಡು, ನಿನ್ನ ಮುದಿಗಂಡನ ಸಿಂಗಾರದ ಸಂಗೀತವು ನಮಗೆಬೇಡ" ಅಂದಳು. ಅದಕ್ಕೆ ರಂಗಿಣಿಯು ಸಮೀಪಕ್ಕೆ ಬಂದು ಉಲ್ಲಾಸದಿಂದ "ಸರಿಸರಿ! ಹಾಗಾದರೆ, ನೀನು ನನ್ನ ಹರೆಯದ ಗಂಡನಾಗುವೆಯೇಳು!" ಎಂದು ಕುಸುಮೆಯನ್ನು ಮುದ್ದಿಟ್ಟುಕೊಂಡು ತನ್ನ ಹಾಡನ್ನು ನಿಲಿಸದೆ ಹಾಡುತಲೆ ಇದ್ದಳು.

ಆ ಹಾಡನ್ನು ಕೇಳಿ ಯರಡನೆಯವಳಾದ ಕಾಮಿನಿಯು ನಸುನಕ್ಕು "ನಿನ್ನ ಗಂಡನಿಗೆ ನಿನ್ನನ್ನು ಹೇಗೆ ಪ್ರೀತಿಸಬೇಕೋ ಚೆನ್ನಾಗಿ ತಿಳಿಯುವುದು." ಅಂದಳು.

ರಂಗಿಣಿ—ಆಹಾ! ನಿನ್ನ ಹರೆಯದ ಗಂಡನಿಗಿಂತಲೂ ಚೆನ್ನಾಗಿಯೇ ತಿಳಿಯುವುದು, ಆತನ ಬಾಯೊಳು ಸರಸವಾದ ಮಾತುಗಳು ನಾನೆಂದಿಗೂ ಅರಿಯೆನು. ನನಗೆ ಅಂತಹ ಪತಿಯು ದೊರೆತಿದ್ದನೋ, ಪ್ರಪಂಚವನ್ನು ಬಿಟ್ಟುಬಿಟ್ಟು ಅಡವಿಯಪಾಲಾಗಿ ಹೋಗುತ್ತಿದ್ದೆನು.

ಕುಸುಮೆ—ಕಾಮಿನಿಯ ಗಂಡನು ಹೆಣ್ಣುಗಳ್ಳನು. ತಣ್ಣಗೆ ಯಾರಿಗೂ ತಿಳಿಯದ ಹಾಗೆ ಮಾಡುವುದೆಲ್ಲವನ್ನೂ, ಮಾಡುವನು. ನೀನಿನ್ನೊಂದನ್ನು ಹಾಡು.

ರಂಗಿಣಿ— "ಮೊದಲಿನ ಹಾಡಿಗೆ ಸಮಾಧಾನದ ಹಾಡನ್ನು ಹಾಡಲೋ? ಆತನು ಅದನ್ನು ಹಾಡುತಲೇ ಬದುಲಾಗಿ ನಾನಿದನ್ನು ಹಾಡಿದೆನು.,,

ಕಾಮಿನಿ—"ಓಹೋ! ಹಾಗಾದರೆ ನಿನ್ನ ಗಂಡನ ಹಾಗೆ ನೀನು ಕೂಡ ಕವೀಶ್ವರಿಯಾಗಿರುವೆ!,,

ರಂಗಿಣಿ—" ಹಾಗೆಯೇ ಅಂದುಕೊಳ್ಳು. ನಿನ್ನ ಯಿಷ್ಟವಿದ್ದಂತೆ,, ಯೆಂದು ತನ್ನ ಹಾಡನ್ನು ಹಾಡುವಳು.

ಅಷ್ಟರೊಳು ಅವರ ಬಳಿಗೆ ಮೆಲ್ಲಗೆ ನಿರುಪಮೆಯು ಬಂದು ರಂಗಿಣಿಯು ನ್ನು ಕುರಿತು "ಚೆನ್ನಾಗಿ ಹಾಡುವಳೇ! ,, ಎಂದು ಮೆಚ್ಚಿಕೊಂಡಳು. ಆಕೆಯನ್ನು ನೋಡಿ ಬಾಲಿಕೆಯರೆಲ್ಲರೂ ಎದ್ದು ಗೌರವಿಸಿದರು.

ಕಾಮಿನಿ-"ಆಕೆಯ ಹಾಡು ಶ್ರೀಕೃಷ್ಣನವೇಣುಗಾನವಿದ್ದಂತಿರುವುದು"

ನಿರುಪಮೆ—" ನೀನು ಈ ಹಾಡನ್ನು ಯಿಾದಿನ ರಾಜಕುಮಾರನ ಬಳಿಯಲ್ಲ ಹಾಡಬೇಕು.,'

ಗಣೇಶದೇವನು ಅಲ್ಲಿಗೆ ಪ್ರಭುವಾಗಿದ್ದಾಗ್ಯೂ ಚಿಕ್ಕಂದಿನಿಂದಲೂ ಅಭ್ಯಾಸವಿರುವಂತೆ ನಿರುಪಮೆಯು ಆತನನ್ನು ರಾಜ ಕುಮಾರನೆಂಬದಾಗಿಯೇ ಸಂಬೋಧಿಸುತಿರುವಳು.

ರಂಗಿಣಿ=" ನಾನು ಹಾಡಲಾರೆನು. ನಾನೇಕೆ ಹಾಡಬೇಕು, ಹಾಡುಗಳನ್ನು ಹಾಡಿ ಆತನನ್ನು ತೃಪ್ತಿಪಡಿಸ ಬೇಕಾದವಳು ನೀನು. ಯಿಾದಿನ ಬಿಲುವಿದ್ಯೆಯಲಿ ಗೆದ್ದು ಬಂದುದಕ್ಕೆ ಆತನಿಗೆ ಈ ಬಹುಮಾನವನ್ನು ನೀನು ಸಮರ್ಪಿಸಬೇಕು.,,

ನಿರುಪಮೆ-ಮುಗುಳ್ನಗೆಯಿಂದ ಹೃದಯದಲ್ಲಿ ಸಂತೋಷ ಸಮ್ಮೋದಗಳುಬ್ಬಲು- 'ನೀವು ಹಾಡುಗಳನ್ನು ಹಾಡುತಿರುವಾಗ ನಾನು ಈಪುಷ್ಪಮಾಲೆಯನ್ನು ಸಮರ್ಪಿಸುವೆನು.,, ಎಂದು ಲಜ್ಜೆಯಿಂದ ನುಡಿದಳು.

ಕುಸುಮೆ—" ಮೊದಲು ನಿನ್ನನ್ನು ನಾವು ಪುಷ್ಪಹಾರದಿಂದ ಅಲಂಕರಿಸುವೆವು. ತರುವಾಯ ಅದನ್ನು ತೆಗೆದು ನಿನ್ನ ನಾಥನಿಗೆ ಸಮರ್ಪಿಸು ,, ಎಂದು ಹೇಳಿ ಈ ರಾಜಕುಮಾರಿಯನ್ನು ಅವರು ಹೂ ಸರಗಳಿಂದ ಅಲಂಕರಿಸಿ ಕುಸುಮೆಯೂ, ಕಾಮಿನಿಯೂ, ಶ್ರೀ ಕೃಷ್ಣನ ಗೀತಗಳನ್ನು ಹಾಡುವುದಕ್ಕೆ ಮೊದಲು ಮಾಡಿದರು.

ಹಾಡುಗಳು ಮುಗಿದ ತರುವಾಯ ನಿರುಪಮೆಯು ಆಕಸ್ಮಿಕವಾಗಿ " ಈ ಮಾಲೆಯು ಕೆಲಸಕ್ಕೆ ಬಾರದು. ನನ್ನ ಕೈಯಿಂದ ಬೇರೊಂದು ಸರವ

ನ್ನು ಪೋಣಿಸಿ ಆತನಿಗೆ ಕೊಡಬೇಕು. ಬೇಕಾದಷ್ಟು ಹೂಗಳಿವೆ. ಮಾಲೆಯು ನ್ನು ಪೋಣಿಸೋಣ. ,, ಎಂದು ಶಿಲಾಪೀಠದ ಮೇಲೆ ಕುಳಿತು ಹೂಗಳನ್ನು ಪೋಣಿಸುತಿರುವಾಗ ಸ್ವಲ್ಪದಿನಗಳ ಕೆಳಗೆ ಗಣೇಶದೇವನು ತಾನು ಪೋಣಿಸಿದ ಮಾಲೆಯುನ್ನು ತೆಗೆದು ಶಕ್ತಿಯ ಕೊರಳಲ್ಲಿ ಹಾಕಿದ ಸಂಗತಿಯು ಆಕೆಗೆ ತಟ್ಟ ನೆ ಜ್ಞಾಪಕಕ್ಕೆ ಬಂದಿತು. ಒಡನೆಯೇ ಶಕ್ತಿಯು ಯಿಲ್ಲಿರುವಳೇನೋ, ಎನುವ ಹಾಗೆ ಅಂಜಿಕೆದೋರಿ ಬೆಚ್ಚುಬಿದ್ದು ನೋಡಿದಳು. ಆದರೆ ಶಕ್ತಿಯು ಅಲ್ಲಿಲ್ಲ ದೆ ಯಿದ್ದುದರಿಂದ, ನಿರ್ಭಯದಿಂದ ನಿಟ್ಟುಸಿರುಬಿಟ್ಟು ಮರಳಿ ತನ್ನ ಕೆಲಸನ್ನು ತಾನು ಮಾಡುತಿದ್ದಳು. ಅಷ್ಟರೊಳು ಸ್ವಲ್ಪದೂರದಿಂದ ಮರಳಿ ಮಧುರವಾದ ವೇಣುಗಾನವು ಕೇಳಿಸಿತು. ಅವರೆಲ್ಲರೂ ಅದನ್ನು ಕಿವಿಗೊಟ್ಟು ಕೇಳುತಿದ್ದರು.

ಕಾಮಿನಿ—" ಕೇಳಿರಿ. ಮೊದಲಿನ ಗೀತವೇ ಇದು, ಮರಳಿ ನಾನೆಂದೂ ಕೇಳಿರಲಿಲ್ಲ. ಅದು ಚಿಕ್ಕಂದಿನ ನಡೆಗಳೆಲ್ಲವನ್ನೂ ಜ್ಞಾಪಕಕ್ಕೆ ತರುತಿದೆ. ಯು ವರಾಣಿಯೇ ! ಮಹೀಪಾಲ ಪುಷ್ಕರಣಿಯ ಮಗ್ಗುಲು ತೋಟದಲ್ಲೊಂದು ದಿನ ನಾವು ರಾಜಾ ರಾಣಿಯ ಆಟಗಳಾಡಿದುದು ನಿನಗೆ ಜ್ಞಾಪಕವಿರುವುದೇ?,, ಆಕೆಗೆ ಜ್ಞಾಪಕವಿರಲಾರದೇ? ಪಾಪ! ನಿರುಪಮೆಗೆ ಜ್ಞಾಪಕ ವಿರಲಾರದೇ! ಜ್ಞಾಪಕವಿರುವುದರಲ್ಲಿಯೂ ಎಂದಿಗೂ ಮರೆವು ಬಾರದಂತಿರುವುದು. ಈಗೂ ಅದನ್ನು ನೆನೆಸಿಕೊಂಡರೆ ಆಕೆಗೆ ಸಂತೋಷವೆಲ್ಲವೂ ಶಿಥಿಲವಾಗುವುದು. ಆ ಮಾತುಗಳನ್ನು ಸಖಿಯರು ಹೇಳುತಿರಲು ತಲೆಯನ್ನು ಮೇಲಕ್ಕೆತ್ತಿ ಮೆದು ನು ಡಿಯಿಂದ " ಇನ್ನೂ ರಾಜಕುಮಾರನು ಬರಲಿಲ್ಲ ಕಾರಣವೇನೋ; ಈಗಾ ಗಲೇ ಅಸ್ತ್ರಸಂದರ್ಶನವು ಮುಗಿದು ಹೋಗಿರಬಹುದು. ಈಗ ಕೇಳಿಸಿದ ವೇ ಣುಗಾನವು ಆತನದೇನೆ?,, ಎಂದು ನಿಟ್ಟುಸಿರಿಂದ ಕೇಳಿದಳು.

"ಅಹುದು. ವೇಣುವನ್ನೂದಿದಾತನು ರಾಜಕುಮಾರನೇ!" ಈ ಬಾಲಿ ಕೆಯರು ಯಿಲ್ಲಿ ವಿಹರಿಸುತಿರಲು ಗಣೇಶದೇವನೂ ಶಕ್ತಿಯೂ ಒಬ್ಬರಕೈಯೊ ಬ್ಬರು ಹಿಡಿದುಕೊಂಡು ಯಿಲ್ಲಿಗೆ ಸ್ವಲ್ಪದೂರದ ನದೀತೀರದಲ್ಲಿ ಆಸೀನರಾ ಗಿದ್ದರು. ಶಕ್ತಿಯ ವೇಣುವಿನ ಮೇಲೆ ಆತನು ಹಾಡಿದ ಹಾಡೆ ; ಆತನಿಗೋ ಸ್ಕರ ಯೆದುರುಕಾಯುತಿರುವ ನಿರುಪಮೆಗೆ ಇಲ್ಲಿ ಕೇಳಿಸಿದುದು. ಪಾಪ.! ವಳೆ

ಮೊಗುವೆ! ಆತನು ನಿನ್ನ ಸಮ್ಮುಖಕ್ಕೆ ಹೇಗೆ ತಾನೆ ಬಂದಾನು? ಚಿಕ್ಕಂದಿನಲ್ಲಿ ಮೊಲಿದು ವರಿಸಿದ ಮೋಹದ ರಾಣಿಯೊಂದಿಗೆ ಕೂಡಿರುವನೀಗ; ಈಗ ನಿರುಪಮೆ ಯಾರೋ ಅರಿಯನು. ಈಗ ಆತನು ತನ್ನ ಯೌವನಕಾಲದ ಮೋಹನಿದಾನವಾದ ಶಕ್ತಿಯಲ್ಲಿ ಐಕ್ಯವಾಗಿರುವನು. ಮರಳಿ ಆತನು, ಈಸಮಯದಲ್ಲಿ ಮಹೀಪಾಲ ಪುಷ್ಕರಿಣೀ ತೀರದಲ್ಲಿ ಶಕ್ತಿಯನ್ನು ರಾಣಿಯಾಗಿವರಿಸಿದ ಗಣೇಶದೇವನಾಗಿದಾನೆ. ಅದನ್ನುಳಿದು ಆತನಿಗೇನ್ನೇನೂ ತಿಳಿಯದು, ಅಯ್ಯೋ; ಮೊಗುವೆ! ನಿರುಪಮೆ! ಆ ನದೀತೀರದಲ್ಲಿ ನಡೆಯುತಿರುವ ಚರ್ಯೆಯನ್ನು ನಿನಗೆತಿಳಿಸಿ ವೇಣುಗಾನವನ್ನು ಕೇಳುವಂತೆ ಮಾಡಿದ ವಾಸುದೇವನ ಸಾಮರ್ಥ್ಯವೆಂತಹುದು?



## ಪ್ರಕರಣ ೧೭

ಆ ದಿವಸ ಗಣೇಶದೇವನು ಅವರನ್ನು ಕಲೆಯಲಿಲ್ಲ. ಆತನ ಮನಸೆಲ್ಲವೂ ಕಳವಳದಲ್ಲಿದ್ದಿತು. ಅಂತಹ ಮನಸಿನಿಂದ ನಡುವಿರುಳೊಳು ತನ್ನ ಮಂದಿರಕ್ಕೆ ಬಂದುಕೂಡ ನಿರುಪಮೆಯನ್ನು ನೋಡದೆ ಪಡಸಾಲೆಯೊಳೊಂದು ಚಂದ್ರಕಾಂತ ಶಿಲೆಯ ಜಗುಲಿಯಮೇಲೆ ಮನಸ್ಥಿಮಿತವಿಲ್ಲದೆ ಯೇನೇನೋ ಯೋಚಿಸುತ್ತ, ಬಾಡಿದ ಮುಖದಿಂದ ದುಃಖನಿರ್ಮಗ್ನ ಹೃದಯನಾಗಿ ಮೌನದಿಂದಿದ್ದನು. ಆತನ ಅಂತರಾತ್ಮನೊಳೊಂದೆಣಿಕೆಯು ಬೇರೂರಿ ಮಾತುಮಾತಿಗು, ಚೇಳುಹೊಡೆದಂತೆ ಬಾಧಿಸುತಿದ್ದಿತು. "ನಾನೇನು ಕೆಲಸ ಮಾಡಿದೆನು ಹಾ! ದೈವವೇ? ಆಕೆಗೆ ಈ ದುರವಸ್ಥೆಯು ನನ್ನ ಮೂಲಕವಾಗಿಯೆ ಅಲ್ಲವೆ ಉಂಟಾದುದು? ಆಕೆಯು ಹೃದಯವನ್ನು ನನಗೆ ಸಮರ್ಪಿಸಿಯೂ, ನಾನು ಅದನ್ನು ತಳ್ಳಿ ತಿರಸ್ಕರಿಸಿ ಬಿಟ್ಟೆನು. ಪರಮೇಶ್ವರನೆ! ನಾನು ಮಾಡಿದ ಪಾತಕವನ್ನು ಕ್ಷಮಿಸು,, ಯೆಂದು ತನ್ನೊಳುತಾನೇ ವಿಲಾಪಿಸುತಿದ್ದನು.

ಯುವರಾಣಿಯು ತನ್ನ ಅಂತಃಪುರದಲ್ಲಿ ಒಂಟಿಯಾಗಿದ್ದು ತನ್ನ ಹೃದಯೇಶ್ವರನು ತಡಮಾಡಿದುದನ್ನು ತಾಳಲಾರದೆಪಡಸಾಲೆಗೆಹೋಗಿತನ್ನ ಪ್ರಾಣೇಶ್ವರನ ಹಿಂಭಾಗಕ್ಕೆ ಮೆಲ್ಲನೆ ನಡೆದು ಆತನ ಕಣ್ಗಳನ್ನು ತನ್ನ ಯೆರಡುಕೈಗ

ಳಿಂದ ಮುಚ್ಚಿದಳು. ಆಗ ರಾಜಕುಮಾರನ ಹೃದಯದಲ್ಲಿ ಬೇರೆ ಯೆಣಿಕೆಗಳಾವುವೂ ಇಲ್ಲದೆ ಶಕ್ತಿಯೊಬ್ಬಳೇ ಸಂಪೂರ್ಣವಾಗಿ ಆಶ್ರಯಿಸಿರುವುದರಿಂದ ತದೇಕಧ್ಯಾನದಿಂದಿದ್ದವನಾಗಿ "ಶಕ್ತೀ" ಎಂದು ಮಾತನಾಡಿಸಿದನು. ಒಡನೆಯೆ ನಿರುಪಮೆಯು ವಿಷಾದಾಶ್ಚರ್ಯಗಳಿಂದ "ನಾನು ನಿರುಪಮೆ" ಯೆಂದು ಪ್ರತ್ಯುತ್ತರವನಿತ್ತಳು.

ಕೂಡಲೆ ರಾಜಕುಮಾರನು ಆಕೆಯನ್ನು ತನ್ನ ಪಕ್ಕದಲ್ಲಿ ಕುಳ್ಳಿರುವುದೆಂದು ಹೇಳಿದನಾದರೂ, ಆತನ ವೈಖರಿಯೆಲ್ಲವೂ ಯೆನೋ ಒಂದು ಬಗೆಯಾಗಿ ಕಾಣುತ ಆತನಮಾತುಗಳು ಮೊಳಗಿನಗುಟ್ಟನ್ನು ಹೊರಪಡಿಸುತಿದ್ದಿತು. ಯೆಂದಿನಂತೆ ಆತನ ನುಡಿಗಳಲ್ಲಿ ಅನುರಾಗ ಸೂಚನೆಗಳು ತುಸವಾದರೂ ಇಲ್ಲ. ಹೀಗೆ ಪರಿಭವಿಸಲ್ಪಟ್ಟ ನಿರುಪಮೆಗೆ ಕಣ್ಣೀರುತುಂಬಿ ಹಾಗೆಯೆ ನಿಂತಿದ್ದಳು. ಆಕೆಯುಹದಿನಾರು ವರುಷದ ಮುಗುದೆಯಾದುದರಿಂದ ನಿಷ್ಕಪಟವಾದ ಪ್ರೇಮದಿಂದ ಆತನನ್ನು ಮನಸಾರ ಪ್ರೀತಿಸುತಿದ್ದಳು.

ಗಣೇಶದೇವನು ಪರಧ್ಯಾನದಲ್ಲಿದ್ದರೂ ಸಹಜವಾಗಿ ಸರಸನು. ಆದುದರಿಂದ ತನ್ನೆರಡು ಕೈಗಳಿಂದಲೂ ಬಿಗಿದು ತನ್ನ ಮಗ್ಗುಲೊಳು ಕುಳ್ಳಿರಿಸಿಕೊಂಡನು. ನಿರುಪಮೆಯು ತನ್ನ ಪ್ರಾಣೇಶ್ವರನ ಭುಜಗಳ ಮೇಲೊರಗಿ ಸೆರಗಿಂದ ಕಣ್ಣೀರನ್ನೊರೆಸಿಕೊಳುತ ರೋದಿಸುತಿದ್ದಳು. ಗಣೇಶದೇವನು ಅದನ್ನು ನೋಡಿ ತನ್ನ ವಿಚಾರಗಳೆಲ್ಲವನ್ನೂ ತಡೆದು ಬಾಹುಗಳಿಂದ ಆಕೆಯನ್ನು ಮರಳಿ ಬಿಗಿಯಪ್ಪಿ "ನಿರುಪಮೆಯು ಕಣ್ಣೀರು ತುಂಬುವ ಕಾರಣವೇನು!" ಎಂದು ಪ್ರೀತಿಯು ಹೊರಹೊಮ್ಮುವಂತೆ ಕೇಳಲು, ನಿರುಪಮೆಯು ಮಾರುತ್ತರ ನುಡಿಯದೆ ಸುಮ್ಮನಿದ್ದಳು. ಆತನು ಪುನಃಪುನಃ, ಅದೇ ರೀತಿಯಲ್ಲಿ ಪ್ರಶ್ನಿಸಲು ಆಕೆಯು ತನ್ನ ಬಾಷ್ಪಪೂರಿತಗಳಾದ ಯೆರಡು ಕಣ್ಗಳ ದೃಷ್ಟಿಯನ್ನೂ ಆತನ ಮೇಲೆ ಹರಡಿ "ರಾಜಕುಮಾರನೆ! ನಿನಗೆ ನನ್ನೊಳು ಪ್ರೀತಿಯಿರ್ಪುದೆಂದು ಹೇಳುವನಾಗು" ಎಂದು ದೈನ್ಯದಿಂದ ನುಡಿದಳು. ಆತನು ತನ್ನ ಕೈ ಬೆರಲುಗಳಿಂದ ಆಕೆಯ ಮುಂಗುರುಳ್ಗಳನ್ನು ನೀವುತ "ಹಾಗೆಂದು ಇದುವರೆಗೆ ಹತ್ತುಸಾವಿರ ಸಲವಾಗಿ ನಿನ್ನೊಂದಿಗೆ ಹೇಳಿರುವೆನು. ಹೇಳಿ

ದ್ದು ಕೂಡ ಮರಳಿ ಕೇಳುತಿರುವೆಯೇಕೆ? ಪ್ರಾಣಪ್ರಿಯೆ! ನಿನಗೆಷ್ಟುಸಲ ಹೇಳಲಿ'' ಅದಕೆ ನಿರುಪಮೆಯು ''ನೀನು ಮತ್ತೆ; ನೀನು ಮತ್ತೆ'' ಎಂದು ಏನನ್ನೋ ಹೇಳುವುದಕೆ ಹೋಗಿ ಮಾತು ತಡೆಯಲು ಹೃದಯೇಶ್ವರನು ಆಕೆಯ ಬಿಂಬಾಧರವನ್ನು ಚುಂಬಿಸುವಿಕೆಯೂ, ನಿರುಪಮೆಯು ತನ್ನೆರಡು ಬಾಹುಗಳಿಂದಲೂ ಆತನ ಕೊರಳಿಗೆ ಸುತ್ತಿಕೊಂಡು ''ಶಕ್ತಿಯು ಇಲ್ಲಿ ಇದ್ದುದಾದರೆ ನನ್ನನ್ನು ಮರೆತುಬಿಡುವಿರೋ ಯೇನೋ, ಎಂದು ಅಂಜಿಕೊಳುವೆನು'' ಎಂದಳು. ರಾಜಕುಮಾರನು ಬದುಲು ಮಾತಾಡದೆ ಆ ಪ್ರಿಯತಮೆಯ ಬಾಷ್ಪ ಮಲಿನವಾದ ಮುದ್ದು ಮುಖವನ್ನು ನೋಡುತ ಸುಮ್ಮನಿದ್ದನು. ''ನಾನು ನಿನ್ನನ್ನು ಮರೆಯಲಾರೆನು. ನಿನ್ನವನು'' ಎಂದು ಹೇಳುವನಾಗು ಎಂಬದಾಗಿ ನಿರುಪಮೆಯು ಅಂಗಲಾಚಿಕೊಂಡಳು. ಅದಕ್ಕೆ ಆತನು ''ನಿನ್ನವನಲ್ಲದೆ ಮತ್ತಿನ್ನಾರವನು?'' ಎಂದು ಬದುಲು ಹೇಳಿ ತಪ್ಪಿಸಿಕೊಂಡನು. ಆದರೂ ನಿರುಪಮೆಯು ''ನನಗೆ ತಿಳಿಯದು ಅದೇನೋ ನನ್ನ ಮನಸುಮಾತ್ರ ಕಲ್ಲಿನಂತಾಗಿರುವುದು'' ಯೆಂದುಹೇಳಿ ಮೇಲು ಸೆರಗನ್ನು ಮುಖಕ್ಕೆ ಮುಚ್ಚಿ ಕಣ್ಣೀರನ್ನು ಕಾಲುವೆಯಾಗಿ ಹರಿಸಿದಳು.

ಈಗ ರಾಜಕುಮಾರನ ಮನಸಿನ ಪರಿತಾಪವಿಷ್ಟೆಂಬದನ್ನು ಹೇಳುವುದು ಶಕ್ಯವಲ್ಲ. ತನ್ನ ಹೃದಯೇಶ್ವರಿಯು ತನ್ನಿಂದುಂಟಾದ ಪರಿಭವದಿಂದ ದುಃಖಪಡುತಿದ್ದು ಕೂಡ ತನ್ನನ್ನೇ ನಂಬಿ ಬಿಗಿದಪ್ಪಿಕೊಂಡಿದ್ದಳು. ಆತನಿಗೆ ಆಲೋಚನೆಯು ಕಡೆಮೆಯಾಗಲಿಲ್ಲ. ಶಕ್ತಿಯನ್ನು ಮದುವೆಯಾಗಿ ಮನೆಗೆ ತರುವುದೆಂದರೋ, ನಿರುಪಮೆಯು ಗುಂಡಿಗೆಯೊಡೆದು, ಪ್ರಾಣವನ್ನು ತೊರೆಯುವಳು. ಹಾಗಲ್ಲದೆ ಶಕ್ತಿಯನ್ನು ಬಿಡುವುದೆಂದರೋ, ಆಕೆಯನ್ನು ಪಾಪಕೂಪದಲ್ಲಿ ತಳ್ಳಿದವನಾಗುವೆನು. ತನಗೆ ಅರ್ಪಿಸಿರುವ ಮನಸುಳ್ಳಾಕೆಯನ್ನು ಮತ್ತೊಬ್ಬಾತನ ಕೈ ಹಿಡಿಯುವ ಹಾಗೆ ಮಾಡಿದವನಾಗಬೇಕಾಗುವುದು. ಆ ರಾತ್ರಿಯೆಲ್ಲವೂ ಆತನಿಗೆ ನಿದ್ದೆ ಬರಲಿಲ್ಲ. ಆತನ ಮನಸೆಲ್ಲ ಕಳವಳಪಡುತಿದ್ದಿತು. ಇಂತಹ ಸ್ಥಿತಿಯೊಳು ಸೂರ್ಯೋದಯಕ್ಕೆ ಮುಂಚಿತವಾಗಿಯೆ ತನ್ನ ಪ್ರಿಯಸತಿಗೆ ಯೆಚ್ಚರವಾಗ

ದಂತೆ ನೆಲ್ಲನೆ ಯೆದ್ದು ತನ್ನ ಮನೆಯನ್ನು ಬಿಟ್ಟು ಶಕ್ತಿಯ ಬಳಿಗೆಸೋಗಿ ಆಕೆಯೊಂದಿಗೆ ಯಾವುದೋ, ಒಪಂಬಡಿಕೆ ಮಾಡಿಕೊಳ್ಳಬೇಕೆಂದು ಹೊರಗೆ ಹೊರಟು ವನಗಳನ್ನು ದಾಟಿ ಹೋಗುವಾಗ್ಗೆ, ಖುರ ಪುಟಧ್ವನಿಯೂ, ದಂಡೋರೆಯ ಶಬ್ದವೂ, ಕಿವಿಗೆ ಬಿದ್ದು ಅದನ್ನು ಅಲ್ಲೈಸಿ ಹೋಗುತಿರುವಾಗ ಕುದುರೆಯ ಸವಾರರೂ, ಕೆಲವರು ಸೈನಿಕರೂ,ಇದೇನೋ ಯೆಂದು ಅಚ್ಚರಿಯನ್ನು ನೋಡಬಂದ ಜನ ಸಮ್ಮರ್ದವೂ, ಗೋಚರವಾಯ್ತು. ಅದರಲ್ಲಿ ಭಟನೊಬ್ಬನು ದಂಡೋರೆಯನ್ನು ಹೊಡೆಯುತ "ಗಯಾಜುದ್ದೀನು ನವಾಬನು ಸುಲ್ತಾನನಮೇಲೆ ದಾಳಿ ಬಂದಿರುವನು. ಆತನಮೇಲೆ ಯುದ್ಧಕ್ಕೆ ಹೋಗಲು ತೀರ್ಮಾನಿಸಿದಾರೆ. ಪಾದುಷಾಹನ ಪಕ್ಷವಾಗಿ ಯುದ್ಧಮಾಡುವರೆಲ್ಲರೂ ಬರತಕ್ಕದು" ಎಂದು ಸಾರುತಿದ್ದನು. ಗಣೇಶದೇವನು ಒಬ್ಬ ರಾಹುತನ ಬಳಿಗೈದಿ ಆತನು ಮಾಡಿದ ತಪ್ಪೇನೆಂದು ಕೇಳಲು ಆತನು "ನಿನ್ನೆಯದಿನ ಅಸ್ತ್ರಸಂದರ್ಶನ ಸಮಯದಲ್ಲಿ ಸುಲ್ತಾನರವರು ಹಿಂದೂ ಕನ್ನಿಕೆಯೋರ್ವಳನ್ನು ನೋಡಿ ಆಕೆಯನ್ನು ಮದುವೆಯಾಗಬೇಕೆಂದು ಪ್ರಯತ್ನಿಸುತಿರುವಾಗ ನವಾಬನು ಆಸಂಬಂಧವನ್ನು ಕೈಗೂಡಿಸುವುದಕ್ಕೆ ಹೋಗಿ ಆಕೆಯನ್ನು ತಾನೇ ಮದುವೆಯಾದನು." ಎಂದು ಹೇಳಿದನು. ರಾಜಕುಮಾರನು ಸಿಡಿಲು ಬಿದ್ದಂತೆ ಗಾಬರಿಗೊಂಡುಹಾಗೆಯೆ ನಿಂತುಹೋದನು.

---

## ಪ್ರಕರಣ ೧೪

ಹೀಗೆ ನಿರ್ವಿಣ್ಣನಾಗಿ ನಿಂತಿರುವಾತನನ್ನು ಯಾರೋ ಹೆಸರನ್ನು ಹಿಡಿದು ಕರೆದರು. ನಂತರ ಆತನಿಗೆ ಯೆಚ್ಚರವಾಯ್ತು. ಆ ಕೂಗು ಆರ್ತಸ್ತ್ರೀ ವಿಲಾಪವಾಗಿ ಕೇಳಿಸಿತು. "ಅಲ್ಲಿ ಕಾಣಿಸುವಾತನು ಮಹಾರಾಜಾ ಗಣೇಶದೇವನೇ! ಗಣೇಶದೇವ! ನಿನ್ನ ಕಣ್ಗಳಿದುರಿಗೆ ಅನಾಥಳಾದೊಬ್ಬ ಸ್ತ್ರೀಯು ಹೀಗೆ ಪರಾಭವದ ಪಾಲಾಗಿರುವಾಗ ದಯಾರಸವಿಲ್ಲದವನಾಗಿ ನಿಂತಿರುವೆಯಾ? ಪ್ರಜಾಪೀಡೆಯೆಂದರೂ, ಅನ್ಯಾಯವೆಂದರೂ, ನಿನ್ನ ಮನಸ್ಸು ಕರ

ಗುವುದಿಲ್ಲವೇ ? ಮಹಾರಾಜನೇ ! ನಿನ್ನ ಕೀರ್ತಿಗಿದು ಕಳಂಕವಲ್ಲವೆ ? ವಂಗದೇಶವನ್ನು ಖ್ಯಾತಿಗೆ ತಂದ ಶೂರಾಗ್ರೇಸರರಾದ ನಿನ್ನ ಹಿರಿಯರ ವಂಶ ಜನೇನೇ! ನೀನು ? ತನ್ನ ಸುತರೀ ರೀತಿಯಾಗಿ ನಡೆಯುತಿರುವಾಗ ನಮ್ಮ ದೇಶಮಾತೆಯು ಇಂತಹ ದುಸ್ಥಿತಿಯಲ್ಲಿರುವಳೆಂದರೆ ಆಶ್ಚರ್ಯವೇನು ? ” ಎಂಬೀ ವಾಕ್ಯವು ರಾಜಕುಮಾರನ ಕಿವಿಗಳಲ್ಲಿ ಬಿದ್ದವು.

ಅದನ್ನು ಕೇಳಿ ದಿಗ್ಭ್ರಮೆಗೊಂಡು ಅಲ್ಲಿ ನಿಗಳಬದ್ಧವಾದ ಕೈಗಳಿಂದ ರಾಜಭಟರ ನಡುವೆ ಇರುವ ಸನ್ಯಾಸಿನಿಯೊಬ್ಬಾಕೆಯನ್ನು ನೋಡಿ ತತ್ತರಗೊಂಡು ಸಮೀಪಕ್ಕೆ ಹೋಗಿ ರಾಜಭಟರನ್ನು ಕುರಿತು “ಯಾರೀಕೆ? ಏಕೆ ಬಂಧಿಸಲ್ಪಟ್ಟಳು ? ” ಎಂದು ಪ್ರಶ್ನಿಸಿದನು.

ರಾಜಭಟರು ಮಹಾರಾಜನಿಗೆ ರಾಜ ಮರಿಯಾದೆಯಿಂದ ವಂದಿಸಿ, ಅವರೊಳೊಬ್ಬನು “ಮಹಾರಾಜನೇ ! ನವಾಬುಬೇಗಂ ರಾಣಿಯವರನ್ನು ಮಾತಾಜೀ ಮನೆಯಿಂದ ಕೊಂಡು ಹೋದರೆಂದು ಫೌಜುದಾರ್ ಸಾಹೇಬನು ಸುಲ್ತಾನರಿಗೆ ಅರಿಕೆ ಮಾಡಿದನು. ಅದರಮೇಲೆ ಈಕೆಯನ್ನು ಸೆರೆ ಹಿಡಿಯುವಂತೆ ಸುಲ್ತಾನರ ಅಪ್ಪಣೆಯಾಯ್ತು. ಈ ಆಜ್ಞೆಯಂತೆ ನಾವು ಹಿಡಿದುಕೊಂಡೆವು. ಸನ್ಯಾಸಿನಿಯು ನಿಂದಾಗರ್ಭವಾಗಿ ನಕ್ಕು ತಿರಸ್ಕಾರಭಾವದಿಂದ ಹೀಗೆಂದಳು. “ ತಪ್ಪುಮಾಡಿದವನೊಬ್ಬನಾದರೆ ಇನ್ನೊಬ್ಬನನ್ನು ಗಲ್ಲಿಗೆತ್ತುತಿರುವರು. ಯೆಂತಹ ಶ್ರೇಷ್ಠವಾದ ನ್ಯಾಯವು ನಮಗೆ ಲಭಿಸಿರುವುದೋ ನೋಡು. ” ಗಣೇಶದೇವನು ಮುಂದಕ್ಕೆ ಬಂದು ಒರೆಯಿಂದ ಖಡ್ಗವನ್ನು ಸೆಳೆದು ತನ್ನ ದಕ್ಷಿಣ ಹಸ್ತದಲ್ಲಿ ಧರಿಸಿ ಆ ರಾಜ ಭಟರನ್ನು ಕುರಿತು ಗಟ್ಟಿಯಾಗಿ “ನಿಮಗೆ ಪ್ರಾಣಗಳ ಮೇಲಣಾಸೆಯಿದ್ದ ಪಕ್ಷದಲ್ಲಿ ದೂರವಾಗಿ ತೊಲಗಿರಿ, ನನ್ನ ದಾರಿಗೆ ಅಡ್ಡ ಬರಬೇಡಿರಿ. ” ಎಂದು ಹುಂಕರಿಸಿದನು.

ರಾಜಭಟರು ಆತನ ಉದ್ದೇಶ್ಯವನ್ನು ಗುರುತರಿತು ಅವರೊಳೊಬ್ಬನು “ ಅಯ್ಯಾ ! ಭಗವಂತನು ನಿನಗೆ ಒಳ್ಳೆಯದನ್ನು ಮಾಡಲಿ. ಮಹಾಪ್ರಭುವೇ ! ನಾವು ಆಕೆಯನ್ನು ಬಿಡಿಸಬೇಡಿರಿ. ನೀವು ಹಾಗೆ ಮಾಡಿದಲ್ಲಿ

ದರೆ ನಮ್ಮ ಪ್ರಾಣಗಳುಳಿಯುವು. ಫೌಜುದಾರ ಸಾಹೇಬರ ಕೋಪಕ್ಕೆ ನಾವು ಬಲಿಯಾಗುವೆವು. " ಎಂದು ಬಿನ್ನೈಸಿಕೊಂಡನು. ಹೀಗೆ ಬಿನ್ನೈಸಿ ತಳ ತಳಾಯುವಮಾನವಾಗಿರುವ ಆತನ ಕೈ ಕರವಾಲಕ್ಕೆ ದೂರವಾಗಿ ತೊಲಗಿ ಬೇಳಾಡುತಿದ್ದರು. ಮಹಾ ರಾಜನು ಮಾತಾಜಿಯು ಬಂಧನಗಳನ್ನು ಬಿಚ್ಚಿ ಅಂಜಿಕೊಳುತಿದ್ದ ಆ ಜನರನ್ನು ನೋಡಿ " ನೀವು ಭಯಪಡಬೇಡಿರಿ. ನಾನು ಮಾಡಿದ ಕೆಲಸವನ್ನು ಫೌಜುದಾರರೊಂದಿಗೆ ನಾನೇ ಹೇಳುವೆನು. ನೀವು ತಪ್ಪಿತಸ್ತರಾಗಲಾರಿರಿ. ಆತನು ನಾನು ಹೇಳಿದರೂ ಕೇಳದೆ ನಿಮ್ಮನ್ನು ದಂಡಿಸುವ ಸಮಯದಲ್ಲಿ ನೀವೆಲ್ಲರೂ ನನ್ನ ಬಳಿಗೆ ಬನ್ನಿರಿ. ನಿಮ್ಮೆಲ್ಲರನ್ನು ನನ್ನ ಸೈನ್ಯದಲ್ಲಿ ಸೇರಿಸಿಕೊಳ್ಳುವೆನು. ಎಲ್ಲಿ! ನಿಮ್ಮ ಸೇನಾನಿಯು ಯೆಲ್ಲಿ ? " ಎಂದು ಕೇಳಿದನು. "ನಮಗೆ ಅನುಜ್ಞೆ ಮಾಡಿ ಆತನು ತಮ್ಮ ಆರಮನೆಗೆ ಚಿತ್ತೈಸಿದನು." ಎಂದು ನುಡಿದರು.

ಡಂಗುರ ಹೊಯ್ಯುತಿದ್ದುದನ್ನು ನಿಲ್ಲಿಸಿದರು. ಜನರೆಲ್ಲರೂ ರಾಜಭಟರ ಸುತ್ತಲೂ ಸೇರಿದರು. ಗಣೇಶದೇವನು ಕೈಬೀಸಿ ಜನವು ತೊಲಗುವಂತೆ ದಾರಿಮಾಡಿ ವಿಮುಕ್ತೆಯಾದ ಯೋಗಿನಿ ಯೊಂದಿಗೆ " ತಾಯೇ ! ನನ್ನೊಡನೆ ಬರುವಳಾಗು! ಇತರರಾರೂ ನಿನ್ನ ಗೋಜಿಗೆ ಬಾರರು" ಎಂದನು. ಮಾತಾಜೀ " ಹಡೆದ ತಂದೆಯೇ ! ನಿನ್ನೊಡನೆ ಇರುವಾಗ ನನಗಾವ ಅಂಜಿಕೆಯೂ ಇಲ್ಲ. ಆದುದರಿಂದ ನಾನೇ ದಾರಿ ತೆಗೆವೆನು. ನೀನು ನನ್ನನ್ನು ಹಿಂಬಾಲಿಸು. ಈ ದಾರಿಗಳೆಲ್ಲವೂ ನನಗೆ ಚೆನ್ನಾಗಿ ಗೊತ್ತುಂಟು" ಅಂದಳು. ಜನರೆಲ್ಲರೂ ಆತುರದಿಂದ ನೋಡುತಿದ್ದರು. ಮಹಾರಾಜನೂ ಯೋಗಿನಿಯೂ ಹೊಲಗಳಲ್ಲಿ ಬಿದ್ದು ಕಣ್ಣಿಗೆ ಕಾಣದೆ ಹೋಗುತಿರಲು ನೋಡಿ ಭಟರೆಲ್ಲರೂ ಕಕಿಮಕ್ಕಿ ನದೆ ನಿಂತಿದ್ದರು.



# ಪ್ರಕರಣ ೧೯.

ಕೆಲವುದೂರ ನಡೆದತರುವಾಯ ಯೋಗಿನಿಯು "ಆ ಬಲಗಡೆಯಿರುವ ದಾರಿಯಲ್ಲಿ ಹೊರಡು, ನಿಮ್ಮ ತೋಟಕ್ಕೆ ಸೇರಿಸುವುದು. ನೀವು ಅರಮನೆಗೆ ಸೇರಿರಿ. ಈಗ ನಾನೂ ಬರುವೆನು." ಎಂದು ಹೇಳಿದಳು.

ರಾಜಕುಮಾರನು ತನ್ನ ಅರಮನೆಯ ಸಮೀಪವನ್ನು ಸೇರಿ ಸೇನಾನಿಯಾದ ಅಜೀಂಖಾನನನ್ನು ಕಂಡನು. ಆತನು. "ಮಹಾರಾಜನೆ! ನಿನ್ನ ಬಳಿಗೆ ಅತ್ಯವಶ್ಯಕವಾದೊಂದು ಕಾರ್ಯಕ್ಕೋಸ್ಕರ ಬಂದಿರುವೆನು. ತಂದೆಮಕ್ಕಳಿಬ್ಬರಿಗೂ ಸಂಗರ ನಿರ್ಣಯವಾಗಿ ಬಿಟ್ಟಿತು. ತಾವು ಸುಲ್ತಾನರನ್ನು ಇದಿರ್ಗೊಳುವುದಕ್ಕೆ ಸನ್ನದ್ಧರಾಗಬೇಕು." ಎಂದು ನುಡಿದನು.

ರಾಜಕುಮಾರನು ಆಮಾತಿಗೆ ಬದುಲು ನುಡಿಯದೆಯೆ "ಸೇನಾನಿಯೆ! ನಿಮ್ಮ ಕಾರ್ಯಗಳಿಗೆ ಅರ್ಥವೇನೋ ತಿಳಿಯದಿರುವುದಲ್ಲ! ನಿರಪರಾಧಿನಿಯಾದ ಯೋಗಿನಿಯನ್ನೇಕೆ ಸೆರೆ ಹಿಡಿದಿರಿ?" ಎಂದು ಪ್ರಶ್ನಿಸಿದನು.

"ಹಾಗೆ ಮಾಡಬೇಕಾಗಿ ಬಂದಿತು. ಮಹಾರಾಜನೆ! ನಾನು ಪಾದುಷಹನ ಆಜ್ಞೆಯನ್ನು ಅನುಸರಿಸಿದೆನಲ್ಲದೆ ಅದು ನನ್ನ ಕೆಲಸವಲ್ಲ, ಯೆರಡನೆಯಾಕೆಗೆ ಬದುಲಾಗಿ ಈ ಸ್ತ್ರೀಯನ್ನು ಹಿಡಿದುಕೊಳ್ಳುವುದೆಂದು ಆಜೆಯಿತ್ತನು."

"ಮಲ್ಲಿಗೆಯು ದೊರೆಯದಿದ್ದವನಿಗೆ ಈರುಳ್ಳಿಯಾದರೂ ಮೇಲಲ್ಲವೆ?" ಎಂದು ಪರಿಹಾಸೋಕ್ತಿಯಿಂದ ಮಹಾರಾಜನನ್ನು ಸಂತೋಷಗೊಳಿಸಿ ಆ ಸಂಗತಿಯನ್ನು ಮರೆಮಾಚಬೇಕೆಂದೆಣಿಸಿದನು. ಆದರೆ ಗಣೇಶದೇವನಿಗೆ ಈ ಕುಟಿಲ ಸಂಭಾಷಣವು ವೆಗಟಾಗಿ ತೋರಿ "ಅಜೀಂಖಾನ್! ಹೆಂಗಳನ್ನು ಕುರಿತು ಅಷ್ಟು ತಿರಸ್ಕಾರವಾಗಿ ಮಾತನಾಡದಿರು. ಆಕೆಯನ್ನು ಹಿಡಿದುಕೊಡ ಹೇಳಿ ಯಾರು ಆಜ್ಞಾಪಿಸಿದರೆಂಬುದು ನನಗೆ ಬೇಡ. ನಾನು ಆ ಯೋಗಿನಿಯನ್ನು ಬಿಡಿಸಿರುವೆನು." ಎಂದು ಧೀರತೆಯಿಂದ ನುಡಿದನು.

" ಸನ್ಯಾಸಿನಿಯನ್ನು ಬಿಡಿಸಿರುವೆಯಾ? ಮಹಾರಾಜನೆ! ನಿನ್ನ ಉದ್ದೇಶ್ಯವೇನು ?

" ನಾನು ಆಕೆಯ ಬಂಧನಗಳನ್ನು ಕಿತ್ತು ಹಾಕಿದೆನು. "

" ಆಕೆಯು ಖೈದಿಯಾಗಿರುವಾಗ ಬಂಧನಗಳನ್ನು ಬಿಡಿಸಿದುದು ಶಾಸನವ್ಯತಿರೇಕವಲ್ಲವೆ. "

" ಆಕೆಯನ್ನು ಬಿಡಿಸಿ ಕಳಿಸಿಬಿಟ್ಟೆನು. ಅದಿಲ್ಲದಿದ್ದರೆ ಸಂಕೋಲೆಯನ್ನು ನಾನೇಕೆ ಕತ್ತರಿಸಲಿ ? "

" ಮಹಾರಾಜನೆ ! ಆ ಸ್ತ್ರೀಯನ್ನು ಬಿಡಿಸಿ ತಪ್ಪಿಸಿಕೊಂಡು ಹೋಗುವಂತೆ ಮಾಡಿವೆನೆಂದೇ ಹೇಳುತಿರುವೆಯಾ ? "

" ಹಾಗಲ್ಲದಿದ್ದರೆ ಆಕೆಯನ್ನೇಕೆ ಬಿಡಿಸಲಿ ? "

" ನೀನು ಪರಿಹಾಸ್ಯ ಮಾಡುತಿರಬಹುದು. ಆಕೆಯು ಹೇಗೆತಾನೆ ತಪ್ಪಿಸಿಕೊಂಡು ಹೋದಾಳು.? ಆಕೆಯನ್ನು ಕೆಲವುಂದಿ ರಾಜಭಟರ ಬೆಂಗಾವಲಿನಿಂದಿಟ್ಟಿದ್ದೆನಲ್ಲ ! "

" ರಾಜಭಟರು ಅವರ ಕೆಲಸವನ್ನು ಅವರು ಮಾಡಿರುವರು. ಅವರನ್ನು ದಂಡಿಸ ಹೋಗದಿರು. ನಾನು ಬಲವಂತವಾಗಿ ಆಕೆಯನ್ನು ಬಿಡಿಸಿ ಸುರಕ್ಷಿತವಾದ ಸ್ಥಳದಲ್ಲಿಟ್ಟು ಬಂದೆನು. "

ಈ ಮಾತುಗಳನ್ನು ಕೇಳುತಲೆ ಸೇನಾನಿಯ ಪ್ರಾಣಗಳು ನಿಮಿಷದಲ್ಲಿಯೇ ಹಾರಿ ಹೋದಂತಾಗಿ " ಏನನ್ನು ಮಾಡಿವೆ? ಆಕೆಯ ಮೂಲಕ ಪಾದುಷಹರವರು ನಡೆದ ವೃತ್ತಾಂತವೆಲ್ಲವನ್ನೂ ಕೇಳಬೇಕೆಂದಿರುವರು, ಸರಿಯೆ, ಈಗತಾನೆ ಯೇನಾಯ್ತು ? ಆಕೆಯು ಯೆಲ್ಲಿರುವುಳೆಂಬುದನ್ನು ಹೇಳುವನಾಗು. ತಡಮಾಡದೆ ಆಕೆಯನ್ನು ನಮಗೊಪ್ಪಿಸು. ಹಾಗಿಲ್ಲದಿದ್ದರೆ ರಾಜದ್ರೋಹಿಯೆಂದು ನಿನ್ನನ್ನು ಸೆರೆ ಹಿಡಿಯಬೇಕಾದೀತು. "

" ಪಾದುಷಾಹನು ಅನ್ಯಾಯವಾದ ಶಾಸನವನ್ನು ಮಾಡಿದ ಪಕ್ಷದಲ್ಲಿ ಅದನ್ನು ಅತಿಕ್ರಮಿಸಿದ ಮಾತ್ರದಲ್ಲಿ ನಾನು ರಾಜದ್ರೋಹಿ ಯಾಗಲಾರೆನು. ಒಂದುವೇಳೆಯಲ್ಲಿ ಪಾದುಷಾಹನು ನನ್ನನ್ನು ಹಾಗೆಂದುಕೊಂಡರೆ ನನ್ನ

ತ್ತೂತನು ತನ್ನ ತಂದೆಗೆ ಮಾಡಿದ ಮೋಸವನ್ನೆಣಿಸಿ ನನ್ನ ಪ್ರಾರ್ಥನೆಯಮೇಲೆ ಆ ಸ್ತ್ರೀಯನ್ನು ಬಿಟ್ಟುಬಿಡಬೇಕೆಂದು ನಾನು ಕೋರಿದೆನೆಂದು ಪಾದುಷಾಹನಿಗೆ ಅರಿಕೆ ಮಾಡು. ”

ಆ ದಂಡನಾಯಕನು ನಸುನಕ್ಕು “ ಮಹಾರಾಜನೆ ! ನೀನು ಪಸುಳೆಯು. ಲೋಕವನ್ನು ಅರಿತವನಲ್ಲ. ನೀನು ವೈರವನ್ನು ಸಂಪಾದಿಸಿಕೊಳಲಪೇಕ್ಷಿಸಿದ ಪಕ್ಷದಲ್ಲಿ ಪೂರ್ವಿಕರು ಮಾಡಿದ ಮೋಸವನ್ನು ಜ್ಞಾಪಕವಡಿಸಿ ಕೊಡಬೇಕು. ಸುಲ್ತಾನರ ಅನುಗ್ರಹಕ್ಕೆ ಪಾತ್ರನಾಗಿರಬೇಕೆಂಬ ಕೋರಿಕೆ ಇರುವನಾದರೆ ಯೋಗಿನಿಯನ್ನು ಒಪ್ಪಿಸುವನಾಗು. ”

“ ಹಾಗೆಂದಿಗೂ ಕೊಡಲಾರೆನು. ನೀನು ಕೂಡ ಮಾನವನೆ ಅಲ್ಲವೆ? ದಂಡನಾಯಕನೇ ! ಇಂತಹ ಸ್ಥಿತಿಯಲ್ಲಿ ನೀನು ಮಟ್ಟಿಗೆ ಮತ್ತೊಂದು ಬಗೆಯಾಗಿ ಮಾಡುವೆಯಾ ? ನಿರಪರಾಧಿನಿಯೂ, ಅನಾಥಳೂ, ಅಬಲೆಯು ಕಾಪಾಡೆಂದು ಬೆನ್ನು ಬಿದ್ದರೆ ಸುಲ್ತಾನನ ಕೋಪವನ್ನು ಯೆಣಿಕೆ ಮಾಡುವೆಯಾ ? ”

“ ಈ ತರ್ಕವೆಲ್ಲವೂ ನಿಷ್ಪ್ರಯೋಜನವು. ಮಹಾರಾಜನೆ ! ಒಂದು ಸಂಗತಿಯನ್ನು ಮಾತ್ರ ಮನದಲ್ಲಿಡುವನಾಗು. ನಾನು ಬಲುಬೇಗ ಮರಳಿ ನಿನ್ನನ್ನೂ ಖೈದಿಯಾಗಿ ಹಿಡಿಯುವುದಕ್ಕೆ ಬರುವುದೇನೊ ನಿಶ್ಚಯವು. ಸುಲ್ತಾನನಿಗಾವುದೋ ಒಂದು ಭೂತವು ಆವರಿಸಿದೆ. ಆತನಿಗೆ ಹಿಂದಿನ ಉಪಕಾರಗಳೂ, ಧರ್ಮ ಸೂತ್ರಗಳೂ, ಹೇಳುವುದಕ್ಕಿದು ಸಮಯವೂ ಅಲ್ಲ. ಅದು, ಬೋಧೆಯಾಗುವುದೂ ಇಲ್ಲ. ”

“ ಹಾಗಾದರೆ ಅನಾಥೆಯಾದ ಸ್ತ್ರೀ ಪೀಡನವು ನಿಲಿಸಲ್ಪಡದಿದ್ದರೆ ಆತನ ಅಧಿಕಾರಕ್ಕೆ ಒಳಪಟ್ಟ ಸಾಮಂತ ರಾಜನಾಗಿರತಕ್ಕವನಲ್ಲವೆಂದು ಸುಲ್ತಾನರವರು ಮನಸ್ಸಿಗೆ ತಂದು ಕೊಳಬಹುದು. ”

ಸೇನಾ ನಾಯಕನು ಇವೆಲ್ಲವನ್ನೂ ಕೇಳಿದನು. ಆಗಲೆ ರಾಜಕುಮಾರನನ್ನು ಸೆರೆಹಿಡಿಯುವ ಅಧಿಕಾರವು ಆತನಿಗುಂಟು. ಆದರೆ ಆತನಲ್ಲಿ ಸ್ವಲ್ಪ ಮಾನವ ಧರ್ಮವಿರುವಿಕೆಯಿಂದಲೂ, ಸುಲ್ತಾನನು ಸ್ವಲ್ಪವಾದರೂ

ದಳಿರಿಗೆ ಬಂದಾನೋ ಏನೋ ಎಂಬಾಸೆಯಿದ್ದುದರಿಂದಲೂ, ಆಗ್ಗೆ ರಾಜಕು ಮಾರನನ್ನು ಬಿಟ್ಟು ಕೊಡಲಾಸ್ಪದವಾಗಿ ಆತನಿಗೆ ಸ್ವಸಂರಕ್ಷಣೆಗೆ ತಕ್ಕ ಏರ್ಪಾಡನ್ನು ಮಾಡಿಕೊಳ್ಳುವಿಕೆಗೆ ಅವಕಾಶ ದೊರೆಯಿತು.

ಸೇನಾನಾಯಕನುಸ್ವಲ್ಪದೂರ ಹಾಗೆ ಹೋದಕೂಡಲೆ ಯೋಗಿನಿಯು ಬಂದು "ನಾವಿಲ್ಲಿ ಇನ್ನುದಾವರೆ ಶತ್ರುಗಳು ಬಂದು ನಮ್ಮೆಲ್ಲರನ್ನೂ ಸೆರೆ ಹಿಡಿಯುವರು. ಸೇನೆಗಳನ್ನು ಸಿದ್ಧಪಡಿಸುವಂತೆ ನಿನ್ನ ಸೇನಾನಿಗೆ ಹೇಳಿ ಬಂದೆನು. ನಿನ್ನ ಪರಿಜನರನ್ನೂ ನಿನ್ನ ಕುಟುಂಬವನ್ನೂ, ಹಿಂದಿಟ್ಟುಕೊಂಡು, ನನ್ನೊಡನೆ ಹೊರಡು. ಯುದ್ಧವು ಸಂಧಿಸುವಂತಿದೆ. ಸುರಕ್ಷಿತವಾದ ಸ್ಥಳದಲ್ಲಿ ನೀನು ನೆಲೆಯಾಗಿರತಕ್ಕುದು." ಎಂದು ಹೇಳಿದಳು.

ಒಂದೇ ಒಂದು ಗಂಟೆಯ ಹೊತ್ತಿನೊಳು ಪರಿವಾರವೂ ತಾನೂ ತಾವಿದ್ದ ಪಾಂಡುವಾನಗರದೊಳಗಿನ ಸುಂದರ ಮಂದಿರವನ್ನು ಬಿಟ್ಟು ಕೊಟ್ಟು ಹೊರಟು ಹೋದರು. ತರುವಾಯ ಅಜೀಂಖಾನನು ದಿನಾಜಪುರಾಧಿನಾಥನನ್ನು ಸೆರೆಹಿಡಿಯುವುದಕ್ಕೆ ಅನುಜ್ಞೆಗಳನ್ನು ತರುವಾಗ್ಗೆ ಆರಾಜ ಮಂದಿರವು ನಿರ್ಮನುಷ್ಯವಾಗಿದ್ದಿತು.



## ಪ್ರಕರಣ ೨೦.

ವಂಗದೇಶದಲ್ಲಿ ಯುದ್ಧವು ಹರಡಿಕೊಂಡಿತು. ಕುಮಾರನು ಮಾಡಿದ ಮೋಸದಿಂದ ಭಂಗಪಟ್ಟು ಕುಪಿತನಾದ ಸುಲ್ತಾನನು ಯೋಗಿನಿಯು ತಪ್ಪಿಸಿಕೊಂಡ ಸುದ್ದಿಯನ್ನು ಕೇಳಿ ದಂಡ ತಾಡಿತ ಭುಜಂಗದ ಪರಿಯೊಳು ಅತ್ಯುಗ್ರನಾಗಿ "ಇದು ಕುರುವಿನಮೇಲೆ ಬೊಕ್ಕೆಯೆದ್ದಂತಿದೆ. ಮೊತ್ತ ಮೊದಲು ಆ ಹೆಂಗುಸನ್ನು ಬಿಡಿಸಿಬಿಟ್ಟು ಆ ತುಚ್ಛನು ಪ್ರಾರ್ಥನೆಯನ್ನು ಸಲಿಸುತಿರುವನಾಗಿದ್ದೀತು? ನನ್ನೊಡನೆ ಸರಸವಾಡಲೆಳೆಸಿದನೇ? ಆ ಮೂರ್ಖನನ್ನು ನೀನು ಇಲ್ಲಿಗೆ ಬಾರದೆಯೇ ಸೆರೆಹಿಡಿಯಬೇಕಾಗಿದ್ದಿತು. ಸೇನಾ

ನಿಯೇ ! ನೀನು ತಪ್ಪು ಕೆಲಸವನ್ನು ಮಾಡಿದೆ.,, ಎಂದನು.

ಈ ಛೀಪೆಟ್ಟಿಗೆ ಮನಸ್ಸು ಕಲಕಿದಂತಾಗಿ ಅಚೀಮಖಾನನು" ಲೋಕ ರಕ್ಷಾಮಣೀ ! ನಿನ್ನ ಸೇವಕನು ಮಾಡಿದುದು ತಪ್ಪೇ ಅಹುದು. ಆದರೂ ಸಂದರ್ಭವೆಲ್ಲವೂ ನಮಗೆ ವ್ಯತಿರೇಕವಾಗಿರುತ್ತದೆ. ನವಾಬು ಸಾಹೇಬರೊಡನೆ ಈಗಾಗಲೇ ಯುದ್ಧಸನ್ನದ್ಧವಾಗಿದೆ. ಈಗ ದಿನರಾಜ ಪುರಾಧಿನಾಥನನ್ನೂ ಕೂಡ ಸೆರೆ ಹಿಡಿದೆವಾದರೆ ಅವನೊಂದಿಗೂ ಹೋಡೆದಾಡಬೇಕಾಗುವುದು. ಆತನನ್ನು ಸೆರೆ ಹಿಡಿಯುವುದು ಅಷ್ಟು ಅಗಾಧಕಾರ್ಯವಲ್ಲ. ಅದು ನಮ್ಮ ಬಲವನ್ನು ತಗ್ಗಿಸಿಕೊಳುವುದಕ್ಕೆ ಕಾರಣವಾಗಿ ನಮಗೆ ಈಗ್ಗೆ ಅದರಿಂದ ಹಾನಿಯುಂಟಾದೀತು. ದಿನರಾಜಪುರದಲ್ಲಿ ಬಹು ದೊಡ್ಡ ಸೈನ್ಯವಿರುತ್ತದೆ. ಅವುಗಳನ್ನು ನಮ್ಮ ಪಕ್ಷಕ್ಕೆ ತೆಗೆದುಕೊಂಡೆವಾದರೆ ಶತ್ರುಗಳನ್ನು ಸುಲಭವಾಗಿ ಜೈಸಬಹುದು. "

ಸುಲ್ತಾನನು ಈ ಮಾತುಗಳು ಕಿವಿಯಲ್ಲಿ ಬೀಳುವ ಸ್ಥಿತಿಯೊಳಿಲ್ಲ. ಆತನಿಗೆ ಮತ್ತಷ್ಟು ಆಗ್ರಹವುಂಟಾಗಿ ಉದ್ರೇಕದಿಂದ "ಅಜೀಂಖಾನ್ ! ಈ ಪೋರನ ಸಹಾಯವಿಲ್ಲದಿದ್ದರೆ ನಾವು ಜೈಸಲಾರೆವೆಂದೇ ನಿನ್ನಭಿಪ್ರಾಯವೂ? ಏನು! ಅವನು ಮಾಡಿದ ಪರಾಭವವನ್ನು ಸ್ಮರಿಸಿ ನಾನು ಸುಮ್ಮನಿರುವೆನೆಂದು ನೀನಂದುಕೊಳುವೆಯಾ ? "

ಅಚೀಂಖಾನನು ಸುಲ್ತಾನನನ್ನು ಚೆನ್ನಾಗಿ ಅರಿತವನಾದುದರಿಂದ ಆ ಸಂಗತಿಯನ್ನು ಹೇಳುವುದನ್ನು ಅಲ್ಲಿಗೆ ನಿಲಿಸಿಬಿಟ್ಟು,—

" ದೇವನೆ ! ಅಲ್ಲ. ನನ್ನ ಅಭಿಪ್ರಾಯವು ಅದಲ್ಲ. ಮಹಾಸ್ವಾಮಿಯ ಅಜ್ಞೆಗೆ ಎದುರು ಕಾಯುತಿದೇನೆ. " ಎಂದನು.

" ನಾನು ಈಗಾಗಲೇ ಆಜ್ಞೆಯನ್ನು ಕೊಟ್ಟಿರುವೆನು. ನೀನು ಜಾಗ್ರತೆಯಲ್ಲಿ ಹೋಗಿ ಆತನನ್ನು ಬಂಧಿಸಿ ನನ್ನೆದುರಿಗೆ ತರತಕ್ಕುದು " ಎಂದು ಸುಲ್ತಾನನು ಅನುಜ್ಞೆಯಿತ್ತನು.

ಅದೇರೀತಿಯಾಗಿ ಸೇನಾನಾಯಕನು ಹೋಗಿ ಗಣೇಶದೇವನು ಆ ಸ್ಥಳದಲ್ಲಿ ಇಲ್ಲದಿರುವಿಕೆಯನ್ನು ನೋಡಿ ಹಿಂದಿರುಗಿ ಬಂದನು. ಆತನು

ಮರಳಿ ಬರುವಾಗ್ಗೆ ಗಯಾಜುದ್ದೀನನ ಸೈನ್ಯಗಳು ಬಂದಿದ್ದುವು. ಅವ ರೊಂದಿಗೆ ಹೊಡೆದಾಟವು ಸಂಧಿಸಿತು. ಎರಡು ಪಕ್ಕದಲ್ಲಿಯೂ ಸ್ವಲ್ಪ ನಷ್ಟ ಸಂಭವಿಸಿತು. ಅಷ್ಟರೊಳು ಸಾಯಂಕಾಲವಾದುದರಿಂದ ಯುದ್ಧ ವನ್ನು ನಿಲಿಸಿ ಸೈನ್ಯಗಳು ಅಡವಿಗಳೊಳಗಿನ ಮರೆಯಾದ ಸ್ಥಳಗಳಲ್ಲಿ ಅ ಲ್ಲಲ್ಲಿ ನಿಂತವು. ಗಣೇಶದೇವನು ಅಲ್ಲಿ ತನ್ನ ಶಿಬಿರವನ್ನು ಏರ್ಪಡಿಸಿ ಕೊಂಡಿದ್ದನು. ದಿನಾಜಪುರದಿಂದಲೂ ಮಿಕ್ಕುಳಿದ ಸ್ಥಳಗಳಿಂದಲೂ ಅನೇ ಕ ಸೈನ್ಯಗಳು ಬಂದು ಆತನ ಸೈನ್ಯದಲ್ಲಿ ಸೇರುತಿದ್ದುದರಿಂದ ಬಲವು ದಿನೇ ದಿನೇ ಅಭಿವೃದ್ಧಿಯಾಗುತಿದ್ದಿತು. ಸುಲ್ತಾನನು ಎರಡು ಬಲಗಳೊ ಡನೆ ಹೋರಾಡಬೇಕಾಗಿ ಬಂದಿತು. ಒಂದು ತನ್ನ ಕುಮಾರನದು. ಮ ತ್ತೊಂದು ಗಣೇಶದೇವನದು.



## ಪ್ರಕರಣ ೨೧.

ಆವ ಸುದತೀಮಣಿಯು ಹೃದಯವನ್ನು ಹೊಸರವು ದುಃಖಸಮು ದ್ರದೊಳು ಮುಳುಗಿಸಿಬಿಟ್ಟಿತೋ, ಆವ ನಾರೀಮಣಿಗೋಸ್ಕರ ಅನೇಕ ಮಂ ದಿಯು ಆಶಾಪೀಡಿತರಾಗಿ ಪರಸ್ಪರ ರಕ್ತಸ್ರಾವವನ್ನು ಕಾಣುತಿದ್ದರೋ, ಆ ಶಕ್ತಿಯು ಆ ಪುಷ್ಪಮಾಲಿಕೆಯನ್ನು ಯೆಸೆದ ಪಾಂಡುವಾ ನಗರದ ಜಾತ್ರೆಯ ದಿನಗಳನ್ನು ಮರಳಿ ಜ್ಞಾಪಕಕ್ಕೆ ತಂದುಕೊಳ್ಳೋಣ.

ಸಿಕಂದರು ಷಾ ಸುಲ್ತಾನನು ಆ ಕನ್ಯಾಲಲಾಮದ ಸೌಂದರ್ಯಕ್ಕೆ ಮೋಹಿತನಾಗಿ ಆಕೆಯನ್ನು ತನ್ನ ಅಂತಃಪುರಕ್ಕೆ ತಂದುಕೊಳಬೇಕೆಂದೆ ಣಿಸಿ ಆ ಸಾಯಂಕಾಲದೊಳು ತನ್ನ ಸೇನಾಪತಿಯಾದ ಅಜೀಂಖಾನನನ್ನು ತನ್ನ ಆಲೋಚನಾಮಂದಿರಕ್ಕೆ ಕರೆಸಿ ತನ್ನ ಅಪೇಕ್ಷೆಯನ್ನು ಅವನೊಡನೆ ತಿಳಿಸಿ ಅದಕ್ಕೆ ತಕ್ಕ ಅನುಜ್ಞೆಗಳನ್ನು ಕೊಟ್ಟನು.

ಆತನು ಆಕೆಯನ್ನು ಹುಡುಕಿ ಅಲ್ಲಿಗೆ ಕರೆತಂದು ಬಿಡಬೇಕು.

ಆ ಸಮಯದಲ್ಲಿಯೇ ಗಯಾಜುದ್ದೀನನು ತನ್ನ ಬಿಡದಿಗೆ ಹೋಗುತ ತಂದೆಯ ಅಪ್ಪಣೆಯನ್ನು ಪಡೆಯಲು ಅಲ್ಲಿಗೆ ಬಂದನು. ಅಜೀಂಖಾನನು ಆತನೊಡನೆ ಸುಲ್ತಾನನ ಅಭಿಪ್ರಾಯವನ್ನು ತಿಳಿಸಿ ಅದನ್ನು ಸಾಧಿಸುವುದಕ್ಕೋಸ್ಕರ ಪಿತೃಭಕ್ತಿಯುತನೂ ವಿಧೇಯನೂ ಆದ ಯುವರಾಜನನ್ನು ನೀನು ಕೂಡ ಈ ಕಾರ್ಯದಲ್ಲಿ ಸಹಾಯಮಾಡಬೇಕೆಂದು ಹೇಳಿದನು. ಈ ಸಂಗತಿಯು ತಿಳಿದಕೂಡಲೇ ಗಯಾಜುದ್ದೀನನು ಅತ್ಯಂತಾಶ್ಚರ್ಯ ಚಕಿತನಾದನು. ಆ ಹಿಂದೂ ಸುಂದರೀಲಲಾಮವನ್ನು ಆತನೇ ವರಿಸಿರುವನು. ಈಗ ತಾನು ಮಾಡತಕ್ಕುದೇನು? ತಂದೆಯೊಂದಿಗೆ ಸ್ಪರ್ಧೆಯನ್ನು ತಂದುಕೊಳ್ಳುವನೇ? ಹಾಗೆ ಮಾಡಬೇಕೆಂದರೆ, ಭಾಗ್ಯ, ರಾಜ್ಯ, ಒಂದುವೇಳೆ ಪ್ರಾಣವನ್ನುಕೂಡ ಕಳೆದುಕೊಳ್ಳಬೇಕಾಗುವುದು. ಇದರಿಂದ ವಿರಮಿಸಬೇಕಾದುದೇ? ಇವೆಲ್ಲವನ್ನೂ ಕಳೆದುಕೊಳ್ಳುವುದಕ್ಕೂ ಅಂಗೀಕರಿಸಬೇಕಾದುದೇ ? ಆತನಿಗೆ ಸ್ವಲ್ಪಹೊತ್ತು ಏನೂ ತೋರಲಿಲ್ಲ. ಆದರೆ ಕೊನೆಗೆ ವಿರಮಿಸದಿರುವುದಕ್ಕೇ ಕೃತನಿಶ್ಚಯನಾದನು. ನಿಮಿಷದಿಂದ ನಿಮಿಷಕ್ಕೆ ಆತನಿಗೆ ಅದರ ಭ್ರಾಂತಿಯು ಹೆಚ್ಚುತ ಆ ಪ್ರಯತ್ನವನ್ನು ತೊರೆಯುವುದಕ್ಕಿಂತಲೂ ಪ್ರಾಣತ್ಯಾಗವಾದರೂ ಉತ್ತಮವೆಂದುಕೊಳ್ಳುತಿದ್ದನು. ಶೃಂಗಾರ ವಿಲಾಸಗಳಲ್ಲಿ ಬಳಕೆಯಿದ್ದವನಾದುದರಿಂದ ಆತನ ಅಪೇಕ್ಷೆಗಳು ಅವಿಚ್ಛಿನ್ನವಾಗಿ ವೃದ್ಧಿಯಾಗುತಿದ್ದಿತು. ತನ್ನ ಹೃದಯವು ಅಪೇಕ್ಷಿಸಿದ ಕಾಂತಾರತ್ನವನ್ನು ತಂದೆಯನ್ನು ಸಂತೋಷಪಡಿಸುವುದಕ್ಕೋಸ್ಕರ ಬಿಟ್ಟುಬಿಡುವನೇ ? ಹಾಗೆಮಾಡಲಿಚ್ಛೆಯಿಲ್ಲ.

ಈ ನವಾಬುಷಾಹನು ಸುವರ್ಣನಗರವನ್ನು ಪರಿಪಾಲಿಸುತಿದ್ದನು. ಆತನು ಅಲ್ಲಿಯೇ ರಾಜಧಾನಿಯನ್ನು ಮಾಡಿಕೊಂಡು ಅಸ್ತ್ರಸಂದರ್ಶನೋತ್ಸವಕ್ಕೆಂದು ಪಾಂಡುವಾನಗರಕ್ಕೆ ಬಂದಿದ್ದನು. ಆತನ ದೇಶದಲ್ಲಿ ಆತನ ಅಧಿಕಾರವು ನಿರಂಕುಶವಾಗಿ, ನಾಣ್ಯಗಳುಕೂಡ ಆತನ ಪ್ರತಿಮೆಯೊಂದಿಗೆ ಮುದ್ರಿಸಲ್ಪಡುತಿದ್ದುವು. ಆತನಿಗೆ ಈ ಅಧಿಕಾರವೆಲ್ಲವನ್ನೂ ಪಾದುಷಾಹನು ಸಂತೋಷದಿಂದ ಕೊಟ್ಟಿದ್ದನು. ಗಯಾಜುದ್ದೀನನು ತನ್ನ ತರುವಾ

ಯ ಸಿಂಹಾಸನಕ್ಕೆ ಬರತಕ್ಕವನಾದುದರಿಂದ ಅಂತಹ ಅಧಿಕಾರವನ್ನು ಆತನಿಗೆ ಕೊಡುವುದರಲ್ಲಿ ಹಾನಿಯಾವುದೂ ಆಗ್ಗ ಕಾಣ್ಬಂದಿರಲಿಲ್ಲ. ಆತನ ದೇಶದಲ್ಲೆಲ್ಲವೂ ಇಂತಹ ಅಧಿಕಾರವನ್ನು ಆತನಿಗೆ ಕೊಡುವುದಕ್ಕೆ ಸುಲ್ತಾನನು ಹಿಂದೆಗೆದಿರಲಿಲ್ಲ.

ತಂದೆಯ ಉದ್ದೇಶಗಳನ್ನು ಅರಿತವನಾಗಿ ಗಯಾಜುದ್ದೀನನು ಬಹುಯೆಚ್ಚರಿಕೆಯಿಂದ ತನ್ನ ಪ್ರಯತ್ನಗಳನ್ನು ಪ್ರಾರಂಭಿಸಿದನು. ತನ್ನ ಬಿಡದಿಗೆ ಬಂದು ಸುವರ್ಣನಗರಕ್ಕೆ ಹಿಂದಿರುಗಿಹೋಗಲು ಸಂಸಿದ್ಧನಾಗಿ ಆ ರಾತ್ರಿಯಲ್ಲಿಯೇ ತನ್ನ ಕುಟುಂಬವನ್ನೂ, ಕೆಲವರು ಸೈನಿಕರನ್ನೂ ಕಳುಹಿಕೊಟ್ಟನು. ಉಳಿದವರನ್ನು ತನ್ನೊಂದಿಗಿಟ್ಟುಕೊಂಡು ಕುತುಬನ ಬರುವಿಕೆಯನ್ನೆದುರು ಕಾಯುತಿದ್ದನು.

ಈ ಕುತುಬೆಂಬಾತನಾರು ? ಆತನು ಈ ಯುವರಾಜನಿಗೆ ನಂಬಿಕೆಯುಳ್ಳ ಬಂಟನು. ಆತನ ಕೆಲಸಗಳೆಲ್ಲವನ್ನೂ ನೆರವೇರಿಸತಕ್ಕವನು. ಹಾಗೆ ನೆರವೇರಿಸುವುದಕ್ಕೋಸ್ಕರ ಎಂತಹ ದುಷ್ಕಾರ್ಯಕ್ಕಾದರೂ ಹಿಂದೆಗೆಯಲಾರದ ಅಂತರಾತ್ಮವುಳ್ಳವನು. ತನ್ನ ಇಷ್ಟಾರ್ಥವನ್ನು ಹೇಗಾದರೂ ತೀರಿಸಿಕೊಳುವಿಕೆಯೇ ಯುವರಾಜನ ಸ್ವಭಾವವು. ಈ ಕುತುಬನು ಅವೆಲ್ಲಕ್ಕೂ ಸಹಕಾರಿಯಾಗುವುದೊಂದೇ ಅಲ್ಲದೆ ಪ್ರೋತ್ಸಾಹವನ್ನೂ ಉಂಟುಮಾಡುತಿರುವವನು. ಲಾವಣ್ಯಮೌಕ್ತಿಕವಾದ ಶಕ್ತಿಯನ್ನು ನೋಡಿದೊಡನೆಯೇ ಯುವರಾಜನ ಮನದಲ್ಲಿ ಅಪೇಕ್ಷೆಯಂಕುರಿಸಿತು. ಕುತುಬನು ಇದನ್ನು ಆತನ ನೋಟದಿಂದಲೇ ಗುರುತರಿತು ಆಕೆಯನ್ನು ತನ್ನ ಯಜಮಾನನಿಗೆ ಧಾರೆಯೆರೆಯುವುದಕ್ಕೆ ಉಪಾಯಗಳನ್ನು ಹುಡುಕುತಿದ್ದನು. ಅವನು ಆ ಕೆಲಸಗಳನ್ನು ಮಾಡಿಕೊಂಡು ಬರುವನೆಂಬುವುದಕ್ಕೆ ಯುವರಾಜನಿಗೆ ಲೇಶವೂ ಸಂದೇಹವಿರಲಿಲ್ಲ. ಯುವರಾಜನಿಗೆ ಹುಟ್ಟಿದ ಬಯಕೆಗಳಲ್ಲಿ ಕುತುಬನಿಂದ ಒಂದಾದರೂ ಬಂಜೆಯಾಗದಿರುವುದು ಸಹಜವಾದ ದೃಷ್ಟಾಂತರವಾಗಿದ್ದಿತು. ಕುತುಬನು ಯಾವಾಗ ಬಂದಾನೆಂದು ನಿಮಿಷಗಳನ್ನು ಯೆಣಿಸುತ ಕುಳಿತಿದ್ದನು. ಈಗ ತನ್ನ ಪರಿವಾರದೊಡನೆ ಸುರಕ್ಷಿ

ಕವಾಗಿ ತನ್ನ ಪಟ್ಟಣವನ್ನು ಸೇರಬೇಕೆಂಬೆಣಿಕೆಯೊಂದೇ ಅತನ ಮನಸಿನಲ್ಲಿ ತುಂಬಿದ್ದಿತು. ಅಲ್ಲಿ ಸೇರಿಕೊಂಡುದಾದರೆ ಯೆಲ್ಲ ವಿಧಗಳಿಂದಲೂ ಕ್ಷೇಮಕ್ಕೆ ಕೊರತೆಯಿಲ್ಲ. ಹಕ್ಕಿಯು ಬಲೆಯಲ್ಲಿ ಬಿದ್ದಿತೆಂಬ ಶುಭವರ್ತಮಾನದೊಡನೆ, ಕುತುಬನು ಬರುವಾಗ್ಗೆ ಹೆಚ್ಚುಕಡಮೆ ಜಾವದ ಯಿರುಳ್ಕಳೆಯಿತು. ಆ ಸಂಗತಿಯೊಳು ಮತ್ತಾವಚಿಂತೆಯೂ ಇಲ್ಲ. ಇವರೆಲ್ಲರೂ ಹೊರಟು ಬಲೆಗೆ ಸಿಕ್ಕಿದ ಹಕ್ಕಿಯನ್ನು ತೆಗೆದುಕೊಂಡು ಪಂಜರದಲ್ಲಿಡುವುದೊಂದೇ ಉಳಿದಿರುವುದು. ಈ ಮಧ್ಯದಲ್ಲಿ ನಡೆದ ವೃತ್ತಾಂತವೆಲ್ಲವನ್ನೂ ನವಾಬನು ತನ್ನ ಗೆಳೆಯನೊಡನೆ ನುಡಿದನು. ಆತನು ಕೂಡ ನವಾಬನು ಮಾಡಿದ ಕೆಲಸಗಳು ಸಮಯಾನುಸಾರವಾದುವೆಂದು ಶ್ಲಾಘಿಸಿದನು. ಹೀಗೆ ಅವನ ಅಂಗೀಕಾರವನ್ನು ಮರಳಿ ನಿಶ್ಚಯವಾಗಿ ತಿಳಿದುಕೊಂಡು ಗಯಾಜುದ್ದೀನನು ಮುಂದಿನ ಕಾರ್ಯಗಳಿಗೆ ಆತನನ್ನು ಆಲೋಚನೆ ಕೇಳಿದನು. ಆ ಕನ್ನೆಯನ್ನು ಮದುವೆಯಾಗಿ ಹಿಂದೆಯೇ ಕರೆದುಕೊಂಡು ಹೋಗಬೇಕೆಂಬದಾಗಿಯು, ರಾಜ ಚಿಹ್ನೆಗಳಿಂದ ಆಕೆಯನ್ನು ಇದಿರ್ಗೊಳಬೇಕೆಂಬುದಾಗಿಯು ಯುವರಾಜನ ಅಪೇಕ್ಷೆಯಾಗಿದ್ದಿತು. ಆದರೆ ಇದಕ್ಕೆ ಒಂದು ಆತಂಕವುಂಟು. ಯುದ್ಧ ನಡೆಯುವುದು ನಿಶ್ಚಯವೇ ; ಆದುದರಿಂದ ಶಕ್ತಿಯ ಮನಸಿಗೆ ತಕ್ಕಂತೆ ಉಪಚರಿಸುವುದಕ್ಕೂ, ರಾಜ ಮರಿಯಾದೆಗಳಿಂದ ಕರೆದುಕೊಂಡು ಬರುವುದಕ್ಕೂ, ನಿರಪಾಯವಾದ ಪ್ರದೇಶವಾವುದೂ ಇಲ್ಲ. ಇದಕ್ಕೆ ಕುತುಬನ ಸಲಹೆಯು ಅತ್ಯವಶ್ಯವಾಗಿದ್ದಿತು. ಮೋಹ ಜಾಲದಲ್ಲಿ ಸಿಲುಕಿರುವ ಗಯಜುದ್ದೀನನಿಗೆ ತನ್ನ ಕೊರಳಲ್ಲಿ ಸಿಲುಕಿರುವ ಗಂಡಗತ್ತರಿಯೂ, ತನಗೆ ಪ್ರಾಪ್ತವಾಗುವುದಕ್ಕಿರುವ ಅಪಾಯವೂ ತಿಳಿದಿಲ್ಲ. ಆತನು ಯಾವಾಗಲೂ ತನ್ನ ಇಂದ್ರಿಯಗಳಿಗೆ ಸೆರೆ ಬಿದ್ದಿರುವನಾದುದರಿಂದ ದುರಾಲೋಚನೆಗಳಿಂದಲೂ, ದುರ್ವ್ಯಸನಗಳಿಂದಲೂ, ದುರೂಹೆಗಳಿಂದಲೂ, ದುರ್ಬೋಧೆಗಳಿಂದಲೂ, ಲೋಲನಾಗಿರುವನು.

ಕುತುಬನು ಯಾವಾಗಲೂ ಆತನಿಗೆ ತಕ್ಕಂತಹ ಯೋಚನೆಗಳನ್ನೇ ಹೇಳುತಿರುವನು. ತನ್ನ ತಂದೆಗೆ ಒಂದು ಅಭುಕ್ತಮೂಲೆಯೊಳಗೆ ರಹಸ್ಯ

ಸ್ಥಳದಲ್ಲಿ ಏಕಾಂತಭವನವೊಂದುಂಟು. ಇದು ಈ ಕಾರ್ಯಕ್ಕೆ ತಕ್ಕುದಾಗಿ ಗಿರುವುದರಿಂದ ಆ ಸ್ಥಳದಲ್ಲಿ ಬೇಕಾದುವುಗಳೆಲ್ಲವನ್ನೂ ಅಣಿಮಾಡುವಂತೆ ಅದರ ಮೇಲಣಧಿಕಾರಿಗೆ ಆಜ್ಞೆಗಳನ್ನು ಒಡನೆಯೆ ಕಳುಹಿದನು. ಗಯಾಜುದ್ದೀನನ ಸೇನಾನಾಯಕನಾದಹುಸೇಖಾನನೂ,ಕೆಲವರು ಭಟರೂ, ಎರಡು ಪಲ್ಲಕ್ಕಿಗಳೂ ಕೆಲಮಂದಿ ದಾದಿಯರ ಸಮೇತ ಈ ಕಾರ್ಯಕ್ಕೆ ಕಳುಹಲ್ಪಟ್ಟರು. ನಂತರ ನವಾಬನೂ, ಗುರುವಾದ ಕುತುಬನೂ, ಒಂದು ಪಲ್ಲಕ್ಕಿಯನ್ನೂ ಆರುಮಂದಿ ರಾಜಭಟರನ್ನೂ ಹಿಂದಿಟ್ಟುಕೊಂಡು, ಪಾಪ! ದುರದೃಷ್ಟವಂತೆಯೂ, ನಿಷ್ಕಲ್ಮಷಹೃದಯೆಯೂ, ಆದ ಆ ರಾಜ ಪುತ್ರಿಯನ್ನು ಹಿಡಿದುಕೊಳ್ಳಲು ಹೋದರು. ಕಾಳಿಕಾಲಯವು ಸಮೀಪಿಸಿದಕೂಡಲೆ ರಾಜಭಟರೂ, ಪಲ್ಲಕಿಯನ್ನು ಹೊರುವಂತವರೂ, ಸಹ ಕುತುಬನ ಅಪ್ಪಣೆಯಂತೆ ಆ ವನದಲ್ಲಿ ಕಾಣಿಪಂತಿದ್ದರು. ತರುವಾಯ ಸ್ನೇಹಿತರಿಬ್ಬರೂ ಕಳ್ಳತನದಿಂದ ಮ್ಲೇಚ್ಛರು ಪ್ರವೇಶಿಸಬಾರದಂತಹ ಆ ಆಲಯ ದೊಳಗೆ ಕತ್ತಲೆಯ ಸಹಾಯವಿದ್ದುದರಿಂದ ನಿರ್ಭಯವಾಗಿ ಪ್ರವೇಶಿಸಿದರು. ಕುತುಬನಿಗೆ ಆದೇವಾಲಯವು ಅದುವರೆಗೆ ಕೃತಪರಿಚಿತವಾಗಿದ್ದಿತು. ಆತನು ಆ ಬಾಲಿಕೆಯ ಹಿಂದೆ ಇವಕ್ಕೆ ಮುಂಚಿತವಾಗಿ ತದ್ವಾರದವರೆಗೆ ಹೋಗಿದ್ದನು. ಆಕೆಯೊಂದು ಕೊಠಡಿಯಲ್ಲಿ ಪ್ರವೇಶಿಸಿದುದನ್ನು ನೋಡಿ ತಾನು ಗರ್ಭಗೃಹವನ್ನು ಹೊಕ್ಕು ಅಲ್ಲಿರುತ ಆಕೆಗೂ, ಸೋದರತ್ತೆಗೂ ನಡೆದ ಸಂಭಾಷಣೆಯನ್ನು ಸ್ವಲ್ಪಮಟ್ಟಿಗೆ ಕೇಳಿದ್ದನು. ಅಡವಿಯೊಳಿದ್ದಾಗ ಅವನು ಫಕೀರನ ವೇಷದಿಂದಿದ್ದನು. ಈಗ ಮತ್ತೊಂದು ವೇಷವನ್ನು ತಾಳುವುದೊಳ್ಳೆಯದೆಂದೆಣಿಸಿ ದೇವಸ್ಥಾನವನ್ನು ಸೇರಿದಕೂಡಲೆ ಅದನ್ನು ತೆಗೆದು ಹಾಕಿ ತನ್ನ ತಲೆಯಮೇಲಿನ ರುಮಾಲನ್ನು ತೆಗೆದು ಸೊಂಟಕ್ಕೆ ಸುತ್ತಿ ಕಾಳಿಯ ಕೊರಲಲ್ಲಿದ್ದ ಭೀಭತ್ಸಕಪಾಲ ಒಂದನ್ನು ನಿರ್ಭಯದಿಂದ ತೆಗೆದು ಕೊಂಡು ತನ್ನ ಕೈಯೊಳು ಧರಿಸಿ ಅಲ್ಲಿ ಬಟ್ಟಲೊಳಿರುವ ರಕ್ತಚಂದನವನ್ನು ತೆಗೆದು ಕೊಂಡುತನ್ನ ಮೊಡಲಲ್ಲಿಯೂ ಬೊಟ್ಟುಗಳಿಟ್ಟುಕೊಂಡನು.

ಹೀಗೆ ವೇಷಧಾರಣೆಯಾದ ನಂತರ ಅವನು ಕಾಳಿಕಾ ಪೂಜಾರಿಗಳಲ್ಲೆಲ್ಲ ಕ್ರೂರ ಜೀವಿಯಾದ ಕಾಪಾಲಿಕನಂತೆ ಕಾಣ್ಬರುವನು.

ಆಳುವ ಮಹಾಪ್ರಭೂ ! ನಾವಿನ್ನು ಮಾಡತಕ್ಕುದೇನೆಂಬುದನ್ನು ಯೋಚಿಸೋಣವೆಂದು ಬಾಗಿಲ ಸಂದುಗಳಲ್ಲಿ ಯೋಗಿನಿಯ ಚಿಕ್ಕಮನೆಯೊಳಕ್ಕೆ ಬಗ್ಗಿನೋಡಿ ಮೆಲ್ಲನೆ "ನವಾಬ್‌ಜೀ! ವಿಗ್ರಹದ ಹಿಂಭಾಗದಲ್ಲಿ ಔತುಕೊಂಡಿರು. ಆ ಕನಕಾಂಗಿಯು ಇಲ್ಲಿಗೆ ಬರುತಿರುವಳು." ಎಂದು ಹೇಳಿದನು. ಅದರಂತೆ ಅವರಿಬ್ಬರೂ ಅದರ ಹಿಂಭಾಗದಲ್ಲಿ ಅಡಗಿರುತ್ತ, ಸಮಯ ಸಂಧಿಸುತಲೇ ಕುತುಬನು ಕಂಠಧ್ವನಿಯನ್ನು ಮಾರ್ಪಡಿಸಿ ಶಕ್ತಿಯ ಮಾತುಗಳೆಲ್ಲಕ್ಕೂ ಪ್ರತ್ಯುತ್ತರವನ್ನಿತ್ತನು. ಅನಂತರದ ಕತೆಯೆಲ್ಲವೂ ಪಾಠಕರಿಗೆ ತಿಳಿದುದೆ !



## ಪ್ರಕರಣ ೨೨.

ಶಕ್ತಿಯು ಉದ್ಯಾನವನದೊಳಿದ್ದಳು. ಅಲ್ಲಿನ ವೈಭವಾತಿಶಯವನ್ನು ನೋಡಿ ಆಕೆಗೆ ಒಂದು ನಿಮಿಷಮಾತ್ರ ಮನಸಿನಲ್ಲಿ ವಿಸ್ಮಯಹುಟ್ಟಿ ಅಷ್ಟರೊಳು ಅದು ಅಂತರ್ಧಾನವಾಗಿ ಬಿಟ್ಟಿತು. ಆಕೆಯ ಮನಸ್ಸು ಅಂತಹ ಮೇಲಣ ಬಣ್ಣಗಟ್ಟಿದವುಗಳಿಗೆ ವಶವಾಗಿ ಮೋಸಹೋಗತಕ್ಕುದಲ್ಲ. ಇಷ್ಟುಮಾತ್ರವಲ್ಲದೆ ಅಂತಹ ವಿಭವವು, ತನಗೆ ಸಹಜವಾಗಿರತಕ್ಕುದೆಂದೇ ಆಕೆಯ ತಾತ್ಪರ್ಯವು. ಸಿಂಹಾಸನವನ್ನೇರುವುದಕ್ಕಾಗಿ ಹುಟ್ಟಿ, ಅಂತಹ ಅದೃಷ್ಟಭಾಗಿನಿಯಾಗಿ, ಈಗ ರಾಣಿಯಾಗಿರುವಳು. ರಾಣಿಗೆ ಅಂತಹ ವಿಭವ ವಿಶೇಷಗಳು, ನಡೆಯುವಿಕೆಯು ಸಾಮಾನ್ಯವಲ್ಲದೆ ಹೆಚ್ಚಿಗೆ ಯೇನೂ ಅಲ್ಲ. ಆಕೆ ಇರುವ ಅಂತಃಪುರದೊಳಗಿನ ಗೋಡೆಗಳೆಲ್ಲವೂ ನಿಲುಗನ್ನಡಿಗಳಿಂದ ಅಲಂಕರಿಸಲ್ಪಟ್ಟಿದ್ದುವು. ಅವುಗಳ ಸಮೀಪದಲ್ಲಿ ಬಂಗಾರದ ಪಟ್ಟಿಗಳಿಂದಲೂ, ಹವಳದ ಅಂಚುಗಳಿಂದಲೂ ಕೆತ್ತಲ್ಪಟ್ಟ ಪರ್ಯಂಕ

ಗಳೂ ಅವುಗಳ ಬಳಿಯಲ್ಲಿ ಬಳ್ಳಿಗಳು ಹೆಣೆದುಕೊಂಡಿರುವ ಹೂಗಿಡಗಳು ಪರಿಮಳವನ್ನು ಬೀರುತಿದ್ದುವು. ಅಲ್ಲಲ್ಲಿ ಚಂದ್ರಕಾಂತ ಶಿಲಾಮಯ ವಾದ ಪೀಠಗಳುಳ್ಳವುಗಳಾಗಿ ಪುಷ್ಪಸೌರಭಗಳನ್ನು ಸೂರೆಗೊಳ್ಳುತ್ತ ಪನ್ನೀರಿನ ತುಂತುರುಗಳಿಂದ ಘಮಘಮಾಯಮಾನವಾಗಿ ಆಭವನವೆಲ್ಲವೂವ್ಯಾಪಿಸಿ ಅಂತರಂಗಕ್ಕೆ ಆಹ್ಲಾದವನ್ನುಂಟು ಮಾಡುತಿದ್ದಿತು. ಬೆಲೆಯುಳ್ಳ ವಸ್ತ್ರಾಭರಣಗಳಿಂದಲಂಕೃತರಾದ ಹಲವು ಮಂದಿ ಪರಿಚಾರಿಕೆಯರು ಶಕ್ತಿಯ ಸೇವಾನಿರತರಾಗಿರುತಿದ್ದರು. ಆಕೆಯನ್ನು ನೋಡಿದರೆ ಸಾವಿರಮಂದಿ ಅಪ್ಸರ ಕನ್ನೆಯರೊಡಗೂಡಿ ವಿಹರಿಸುತಿರುವ ಇಂದ್ರನ ರಾಣಿಯಂತಿರುವಳು. ಮೆರುಗನ್ನು ಹಡೆಯುತಿರುವ ನಿಲುಗನ್ನಡಿಗಳು ಆ ಮಂದಿರವು ಸ್ವರ್ಗವೋ ಎಂಬ ಭ್ರಮೆಯನ್ನುಂಟುಮಾಡುತಿದ್ದುವು. ಇಂತಹ ಸ್ವರ್ಗಭವನದ ನಡುವೆ ಶಕ್ತಿಯ ರೂಪಮಾತ್ರ ಬಹುವುಡುಪಿನೊಂದಿಗೆ ಅನೇಕ ಸ್ಥಳಗಳಲ್ಲಿ ಪ್ರತಿಬಿಂಬಿಸುತಿದ್ದಿತು. ಅದನ್ನು ನೋಡಿ, ತಾನೇ ಅಹುದೊ? ಅಲ್ಲವೊ? ಎಂದು ಶಕ್ತಿಯು ಮಂದಹಾಸ ಮಾಡಿದಳು. ಈಗ ಆಕೆಗೊಂದು ಬಗೆಯಾದ ತೃಪ್ತಿಯಂಕುರಿಸಿತು. ಇವೆಲ್ಲವೂ ಆಕೆಗೋಸ್ಕರವೆ ಅಲ್ಲವೆ? ಆವದಾರಿಯಿಂದ ನೋಡಿದರೂ ತಾನಾಗಿ ಒಂದರ ಹಿಂದೊಂದಾಗಿ ತೀರ್ಥಯಾತ್ರೆಗಳನ್ನು ಸೇವಿಸುತ ನಿಲುವನೆಳಲೂ; ಹಿಡಿಯುವ ಕೊಂಬೆಯೂ ಇಲ್ಲದೆ ಸಂಚರಿಸುತಿರುವ ಶಕ್ತಿಗೆ ಈಗಾಗಲೆ ಅನೇಕ ಸಾವಿರಮಂದಿಯು, ಕಣ್ಣುಸನ್ನೆಗೆ ಸೊಂಟಕಟ್ಟಿ ಓಡಾಡುತ ಆಕೆಗೋಸ್ಕರ ಪ್ರಾಣಗಳನ್ನು ಕೂಡ ಸಮರ್ಪಿಸುವುದಕ್ಕೆ ಸನ್ನದ್ಧರಾಗಿರುವರು.

ಆಕೆಯನ್ನು ಪರಿಚಾರಿಕೆಯರು ಸ್ನಾನ ಮಂದಿರಕ್ಕೆ ಕರೆದುಕೊಂಡು ಹೋಗಿ ಅಮೂಲ್ಯಗಳಾದ ನಾಲ್ಕು ಬಗೆಯ ವಸ್ತ್ರಾಭರಣಗಳನ್ನು ಆಕೆಯ ಮುಂಭಾಗದಲ್ಲಿ ತಂದಿಟ್ಟು "ತಾಯೀ! ಬೇಗಂಸಾಹೆಬಾ! ಮದುವಣಗಿತಿಯ ಮುಸ್ತೈದುಗಳಿಗಾಗಿ ಇವುಗಳಲ್ಲಿ ತಮಗಾವುದು ಇಷ್ಟವೋ ಅಪ್ಪಣೆಯಾಗಲಿ" ಎಂದು ಕೈಮುಗಿದು ಬೇಡಿಕೊಂಡರು.

ಶಕ್ತಿಯು—ಅವುಗಳನ್ನು ಒಂದರ ಹಿಂದೊಂದನ್ನು ನೋಡಿ ಬಾಯ್ತೆರೆದು " ಇವು ಚೆನ್ನಾಗಿಲ್ಲ. ಇದಕ್ಕೂ ಒಳ್ಳೆಯವಿಲ್ಲವೋ? "ಎಂದು ಕೇಳಲು, ಅವರು ವಿಸ್ಮಿತರಾಗಿ ಯೇನನ್ನೂ ಹೇಳಲಾರದೆ ಸ್ವಲ್ಪಹೊತ್ತಿನಮೇಲೆ ಸಾಹಸದಿಂದೊಬ್ಬಳು "ಬೇಗಂಸಾಯಬೂ !" ಇವುಗಳಿಗೋಸ್ಕರ ಮೂರು ಮಂದಿ ರಾಣಿಯರು ಜಗಳವಾಡಿದರು, ಅವರ ವೈರವಿನ್ನೂ ಶಾಂತವಾಗಲಿಲ್ಲ, ಅಂತಹ ಉಡುಪುಗಳನ್ನು ತಾವು ನಿರಾಕರಿಸುತಿರುವಿರಿ. ಇವು ನವಾಬರ ತಾಯಿಯವರು ಧರಿಸುತಿದ್ದ ವುಡುಪು. ಆಕೆಯು ಗತಿಸಿದ ತರುವಾಯ ಇವುಗಳನ್ನು ಪಡೆಯಬೇಕೆಂದು ಮುವ್ವರು ರಾಣಿಯರೂ ಪ್ರಯತ್ನಿಸಿದರಾದರೂ ನವಾಬರು ಅವರಿಗೆ ಕೊಡುವುದಕ್ಕೆ ಅಂಗೀಕರಿಸಲಿಲ್ಲ. ಆ ಮಹಾರಾಜನು ಈಗ ಅವುಗಳನ್ನು ತಾವು ಧರಿಸುವುದಕ್ಕೆ ಕಳುಹಿರುವರು."ಎಂದಳು

ಈ ಮಾತುಗಳನ್ನು ಕೇಳಿ ಆ ಹಿಂದೂ ಸುಂದರಿಯು " ಅವು ನನಗೆ ಅವಶ್ಯವಿಲ್ಲ. ಹೊಸರಾಣಿಯು ಬಹುಮಾನ ಮಾಡಿರುವಳೆಂದು ಹೇಳಿ ಇವು ಆ ಮೊವ್ವರು ರಾಣಿಯರಿಗೂ ಸಮರ್ಪಿಸಿ ಬನ್ನಿರಿ."

ದಾದಿ—ನಾಲ್ಕನೆಯದನ್ನು ಮಾಡುವುದೇನು ?

ಶಕ್ತಿ:—ನಾಲ್ಕನೆಯದೇ ? ಇದುವರೆಗೆ ನವಾಬರಿಗೆ ಯೆಲ್ಲರಿಗಿಂತಲೂ ಪ್ರೀತಿಪಾತ್ರಳಾರು. ;

ದಾದಿ. " ಮೋತಿಯಾಜಾನ್ "

ಶಕ್ತಿ—" ಸರಿಯೆ: ಆಕೆಗೆ ಸಮರ್ಪಿಸಿ ಬನ್ನಿರಿ "

ದಾಸಿ—" ರಾಜ್ಞಿಯ ಚಿತ್ತ ಒಪ್ಪಿದಂತೆ ಮಾಡುವೆವು. ಆದರೆ ನಮ್ಮ ಮಹಾರಾಣಿಯವರು ಧರಿಸುವ ಉಡುಪಾವುದು ? "

ಶಕ್ತಿ. " ಒಂದು ಸೀರೆಯಲ್ಲವೆ ? ಸೀರೆಯೊಂದೂ ಮೇಲ್ಮುಸುಕೊಂದೂ ಇದ್ದರೆ ನನಗೆ ಸಾಕು. "

ಅಷ್ಟರಲ್ಲಿ ಆ ಪರಿಚಾರಿಕೆಯು ದೊಡ್ಡಪೆಟ್ಟಿಗೆಯೊಂದನ್ನು ತೆರೆದು ಅದರಲ್ಲಿದ್ದ ಬಲು ಬೆಲೆಯುಳ್ಳ ಸೀರೆಗಳನ್ನೂ ದಾವಣಿಗಳನ್ನೂ ತೆಗೆದು ತೋರಿದಳು. ಅವುಗಳಲ್ಲಿ ವಜ್ರಸ್ಥಗಿತವಾದ ಒಂದು ಬಿಳಿಯ ಪತ್ತಲವನ್ನೂ ಧವಳ ವರ್ಣದ ದಾವಣಿಯೊಂದನ್ನೂ ತೆಗೆದುಕೊಂಡಳು.

ಅನಂತರದ ಕಾರ್ಯವು ಸ್ನಾನವು. ಅದಾದಕೂಡಲೆ ಆ ಉಡುಪನ್ನು ಧರಿಸಿ ಶಕ್ತಿಯು ಒಂದು ಹವಳದ ಪರ್ಯಂಕದೊಳು ವೈಯಾರದಿಂದೊರಗಿದಳು. ಅನೇಕಮಂದಿ ಪರಿಚಾರಿಕೆಯರು ಬಗೆಬಗೆಯಾಗಿ ಉಪಚರಿಸುತ್ತಿದ್ದರು. ಒಬ್ಬಳು ತಲೆಗೂದಲನ್ನು ಆರಿಸುತ್ತಿದ್ದಳು. ಇನ್ನೋರ್ವಳು ಚಾಮರವನ್ನು ಹಾಕುತ್ತಿದ್ದಳು. ಮತ್ತೊಬ್ಬಳು ಪಾದಾಭರಣವನ್ನು ತೊಡಿಸುತ್ತಿದ್ದಳು. ಉಳಿದವರು ಅತ್ತರು ಪನ್ನೀರು ಮುಂತಾದ ಪರಿಮಳದ್ರವ್ಯಗಳನ್ನು ಚೆಲ್ಲುತ್ತಿದ್ದರು. ಇಬ್ಬರು ಬಾಲಿಕೆಯರು ಆಭರಣದ ಪೆಟ್ಟಿಗೆಯನ್ನು ತಂದು ಅಮೂಲ್ಯಗಳಾದ ಆಭರಣಗಳನ್ನು ಆಕೆಯ ಮುಂದಿಟ್ಟರು. ನವರತ್ನಸ್ಥಗಿತವಾದ ಆ ಆಭರಣಗಳು ತಮ್ಮ ಕಾಂತಿಗಳಿಂದ ನೋಟಕರ ಕಣ್ಗಳನ್ನು ಮುಚ್ಚಿಸುತ್ತಿದ್ದುವು. ವಜ್ರಗಳೆಲ್ಲವೂ ಬ್ರಹ್ಮಜಾತಿಯವು. ಅವುಗಳೊಳಗೊಂದು ವಜ್ರದಹಾರವನ್ನು ಆ ಪರಿಚಾರಿಕೆಯು ಮೇಲಕ್ಕೆತ್ತಿ ಹಿಡಿದುಕೊಳ್ಳಲು ಸಹಸ್ರ ಸೂರ್ಯರೊಂದೇಬಾರಿ ಉದಯಿಸಿದಂತೆ ಆ ಮಂದಿರವೆಲ್ಲವೂ ತೇಜೋಮಯವಾಗಿಬಿಟ್ಟಿತು. ಶಕ್ತಿಯು ಇದುವರೆಗೆ ದಿನಾಜಪುರದಲ್ಲಿ ರತ್ನಗಳೆಷ್ಟೋ ನೋಡಿರುವಳಾದರೂ ಅವಿಷ್ಟುರಮಣೀಯವಾದುವುಗಳಲ್ಲ. ಹೀಗೆ ನೋಡಿನೋಡಿ ಶಕ್ತಿಯು ಕೆಲವು ರತ್ನಾಭರಣಗಳನ್ನು ತೆಗೆದುಕೊಂಡಳು. ಹೀಗೆ ಅಲಂಕೃತಳಾಗಿ ಮರಳಿ ನಿಲುಗನ್ನಡಿಯ ಉಪ್ಪರಿಗೆಯೇರಿದಳು. ನವಾಬನು ವಧೂಸಂದರ್ಶನೋತ್ಸುಕನಾಗಿ ಆತುರದಿಂದೆದುರುಕಾಯುತ ಆಕೆಯು ಸಿದ್ಧವಾಗಿರುವಳೆಂಬ ವಾರ್ತೆಯು ಯಾವಾಗ ಕಿವಿಯಲ್ಲಿ ಬಿದ್ದೀತೆಂದು ನಿರೀಕ್ಷಿಸುತ್ತಿದ್ದನು. ಈಗ ಶಕ್ತಿಯು ಮರಳಿ ತನ್ನ ಸೌಂದರ್ಯವನ್ನು ಕನ್ನಡಿಯಲ್ಲಿ ನೋಡಿಕೊಂಡಳು. ನೋಡಿದಷ್ಟೂ ತನ್ನ ರೂಪವು ತನಗೇ ಅದ್ಭುತವಾಗಿ ಕಂ

ದು, ತನ್ನೀ ಅಲಂಕಾರಗಳೆಲ್ಲವೂ ಯಾರಿಗೋಸ್ಕರ? ಎಂದುಕೊಳುತಿರಲು ಆಶ್ರು ಕಣಗಳುದುರಲಾರಂಭವಾಯಿತು. ತಾನು ಅಪೇಕ್ಷಿಸಿದ ಮದುವೆಯದಿವಸವಿದೇನೇ ? ಇದರದೆಸೆಯಿಂದ ಭಾಗ್ಯವೂ, ಅಧಿಕಾರವೂ, ರಾಜ್ಯವೂ, ಎಲ್ಲವೂ, ಪ್ರಾಪ್ತವಾಗುತಿದ್ದಿತಾದರೂ ಅಂತರಾತ್ಮನು ಮಾತ್ರ ದುಃಖಮಗ್ನವಾಗಿದ್ದಿತು. ಇವೆಲ್ಲವೂ ಏತಕಾಕೆಗೆ? ಹೆಂಗುಸಿಗುಂಟಾದ ಅನುರಾಗಲತೆಯು ಮೂಲಚ್ಛೇದವಾದಾಗ ಪ್ರಾಣಗಳು ಮಾತ್ರವೇತಕೆ ? ಗಣೇಶದೇವನು ತನಗಿನ್ನು ದೊರೆಯಲಾರನು. ಯೆಂದೆಂದಿಗೂ ದಕ್ಕಲಾರನು. ಈಗ ಮಾಡುವುದಕ್ಕಿರುವ ಕಾರ್ಯದಿಂದ ತಾನು ಆತ್ಮನನ್ನೂ ಶರೀರವನ್ನೂ ಕೂಡ ಕೇವಲ ಬಹಿರಾಡಂಬರಕ್ಕೆ ವಿಕ್ರಯಿಸುತಿರುವಳಲ್ಲವೆ ? ಇದರ ದೆಸೆಯಿಂದಾಕೆಗೆ ಸಮಸ್ತ ಗೌರವಗಳೂ, ಕೀರ್ತಿಯೂ, ನಾಶವಾಗುವುದಿಲ್ಲವೇ ? ಇದುವೇ ಆಕೆಯು ಸಾಧಿಸಲೆಣಿಸಿದ್ದುದು ? ಇದರ ಪ್ರತಿಫಲವಾರಿಗೆ ಲಭಿಸಿತು ? ತಾನು ಗಣೇಶದೇವನಿಗೆ ಕೊಟ್ಟ ಶಾಪಗಳೆಲ್ಲವೂ ತನ್ನಮೇಲೆಯೇ ಬಿದ್ದು ಮಾತೃಸ್ವರೂಪವಾದ ಸ್ತ್ರೀಧರ್ಮವನ್ನು ನಿರ್ಮೂಲಮಾಡುವುದಾಯಿತು. ಆಕೆಯು ದೃಷ್ಟಿಗೆ ಆಕಯೇ ಘೋರತಮವಾಗಿ ಕಾಣುವಂತಾಯಿತು. ಸ್ತ್ರೀಗೌರವವು ಮಲಿನವಾಗಿಬಿಟ್ಟಿತು. ಇನ್ನು ತಾನೊಬ್ಬ ಮಾನವತಿಯೆಂದು ಹೇಳಿಕೊಳಬಲ್ಲಳೋ ? ತಾನು ಸ್ತ್ರೀರೂಪಿಣಿಯಾದ ಪಿಶಾಚವಲ್ಲವೇ ? ಯೆಂಬ ಊಹೆಯೊಂದು ಮನದೊಳಂಕುರಿಸಿತು. ತನ್ನ ಗತಕಾಲಕ್ಕೂ ತನಗೂ ವುಳ್ಳ ಸಂಬಂಧವು ಇಂದಿಗೆ ಪೂರ್ತಿಯಾಗಿ ನಾಶವಾಗಿ ಬಿಟ್ಟಿತು. ಇನ್ನು ತನ್ನ ಬಂಧು ಮಂಡಲಿಯನ್ನು ಸೇರಲವಕಾಶವಿಲ್ಲ. ಈ ಎಣಿಕೆಗಳು ಹುಟ್ಟುತಲೇ ಆಕೆಯ ಮನದಲ್ಲಿ ಅಸಹ್ಯ ಭಾವವು ಉದಯಿಸಿತು. ಅವೆಲ್ಲವೂ ಹಾಗಿರಲಿ, ತನ್ನನ್ನು ಗಣೇಶದೇವನೇನೆನ್ನುವನು ? ಆತನು ಆಕೆಯನ್ನು ವರಿಸದಿದ್ದರೂ, ಅತ್ಯಂತ ಗೌರವದಿಂದ ನೋಡುತ ಭಯ ಭಕ್ತಿಗಳಿಂದ ಆಕೆಯ ಹೆಸರನ್ನು ಕೂಡ ಗೌರವಿಸುತಿದ್ದವನು. ಈಗ ಹೀಗೆ ಆತ್ಮವಿಕ್ರಯಮಾಡಿಕೊಳುವುದಕ್ಕಿಂತಲೂ ತನ್ನ ಸೋದರತ್ತೆಯಂತೆ ಯೋಗಿನಿಯಾಗಿರಬಾರದೇಕೆ ? ಇಂತಹ ಯೋಚನೆಗಳಿಂದ ಆಕೆ

ಯ ಮನದಲ್ಲಿ ಪಶ್ಚಾತ್ತಾಪ ಉಂಟಾಯಿತು. ಆದರೆ ಕಾಲಾತಿಕ್ರಮಣವಾಯಿತು.

ಹೀಗೆ ಚಿಂತಿಸುತಿರಲು ಪರಿಚಾರಿಕೆಯೊಬ್ಬಳು ಬಂದು "ನವಾಬಷಾಹರು ತಮ್ಮ ಸಂದರ್ಶನವನ್ನು ನಿರೀಕ್ಷಿಸುತಿರುವರು. ನಮ್ಮ ಒಡತಿಯು ಸಿದ್ಧವಾಗಿರುವಂತೆ ಅರಿಕೆಮಾಡಲು ಆಜ್ಞೆಯೇ ?"

"ಸರಿಯೆ, ಆತನನ್ನು ಒಳಕ್ಕೆ ಬರಹೇಳಿ ತಿಳಿಸು." ಎಂದು ಪ್ರತ್ಯುತ್ತರವನಿತ್ತು ದಾಸಿಯೊಬ್ಬಳನ್ನು ಕರೆದು "ನಾನು ಇದುವರೆಗೆ ಉಟ್ಟು ಬಿಚ್ಚಿಟ್ಟ ವಸ್ತ್ರಗಳೆಲ್ಲಿರುವವು ? ಅವುಗಳನ್ನಿಲ್ಲಿಗೆ ತರುವಳಾಗು." ಎಂದು ಹೇಳಿ ತಾನು ಧರಿಸಿದ್ದ ಬೆಲೆಯುಳ್ಳ ಆಭರಣ ವಸ್ತ್ರಗಳನ್ನು ತೆಗೆದು ದಾಸಿಯ ಕೈಗೆ ಕೊಟ್ಟುಬಿಟ್ಟಳು. ಅವಳು ಅಚ್ಚರಿಯಿಂದ "ಬೇಗಂಸಾಹೇಬಾ! ಹೀಗೆ ಮಾಡಿದರೆ ನಮ್ಮ ಒಡೆಯನೇನೆಂದು ಕೊಳುವನು ? ಎಂದು ಮೆಲ್ಲನೆ ಮೂಲಗುತ ನುಡಿದಳು. ಆದಕ್ಕೆ ಶಕ್ತಿಯು "ಅದು ನನ್ನ ಕೆಲಸವು, ಅದರ ಗೊಡವೆ ನಿನಗೇಕೆ ? ಬೇಗನೆ ಹೋಗಿ ನನ್ನ ವಸ್ತ್ರಗಳನ್ನು ನನಗೆ ತಂದು ಕೊಡು" ಎಂದು ಹೇಳಿದ ಕೂಡಲೆ ಅವಳು ಮರುಮಾತಾಡದೆ ಹಾಗೆಯೇ ನಡೆಸಿದಳು. ಶಕ್ತಿಯು ತನ್ನ ಮೊದಲಿನ ಯೋಗಿನಿಯ ವೇಷವನ್ನು ಧರಿಸಿ ನವಾಬನು ಕಾದಿದ್ದ ಕನ್ನಡಿಯ ತೊಟ್ಟಿಯೊಳಕ್ಕೆ ಪ್ರವೇಶಿಸಿದಳು. ಆಕೆಯು ಇನ್ನೂ ಅದೇ ವೇಷದಿಂದಿರುವುದನ್ನು ನೋಡಿ, ಆತನು "ಇದಕ್ಕೆ ಅರ್ಥವೇನು ? ವಂಗದೇಶವನ್ನಾಳುವ ಅರಸಿಯ ವೇಷವೇ ಇದು ?" ಎಂದು ನುಡಿದನು. ಶಕ್ತಿಯು "ನಾನಿನ್ನೂ ವಂಗದೇಶದ ಅರಸಿಯಲ್ಲವು. ಯುದ್ಧವು ನಡೆಯುತಿರುವವರೆಗೂ ನಾನು ಈ ವೇಷದಿಂದಲೇ ಇರತಕ್ಕವಳು."

ಎಂದು ನಿರ್ಲಕ್ಷ್ಯದಿಂದ ನುಡಿದ ಮಾತುಗಳಿಗೆ ನವಾಬನ ಮನಸ್ಸು ನೊಂದು ಆಕೆಯನ್ನು ಬುಜ್ಜಗಿಸಲೆಳಸಿ "ಪ್ರೇಯಸೀ ! ನಾನು ನಿನಗೋಸ್ಕರ ಈ ಭಾಗ್ಯವನ್ನೂ, ವಿಭವವನ್ನೂ, ರಾಜ್ಯವನ್ನೂ, ಸೂರೆಕೊಡಲು ಸಿದ್ಧವಾಗಿರುವೆನು. ನನಗೆ ಈ ವಿಪತ್ಸಮಯದಲ್ಲಿ ನಿನ್ನ ಪ್ರೇಮಪೂರಿತವಾದ ಓರೆನೋಟವೊಂದಲ್ಲದೆ ಬೇರೆಯಾವುವೂ ಧೈರ್ಯವನ್ನುಂಟುಮಾಡಲಾರವು. ಅವಕ್ಕೆ ಬದುಲಾಗಿ ನನಗೇನು ಕಾಣಬಣರುತಿವೆ? ಏನಿದು?" ಎಂದು ಆಕೆಯ

ನ್ನು ಸವಿಾಪಿಸಿಹೋಗುತಿರಲು ಶಕ್ತಿಯು ಹಿಂದಕ್ಕೆ ಹೋಗಿ, ನಿಂತು "ಮಹಾರಾಜನೇ ! ನನ್ನನ್ನು ಮುಟ್ಟದಿರು. ಈ ಯುದ್ಧವು ಮುಗಿಯುವವರೆಗೆ ನಾನು ನಿನ್ನ ರಾಣಿಯಾಗುವುದಿಲ್ಲೆಂದು ಪ್ರತಿಜ್ಞೆಮಾಡಿದೆನು." ಎನಲು ಆಯುವರಾಜನಿಗೆ ಆಶ್ಚರ್ಯವೂ, ಆಗ್ರಹವೂ, ಉಂಟಾಗಿ ಆಕೆಯನ್ನು ಸಮಾಧಾನ ಪಡಿಸಿ "ನನ್ನ ಆಜ್ಞೆಗಳಿಗೆ ನೀನು ಬದ್ಧಳಾಗಿರತಕ್ಕದ್ದೇ! ಅಲ್ಲದೆ ನಿನ್ನ ಅನುಜ್ಞೆಗೆ ನಾನು ಒಳಪಟ್ಟಿರತಕ್ಕವನಲ್ಲ. ಏನನ್ನು ಹೇಳಿದರೂ ನೀನು ನನ್ನ ಅರಸಿಯಾಗಿ ನನ್ನ ಸೊತ್ತಾಗಿರುವೆ." ಎಂಬೀ ಮಾತುಗಳು ಶಕ್ತಿಯ ಕಿವಿಗೆ ಬೀಳುತಲೆ ಯೆಲ್ಲಿಲ್ಲದ ಆಗ್ರಹವೂ ಬಂದು ತಿರಸ್ಕಾರಭಾವವು ತುಳುಕಾಡುತಿರಲು ನಿರ್ಭಯದಿಂದ ಹೀಗೆಂದಳು.

"ಹಾಗಾದರೆ ನಾನು ನಿನ್ನ ಅರಸಿಯಾಗಲಿಲ್ಲೆಂಬದಾಗಿಯೂ, ಇನ್ನು ಮುಂದೆ ಯೆಂದೆಂದಿಗೂ ಆಗಲಾರೆನೆಂಬದಾಗಿಯೂ, ತಿಳಿದುಕೊಳುವನಾಗು. ನನ್ನನ್ನು ಕಳುಹಿಸಿ ಬಿಡು. ಹಾಗಿಲ್ಲವಾದರೆ" ಎಂದುಹೇಳುತಿರುವಾಗ ಒಬ್ಬ ದಾಸಿಯು ಗಾಬರಿಯಿಂದ ಬಂದು "ನವಾಬುಷಾಹ ! ಮಹರಾಜ್ ! ಕುತುಬಷಾಹನು ಅತಿತ್ವರೆಯಲ್ಲಿ ತಮ್ಮ ಸಂದರ್ಶನವಾಗಬೇಕೆಂದು ಅಪೇಕ್ಷಿಸುತ್ತಾನೆ. ಹೊರಗೆ ಕಾದಿರುವನು. ಅಪಾಯ ಸಂಭವಿಸುವಂತಿದೆ." ಎಂದು ಗಾಬರಿಯಿಂದ ಅರಿಕೆ ಮಾಡಿದಳು.

ನವಾಬನು ಶಕ್ತಿಗೆ ಸೋತು ವಿಧೇಯನಾಗಿ "ಪ್ರೇಯಸೀ ! ನನ್ನನ್ನು ಮನ್ನಿಸು. ನಾನು ನಿನ್ನ ದಾಸನಾಗಿರತಕ್ಕವನು. ನಾನೀಗ ಯುದ್ಧಕ್ಕೆ ಹೊರಡುತಿದ್ದೇನೆ. ಮರಳಿ ನಿನ್ನನ್ನು ನೋಡಲು ಬರುವೆನೋ, ಬಾರೆನೋ, ಅರಿಯೆನು. ನಿನಗೋಸ್ಕರ ಪ್ರಾಣಗಳನ್ನು ಸೂರೆಕೊಡಲು ಸಂಸಿದ್ಧನಾಗಿರುವ ನನಗೊಂದು ಗಾಢಾಲಿಂಗನ ಸುಖವಾದರೂ ಇಲ್ಲವಾಯ್ತೇ ! ಅದನ್ನು ಅನುಗ್ರಹಿಸಿದೆಯಾದರೆ ಮೃತಿಯಾದರೂ ನನಗೆ ಹಿತವಾಗಿರುವುದು." ಅಂದನು.

ಈ ಮಾತಿಗೆ ಶಕ್ತಿಯು ಚಲಿಸದೆ "ಲೋಕನಾಯಕನೇ! ವ್ರತವನ್ನು ನಾನು ತಪ್ಪುವಳಲ್ಲ. ನಿನ್ನನ್ನೂ ನನ್ನನ್ನೂ ದುಃಖಗಳಪಾಲು ಮಾಡಬೇಕೆಂಬ ಬಯಕೆ ನಿನಗೆ ಇಲ್ಲದಿದ್ದ ಪಕ್ಷದಲ್ಲಿ ನನ್ನನ್ನು ಬೇಳಾಡುವುದಿನ್ನು ಸಾಕುಮಾಡು. ಇಲ್ಲದಿದ್ದರೆ ನಿನ್ನ ಅಂಗರಕ್ಷಕರೆಷ್ಟು ಮಂದಿಯಾವರೂ ಈ ಅಂತಃಪುರದಲ್ಲಿ ನನ್ನನ್ನುಳಿಸಲಾರರು." ಎಂದು ನುಡಿದಳು.

ಅಷ್ಟರೊಳು ಈ ಕೆಳಗಿನ ಕೂಗು ಕೇಳಿಸಿತು. ಕುತುಬನು ಗಟ್ಟಿಯಾಗಿ ಕೂಗುಗಳಿಡುತ ಒಳಗೆ ಪ್ರವೇಶಿಸಿ "ಅಯ್ಯಾ! ತ್ವರೆಪಡಬೇಕು. ತಡಮಾಡಿದರೆ ನಮ್ಮೆಲ್ಲರನ್ನೂ ತಪ್ಪಿತಸ್ಥರನ್ನಾಗಿ ಸೆರೆ ಹಿಡಿಯುವರು. ಪರಿಚಾರಿಕೆಯರು ಪಲ್ಲಕ್ಕಿಯನ್ನೇರಿರುವರು. ಬೇಗಂಸಾಹೆಬಾವನ್ನು ಸಹ ಜಾಗ್ರತೆಯಲ್ಲಿ ಪಲ್ಲಕ್ಕಿಯನ್ನೇರಲು ಕಳುಹಿಕೊಡಬೇಕು. ಅರಣ್ಯಮಾರ್ಗದಿಂದ ತಪ್ಪಿಸಿಕೊಳಬೇಕು." ಆ ಯುವರಾಜನು ತನ್ನ ಯಾವದ್ವಿಶಿಷ್ಟ ವಿಭವವನ್ನೂ ಸೂರೆಕೊಡಲು ಸಂಸಿದ್ಧನಾದುದು ಈ ಸುಖಾನುಭವಕ್ಕೋಸ್ಕರವೇ! ಈ ವಿವಾಹಮಹೋತ್ಸವದಿನವನ್ನಪೇಕ್ಷಿಸಿಯೇ ಸ್ತ್ರೀ ಪುರುಷರು ದುಃಖಭಾಗಿಗಳಾದರು. ಆತನಿಗೆಲಭಿಸಿದುದೆಲ್ಲವೂ ತಾನೊಲೆದವನಿತಾರತ್ನದ ತಿರಸ್ಕಾರವಾಕ್ಯಗಳೆ! ಇದು ಮನದಲ್ಲಿ ಗಾಯವಾಗಿ ನಿಂತು ತನ್ನ ಕೋರಿಕೆಯು ಒಂದು ಬಾರಿಯಾದರೂ ತೀರದೆ ಗೆಯುಜುದ್ದೀನನು ಖೇದಗೊಂಡು ಯುದ್ಧಸನ್ನದ್ಧನಾಗಿ ಹೊರಪಯಣಮಾಡನು.

## ಪ್ರಕರಣ ೨೩.

ಪಾದುಷಾಹನು ವಿವೇಕವಿಹೀನನಾಗಿ ಒಂದೇ ಮುಷ್ಕರದಿಂದ ತನ್ನ ನಾಶನಕ್ಕೆ ತಾನೇ ದಾರಿಯನ್ನುಂಟುಮಾಡಿಕೊಳುತಿದ್ದನು. ಸ್ವಜನರೊಡನೆಯೂ ಹೆರವರೊಡನೆಯೂ, ವಿರೋಧವನ್ನು ಸಂಪಾದಿಸಿಕೊಂಡನು. ಆತನಿಗೊಂದು ಪದ್ಧತಿಯಾದರೂ ಉದ್ದೇಶವಾದರೂ, ಸ್ಥಿರವಾಗಿಲ್ಲದಿದ್ದಿತು. ಪರಸ್ಪರ ವಿರುದ್ಧಗಳಾದ ಅಸುಜ್ಞೆಗಳನ್ನು ಗಳಿಗೆಗೊಂದು ಬಾರಿ ಬಗೆಬಗೆಯಾಗಿ ಕಳಿಸುತ ಸೇನಾನಾಯಕರನ್ನು ಹಿಂಸೆ ಪಡಿಸುತಿದ್ದನು. ಇದರ ದೆಸೆಯಿಂದ ಯಾವಾಗಲೂ ಪ್ರತಿಫಲವು ಪಾದುಷಾಹನಿಗೆ ವ್ಯತಿರೇಕ

ಾಗಿರುವಿಕೆಯು ಸಹಜವಾಗಿದ್ದಿತು. ಅಂತಹ ಸಮಯಗಳಲ್ಲಿ ಸುಲ್ತಾನನ ಜ್ಞೆಯಂತೆ ನಡೆಯುವ ಸೇನಾನಾಯಕರಿಗೂ ಘೋರವಾದ ಛೀ ಪೆಟ್ಟು ಳು ಬೀಳುತಿದ್ದುವು. ಜಯಪ್ರದವಾಗುವಂತಹ ಸಮಯಗಳಲ್ಲಿ ಕೂಡ ಾದುಷಾಹನು ಅವರನ್ನು ಉಚಿತ ಮರಿಯಾದೆಯಲ್ಲಿ ನೋಡುವುದಿಲ್ಲ. ಈ ಕಾರಣಗಳಿಂದ ಮಂತ್ರಿಗಳಲ್ಲಿ ಅತೃಪ್ತಿಯು ವ್ಯಾಪಿಸಿದ್ದಿತು.

ಸೈನಿಕರಾದರೋ; ನಿರುತ್ಸಾಹಿಗಳಾಗಿ ನೀತಿ ತಪ್ಪಿದರು. ದೇಶ ನಲ್ಲಿ ಬರವು ಬಲವಾಯ್ತು. ದೇಹಧಾರಢ್ಯವುಳ್ಳ ಬೇಸಾಯಗಾರರೆಲ್ಲರೂ ಆಯುಧ ಧಾರಿಗಳಾಗಿ ಯುದ್ಧಕ್ಕೆ ಹೋಗಬೇಕಾಗಿ ಬಂದುದರಿಂದ ಹೆಂಗೆ ಸೂ, ಮಕ್ಕಳೂ, ಬೇಸಾಯಗಳನ್ನು ಮಾಡತಕ್ಕವರಾದರು. ಕ್ಷಾಮಪೀಡಿ ತವಾದ ದೇಶವು ಸೈನ್ಯಕ್ಕೆ ಆಹಾರ ಸಾಮುಗ್ರಿಯನ್ನೊದಗಿಸಲಾರದಂತಾ ಯ್ತು.ರಾಜಭಟರಿಗೆ ಎರಡು ಮೂರು ಹೊತ್ತಿಗೆ ಒಂದುಬಾರಿಯು ಅನ್ನವಾ ಪರೂದೊರೆಯದಂತಾಯ್ತು.ಇದರ ಜತೆಯಲ್ಲಿಯುದ್ಧದೊಳು ಅಪಜಯವೂ ಕೂಡ ಅವರನ್ನೇ ಅನುಸರಿಸುವಂತಿದ್ದಿತು. ಒಂದುಬಾರಿ ಶತೃಗಳು ಇವ ರಿಂದ ಸೋಲಿಸಲ್ಪಟ್ಟರೆ, ಮೂರುಸಲ ಅವರಿಂದಿವರು ಸೋಲಿಸಲ್ಪಡುತಿ ದ್ದರು. ಹೀಗಿರುವುದರಲ್ಲಿ ಇನ್ನು ಯುದ್ಧವು ಸಾಗುವುದು ದುಷ್ಕರವಾಗಿ ಕಾಣುತಿದ್ದಿತು. ಯುದ್ಧಾರಂಭವಾಗಿ ಒಂದು ವರುಷದ ಮೇಲೆಯೇ ಆಯ್ತು. ದಿನಾಜಪುರದರಾಜನೊಂದಿಗೆ ಸಂಧಿಮಾಡಿಕೊಂಡು ಗಯಜುದ್ದೀನ ನನ್ನು ಗೆಲುವುದೆಂದು ಮಂತ್ರಿಗಳು ಮಾತು ಮಾತಿಗೂ ಹೇಳುತಿದ್ದರು. ಇದುವ ರೆಗೂ ಅವರ ಹಿತೋಪದೇಶಗಳನ್ನು ಸುಲ್ತಾನನು ಲಕ್ಷ್ಯಕ್ಕೆ ತಾರದೆ ನಿರಾ ಕರಿಸುತ ಬಂದನು. ಆದರೆ ಇನ್ನು ಹಾಗೆ ಮಾಡಲು ಅವಕಾಶವಿಲ್ಲದಂತಹ ವಿಷಮ ಸ್ಥಿತಿಯೊದಗಿತು. ಗಯಜುದ್ದೀನನ ಸೇನೆಯು ದಿನೇದಿನೇ ಪ್ರವರ್ಧ ಮಾನವಾಗುತಿದ್ದುದರಿಂದ ಆತನು ಅಗಾಧವಾದ ಸೈನ್ಯದೊಡನೆ ರಾಜ ಧಾನಿಯಮೇಲೆ ದಾಳಿ ಬರುತಿದ್ದನು. ಜಯವನ್ನು ಹೊಂದುತಿರುವವರಿಗೆ ಅನುಸರಣೆಯು ಹೆಚ್ಚಾಗಿರುವುದು. ಯುವರಾಜನು ತಂದೆಯನ್ನು ಗೆಲ್ಲುವ

ನೆಂದು ಪ್ರಜೆಗಳಿಗೆ ತಿಳಿದ ಕೂಡಲೆ ಅವರೆಲ್ಲರೂ ಆತನನ್ನು ಸೇರಿಕೊಳುತಿದ್ದರು. ಸುಲ್ತಾನನ ವುಳಿದ ಮಕ್ಕಳೇಳು ಮಂದಿಯೂ ಆತನ ಗಾಳಿಗೆ ಕೂಡ ನಿಲಲಾರದೆ ಸೈನ್ಯಸಹಾಯಬೇಕೆಂದು ಮೊರೆಯಿಡುತಿದ್ದರು. ರಾಜಧಾನಿಗೆ ಸಮೀಪದಲ್ಲಿ ಶಿಬಿರವನ್ನೇರ್ಪಡಿಸಿಕೊಂಡು ಸುಲ್ತಾನನನ್ನು ಸೋಲಿಸುತಿದ್ದ ಗಣೇಶದೇವನೊಡನೆ ಸಂಧಿಮಾಡಿಕೊಳ್ಳತಕ್ಕುದೆಂದು ಮಂತ್ರಿಗಳು ಮಾತು ಮಾತಿಗೂ ಸುಲ್ತಾನನೊಡನೆ ಹೇಳುತಿದ್ದಂತೆ ಚಕ್ರವರ್ತಿಯ ಸೈನ್ಯವೂ ಗಣೇಶದೇವನ ಸೈನ್ಯವೂ ವೊಂದಾದರೆ ಮೊದಲಿಗಿಂತಲೂ ಧೃಢತರವಾಗಿ ನವಾಬನನ್ನು ಎದುರಿಸ ಬಹುದಾಗಿದ್ದಿತು. ಆಗ್ಗ ಆದುವೇ ತರಣೋಪಾಯವಾಗಿದ್ದಿತು. ಇದರ ನಿಜಸ್ಥಿತಿಯೆಲ್ಲವೂ ಸುಲ್ತಾನನಿಗೆ ಚೆನ್ನಾಗಿ ಮನಸಿಗೆ ಹತ್ತಿತು. ಆದರೆ ಸ್ವಯಂಕೃತವಾಗಿ ತಂದುಕೊಂಡ ವಿಪತ್ತಿಗೆ ಮರುಗಿ ಚಕ್ರವರ್ತಿಯಾದ ತಾನು ತನಗೆ ಪಾದಾಕ್ರಾಂತನಾಗಿರತಕ್ಕ ದಿನಾಜ ಪುರಾಧಿನಾಥನ ಸಹಾಯವನ್ನಪೇಕ್ಷಿಸುವಂತೆ ಮಾಡಿದ ವಿಧಿಯನ್ನು ತಾನು ಬೈದುಕೊಳ್ಳಲಾರಂಭಿಸಿದನು. ಆದರೆ ಅದೃಷ್ಟವನ್ನೆಷ್ಟಾಗಿ ಬೈದರೂ ಪ್ರಯೋಜನವಿಲ್ಲದಿದ್ದಿತು. ಈ ಸಂಗತಿಯು ಆತನ ಹೃದಯದಲ್ಲಿ ನಾಟಿದಷ್ಟೂ ಮನೋವ್ಯಥೆಯು ಹೆಚ್ಚಾಗುತಿದ್ದಿತು.

ಮಂತ್ರಿಗಳೆಲ್ಲರೂ ಸೇರಿ ಒಂದು ಸಭೆಯನ್ನು ಮಾಡಿದರು. ಆಗ್ಗಿರುವ ವಿಪನ್ನಾವಸ್ಥೆಯನ್ನು ಸುಲ್ತಾನನಿಗೆ ತಿಳಿಸುವುದಕ್ಕೋಸ್ಕರ ಪ್ರಧಾನ ದಂಡನಾಯಕನು ಕೂಡ ತನ್ನ ಶಿಬಿರವನ್ನು ಬಿಟ್ಟು ಸಭೆಗೆ ಬಂದಿದ್ದನು ಆದರೂ ಆತನು ಹೇಳಿದ ಆಲೋಚನೆಗಳೆಲ್ಲಕ್ಕೂ ಛೀಮಾರಿಗಳಿಗಿಂತಲೂ ಬೇರೆ ಬಹುಮಾನವಾವುದೂ ದೊರೆಯಲಿಲ್ಲ.

"ಸೇನಾಧಿಪನೇ! ಆ ದಿಕ್ಕು ದೆಸೆಯಿಲ್ಲದ ಅಲ್ಪವಾದ ದಿನಾಜ ಪುರವಿನ್ನೂ ಸ್ವಾಧೀನವಾಗಲಿಲ್ಲವೊ? ನೀನೇತಕ್ಕೂ ಕೆಲಸಕ್ಕೆ ಬಾರದವನು. ನಾನು ಹೇಳುವ ಕೆಲಸವನ್ನು ಮಾಡುವುದರಲ್ಲಿ ನೀನು ಬಹು ಮಾಂದ್ಯದಿಂದಿರುವೆ. ಯೆಲ್ಲೆಲ್ಲಿ ನೋಡಿದರೂ ನಿನ್ನ ಉಪೇಕ್ಷೆಯೇ ಇದಿರಿಗೆ ನಿಲ್ಲುತಿದೆ." ಎಂದು ಚಕ್ರವರ್ತಿಯು ಅತ್ಯಾಗ್ರಹದಿಂದ ನುಡಿದನು. ಸಭ್ಯರೆಲ್ಲರೂ ಪುರು

ಮಾತಾಡದೆ ಸುಮ್ಮನಿದ್ದರು. ಸ್ವಲ್ಪಹೊತ್ತು ಕಳೆದು ಸೇನಾನಾಯಕನು "ಸಾಮ್ರಾಜ್ಯ ಚಕ್ರವರ್ತಿಯೇ ! ಇನ್ನೆರಡು ದಿನಗಳ ವುಟ್ಟಿಗೆ ನಮ್ಮ ಸೇನೆಗಳನ್ನು ಅಲ್ಲಿ ನಿಲ್ಲಿಸಿದ್ದುದಾದರೆ ದಿನಾಜಪುರವನ್ನು ಸಾಧಿಸಿರುತಿದ್ದೆವು. ಆದರೆ ಅಷ್ಟರೊಳು ಅಲ್ಲಿಂದ ಸುವರ್ಣಗ್ರಾಮಕ್ಕೆ ಹೊರಡಬೇಕೆಂದು ಪ್ರಭುಗಳ ಅನುಜ್ಞೆಗಳಾದುದರಿಂದ ಅಲ್ಲಿಗೆ ಹೊರಡುವರಾದೆವು." ಎಂದು ಹೇಳಿದನು. ಅಷ್ಟರೊಳು ಅಜೀಂಖಾನನ ತಂದೆಯಾದ ವೃದ್ಧ ಮಂತ್ರಿಯು ಮೇಲಕ್ಕೆದ್ದು "ತಾವು ಯುವರಾಜನನ್ನಾಗಿ ಮಾಡಿದ ಷರೀಫುದ್ದೀನನು ಭುವನ ಗ್ರಾಮಕ್ಕೆ ಹೋಗುವ ದಾರಿಯಲ್ಲಿ ಗಯಜುದ್ದೀನನನ್ನು ಮುತ್ತಿಗೆಹಾಕಿ ಸೈನ್ಯಗಳು ಬರಬೇಕೆಂದು ಬರೆದನಾದರೂ"—

ಚಕ್ರವರ್ತಿ—"ಷರೀಫುದ್ದೀನನು ಸುಳ್ಳುಮಾತುಗಳನ್ನು ನಂಬಿಯೇ ಸಹೋದನೆಂಬುವುದು ನನ್ನ ನಂಬುಗೆಯು"

ಮಂತ್ರಿ—ಪ್ರಭುಚಕ್ರವರ್ತಿಯೆ! ಸ್ವಾಮಿಗೆ ತಿಳಿದ ಸಮಾಚಾರವು ಸರಿಯಾದುದಲ್ಲ. ಸಾಕಾದಷ್ಟು ಸೈನ್ಯಗಳಿಲ್ಲದುದರಿಂದ ನೀರಿನ ಮೇಲಾದರೂ, ನೆಲದ ಮೇಲಾದರೂ, ಭುವನ ಗ್ರಾಮವನ್ನು ಮುತ್ತುವುದು ದುಷ್ಕರವಾಯ್ತು. ಅಜೀಮುಖಾನನು ಒಂದುದಿನ ಮುಂಚಿತವಾಗಿ ಬಂದಿದ್ದುದಾದರೆ ನಿಶ್ಚಯವಾಗಿಯೂ ಗಯಜುದ್ದೀನನು ಸೆರೆಗೆ ಸಿಕ್ಕುತಿದ್ದನು.

ಪಾದುಷಾ— "ಅಜಿಮುಖಾನ್ ! ಏನಿದು ? ನೀನೊಂದುದಿನ ಮುಂಚಿತವಾಗಿ ಬಂದಿದ್ದರೆ ನಮಗೆ ಜಯವಾಗುತಿದ್ದಿತಂತೆ; ನೀನೇಕೆ ತಡಮಾಡಿದೆ ?"

ಅಜೀಮು—"ದೇವಾ ! ದಿನಾಜಪುರದಲ್ಲಿ ಗಣೇಶದೇವನೊಡನೆ ಕಾದುತಿದ್ದ ನಾನು ಭುವನ ಗ್ರಾಮಕ್ಕೆ ಹೋಗುವೆನೆಂತು ? ಷರೀಫುದ್ದೀನನನ್ನು ಕಲೆಯುವಂತೆ ಫರೀದುಷಾವಿಗೆ ಅಪ್ಪಣೆಯಾಗಿದ್ದಿತು."

ಪಾದುಷಾ—"ನಿನ್ನ ಸ್ಥಳದಲ್ಲಿ ನವಾಬು ಷಾನುದ್ದೀನನನ್ನು ಇರಿಸಿ ನೀನು ಕೂಡ ಷರೀಫುದ್ದೀನನನ್ನು ಕಲೆಯತಕ್ಕುದೆಂದು ಆಜ್ಞಾಪಿಸಿದೆನು."

ಅಜೀಮು— "ಆ ಅನುಜ್ಞೆಯು ತರುವಾಯದಲ್ಲಿ ಬಂದಿತು. ಅದು ಸೇರಿದ ತರುವಾಯ ಹೊರಟು ಸಮಯಕ್ಕೆ ಸರಿಯಾಗಿ ಭುವನ ಗ್ರಾಮಕ್ಕೆ ಸೇರಲವಕಾಶವಿಲ್ಲದವನಾದೆನು. ಮೊದಲು ಪೂರ್ಣಭಾಗಾನದಿಯ ಪ್ರವಾಹವು ಹೆಚ್ಚಿದುದರಿಂದ ಆಲಸ್ಯವಾಯ್ತು. ನಂತರ ಅತಿವೃಷ್ಟಿಯಿಂದಲೂ ದಾರಿಗಳು ಸರಿಯಾಗಿಲ್ಲದಿದ್ದುದರಿಂದಲೂ ಸ್ವಲ್ಪ ಆಲಸ್ಯವಾಯ್ತು. ಕೂಡಲೆ ಅಲ್ಲಿಗೆ ಹೋಗಿ ನೋಡುವಾಗ ಸಮಯವಿಾರಿದ್ದಿತು."

ಪಾದುಷಾ—"ಅಸಂಭವವು! ಸೇನಾಧಿಪತಿಯ ಬಾಯಿಂದ ಇಂತಹ ಸಮಾಧಾನಗಳನ್ನು ಎಂದೆಂದೂ ಕೇಳಿರಲಿಲ್ಲ. ನಿನಗೆ ಈ ಅಧಿಕಾರವನ್ನು ಕೊಟ್ಟ ನನ್ನ ತಪ್ಪು ಈಗ ನನಗೆ ಬೋಧೆಯಾಯ್ತು."

ಅಪರಮೇಲೆ ಸೇನಾಧಿಪನಿಗೆ ನ್ಯಾಯವಾದ ಕೋಪಬಂದಿತು. ಆದರೂ ಅದನ್ನು ಹೊರಪಡಿಸಲಾರದೆ ತಡೆದುಕೊಂಡನು. ಮಂತ್ರಿಮಾತ್ರ "ಗತಿಸಿದುದಕ್ಕೆ ಚಿಂತಿಸಿ ಫಲವಿಲ್ಲ. ನಾವು ಕಾಲವೆಲ್ಲವನ್ನೂ ವ್ಯರ್ಥಪಡಿಸುತಿರುವೆವು. ನಿಮಿಷ ನಿಮಿಷಕ್ಕೂ ಗಯಜುದ್ದೀನನ ಬಲವು ವೃದ್ಧಿಯಾಗುತಿವೆ. ಆತನನ್ನು ಜಾಗ್ರತೆಯಾಗಿ ಸೋಲಿಸದಿದ್ದರೆ ರಾಜ್ಯವನ್ನು ಕಾಪಾಡುವುದು ಕಷ್ಟವು. ದಿನಾಜಪುರದೊಡನೆ ಸಂಧಿಮಾಡಿಕೊಳಬೇಕೇ ಬೇಡವೇ? ಎಂಬ ಸಂಗತಿಯನ್ನು ಕೂಡಲೇ ನಿರ್ಣೈಸಬೇಕು." ಎಂದು ಹೇಳಿದನು. ಸಮಯಾನುಸಾರ ಸುಲ್ತಾನನು ಕೂಡ ಅಂಗೀಕರಿಸಬೇಕಾಯ್ತು. ಕೊನೆಗೆ ಇಷ್ಟವಿಲ್ಲದಿದ್ದರೂ ಅಂಗೀಕರಿಸಿ ಮಂತ್ರಿಯೊಡನೆ "ಸರಿಯೆ; ಸಂಧಿಯನ್ನು ಕುರಿತು ಪ್ರಯತ್ನಿಸಬಹುದಾದರೂ ಆತನು ಅಂಗೀಕರಿಸದೆ ನಮಗೆ ಅಗೌರವ ಉಂಟಾಗದಂತೆ ಮಾತ್ರ ಎಚ್ಚರಗೊಳಬೇಕು." ಅಂದನು. ಅಜೀಂಖಾನನು ಗಣೇಶದೇವನ ಅಭಿಪ್ರಾಯವನ್ನು ಮೊದಲೇ ತಿಳಿದಿರುವನು. ಈ ವಿವಾದಕ್ಕೆ ಯೋಗಿನಿಯು ಕಾರಣವಾದುದರಿಂದ ಆಕೆಯನ್ನು ಯಾವ ಬಗೆಯಿಂದಲೂ ಶಿಕ್ಷಿಸದಿರುವಂತೆಯೂ, ತಾನು ಯುದ್ಧಕ್ಕೆ ವೆಚ್ಚಮಾಡಿದ ದ್ರವ್ಯಕ್ಕೆ ಬದುಲಾಗಿ ತಾನು ಕೊಡಬೇಕಾದ ಕಪ್ಪವನ್ನು ಕೊಡದಿರುವಂತೆಯೂ, ಅಂಗೀಕರಿಸಿದುದಾದರೆ ಗಣೇಶದೇವನು ಸಂಧಿಗೆ ಅಂಗೀಕರಿಸುವನು. ಪಾದು

ಷಾಹನು ಈ ಒಡಂಬಡಿಕೆಗಳಿಗೆ ಅಂಗೀಕರಿಸಿ,ಮರುದಿನ ವೊಡಂಬಡಿಕೆಗಳಮೇಲೆ ಕೈಬರಹಗಳನ್ನು ಹಾಕುವುದಕ್ಕೆ ದಿನಾಜಪುರದ ಮಹಾರಾಜನು ಆ ದರ್ಬಾರಿಗೆ ಬರುವಂತೆ ಏರ್ಪಾಡುಮಾಡಲ್ಪಟ್ಟಿತು. ವಿಶ್ವಾಸ ಘಾತುಕವಿಲ್ಲದಂತೆ ತನ್ನ ಮುಮ್ಮಗನಾದ ಸಾಹೇಬುದ್ದೀನನನ್ನೂ, ತತ್ಪರಿವಾರವನ್ನೂ, ದಿನಾಜಪುರದ ಶಿಬಿರದಲ್ಲಿ ಒತ್ತೆ ಇಡುವುದಕ್ಕೂ ಸುಲ್ತಾನನು ಒಪ್ಪಿಕೊಂಡನು.



## ಪ್ರಕರಣ ೨೪.

ಗಣೇಶದೇವನು ಅದೇ ಪ್ರಕಾರ ಓಲಗಕ್ಕೆ ಬಂದನು. ಆ ರಾಜಕುಮಾರನನ್ನು ಸ್ನೇಹಿತನಂತೆ ಕರೆಸಲ್ಪಟ್ಟಿತೇವಿನಾ ಆತನನ್ನು ಸತ್ಕರಿಸುವಿಕೆಯಲ್ಲಿ ಮಾತ್ರ ಆಲಕ್ಷಣಗಳೊಂದೂ ಕಾಣಲಿಲ್ಲ. ಆತನಿಗೊಂದು ಉಚಿತಾಸನವನ್ನಾದರೂ ಮರಿಯಾದೆ ಮಾಡಲಿಲ್ಲ.

ಗಣೇಶದೇವನು ಆ ದೇಶದ ಪ್ರಸಿದ್ಧವಾದ ದೊಡ್ಡವಂಶದಲ್ಲಿ ಜನಿಸಿದವನಾದುದರಿಂದ ಆತನ ಮುಖ ವೈಖರಿಯೂ, ಲಕ್ಷಣಗಳೂ, ಆಭಿಜಾತ್ಯವೂ ನಿಭಳಯುವನ್ನು ಸೂಚಿಸುತ ಆ ಸಭ್ಯರೆಲ್ಲರಿಗಿಂತಲೂ ಅಧಿಕತಮವಾಗಿ ಕಾಣುತಿದ್ದಿತು. ಇದನ್ನು ನೋಡಿ ಸುಲ್ತಾನನಿಗೆ ಮನಸಿನಲ್ಲಿ ಅಸೂಯೆ ಹುಟ್ಟಿತು. ಗಣೇಶದೇವನು ಸುಲ್ತಾನನಿಗೆ ಸಲಾಂ ಮಾಡಿದನಾದರೂ, ಅದರಿಂದ ವಿಧೇಯತೆಯು ಲೇಶಮಾತ್ರವಾದರೂ ಕಾಣಲಿಲ್ಲ. ಈ ಪೋರನನ್ನು ಇಷ್ಟರಮಟ್ಟಿಗೆ ತಗ್ಗಿಸಲಾರದೆ ಹೋದೆನಲ್ಲಾ; ಎಂದು ಸುಲ್ತಾನನಿಗೆ ಅಸೂಯೆ ಯೊಡಗೂಡಿದ ತಿರಸ್ಕಾರವೂ, ಅನಾದರವೂ, ಕಾಣುವಂತಿರುವ ಸುಲ್ತಾನನ ನಡತೆಯನ್ನು ನೋಡಿ, ಸಭೆಯೆಲ್ಲವೂ ಆಶ್ಚರ್ಯಮಗ್ನವಾಗಿ ಮೌನಮುದ್ರೆಯಿಂದಿದ್ದಿತು. ಕೊನೆಗೆ ಚಕ್ರವರ್ತಿಯು, ಗಣೇಶದೇವನೊಡನೆ "ಗಣೇಶದೇವಾ! ನಿನಗೇನುಬೇಕು?" ಎಂದು ವಿಕಟವಾಗಿ ಕೇಳಿದನು.ಗಣೇಶದೇವನು ಮುಂದೆ ಬರತಕ್ಕುವುಗಳನ್ನು, ಲಕ್ಷಣಗಳನ್ನು ನೋಡಿ ಗ್ರಹಿಸಿರತಕ್ಕವನಾದುದರಿಂದ ನೆಮ್ಮದಿಯಿಂದಲೂ, ಗೌರವದಿಂದ

ಲೂ, ಹೀಗೆ ಬದುಲು ಹೇಳಿದನು. "ನನಗೆ ಬರತಕ್ಕುದೇನೊ ಇದುವರೆಗೆ ಹೇಳಿಯೇ ಇರುವೆನು. ತಾವು ಅದಕ್ಕೆ ಅಂಗೀಕರಿಸಿರುವಿರಾದುದರಿಂದ ವೊಡಂಬಡಿಕೆಯಮೇಲೆ ಕೈಬರಹ ಮಾಡುವುದಕ್ಕೆ ಯಿಲ್ಲಿಗೆ ಬಂದಿರುವೆನು. ಅದನ್ನು ಯೀಗ ಹೊಸತಾಗಿ ಕೇಳಲಿಚ್ಛೈಸುವಿರಾದರೆ ಹಾಗೆಯೇ ಬಿನ್ನೈಸುವೆನು. ಯೋಗಿನಿಯನ್ನು ಬಿಟ್ಟುಕೊಡುವಿಕೆಯೂ, ನನಗುಂಟಾದ ನಷ್ಟಕ್ಕೋಸ್ಕರ ದಿನಾಜಪುರದ ಮೇಲಣ ಕಪ್ಪವನ್ನು ಉತ್ತಾರಕೊಡುವಿಕೆಯೂ, ನನಗೆ ಬೇಕಾದುದು."

ಸುಲ್ತಾನನು "ಹುಬ್ಬುಗಂಟಿಕ್ಕಿ ಹಾಗಾದರೆ ನೀನು ನಮಗೆದುರು ಬಿದ್ದುದರಿಂದುಂಟಾದ ನಮ್ಮ ನಷ್ಟವು ತೀರುವಬಗೆಯಾವುದು?"

ಗಣೇ "ನಾನು ತಮ್ಮ ಪಕ್ಷದಲ್ಲಿ ನಿಂತು ಯುದ್ಧ ಮಾಡುವುದರಿಂದ ತೀರುವುದು."

ಪಾದುಷಾ "ಅದು ನನಗೆ ಇಷ್ಟವಾದರೂ, ಆಗದಿದ್ದರೂ, ಕೂಡ ಸಾಮಂತರಾಯನು ಮಾಡಬೇಕಾದ ವಿಧಾಯಕ ಕೃತ್ಯವೇ. ನನ್ನ ಶತ್ರುವಿನೊಡನೆ ಕಾಳಗಕ್ಕೆ ಸಹಾಯಕನಾಗದಿದ್ದರೆ ಶೀಕ್ಷಾಪಾತ್ರನಾಗುವೆ. ನೀನು ತಿರುಗಿ ಬಿದ್ದುದಕ್ಕೆ ದಂಡನೆ ಯೇನು?"

ಗಣೇ "ಅದು ನಾನು ಇಲ್ಲಿಗೆ ಬರುವುದಕ್ಕೆ ಮೊದಲೇ ನಿಶ್ಚೈಸಬೇಕಾಗಿದ್ದುದು, ನಿನ್ನ ವಿಶ್ವಾಸವನ್ನು ನಂಬಿಸಿ ನನ್ನನ್ನು ಇಲ್ಲಿಗೆ ಕರೆಯಿಸಿದೆ. ಈಗ ನನ್ನನ್ನು ಶಿಕ್ಷಿಸಲೆಣಿಸುವುದು ವಿಶ್ವಾಸ ಘಾತುಕವು."

ಪಾದುಷಾ "ಮೋಸಕ್ಕೆ ಮೋಸಮಾಡುವುದು ವಿಶ್ವಾಸ ಘಾತುಕವಲ್ಲ, ದೇಶದಲ್ಲಿ ಶಾಂತಿ ಸ್ಥಾಪನೆಮಾಡುವುದಕ್ಕೆ ಬೇರೆ ಸಾಧನವಿಲ್ಲ. ಅಜೀಮುಖರ್ಜಿ! ಇವನನ್ನು ಬಂಧಿಸಿರಿ."

ಸುಲ್ತಾನನು ಹೀಗೆ ಬುದ್ಧಿ ಹೀನನಾಗುವನೆಂದು ಯಾರೂ ನಂಬಿರಲಿಲ್ಲ. ಅಜೀಮುಖಾನನು ಕದಲಿ ಮೊದಲದೆ ಸ್ತಂಭೀ ಭೂತನಾಗಿ ನಿಂತಿದ್ದು ಆಶ್ಚರ್ಯದಿಂದ ಚಕ್ರವರ್ತ್ತಿಯನ್ನು ನೋಡುತಿದ್ದನು. ಸುಲ್ತಾನನ ಮಾತನ್ನು ನಂಬಿ ಗಣೇಶದೇವನೊಡನೆ ಮಾತಾಡಿ ವೋಲಗಕ್ಕೆ ಕರತಂಡವನಾತನೇ!

ಆತನೇ ಈ ದ್ರೋಹಕೃತ್ಯಕ್ಕೆ ಸಿದ್ಧನಾಗಬೇಕಾಯ್ತು. ಈ ಅನ್ಯಾಯವು ಆತನಿಗೆಷ್ಟುಮಟ್ಟಿಗೂ ಸಮಾಧಾನವಾಗಿರಲಿಲ್ಲ. ಮೌನದಿಂದಿರಲಾರದೆ "ತಮ್ಮ ಆಜ್ಞಾ ಗೌರವವನ್ನು ನಂಬಿ ಈ ಮಹಾರಾಜನಿಲ್ಲಿಗೆ ಬಂದಿರುವನು. ಈ ನಂಬುಗೆಯು ಕೆಟ್ಟುದಾದರೆ ಚಕ್ರವರ್ತಿಯ ಕೀರ್ತಿಗೆ ಕಳಂಕ ಉಂಟಾಗುವುದೂ ಅಲ್ಲದೆ ಇನ್ನು ಮುಂದೆಯೂ ಚಕ್ರವರ್ತಿಯನ್ನು ಯಾರೂ ನಂಬಲಾರರು."

ಪಾದುಷಾ "ಸುಮ್ಮನಿರು. ಗಳಹಬೇಡ. ನೀನು ಇತ್ತಲೆಯವನಾಗಿರುವೆ. ಕರೀಮುದ್ದೀನ್! ಇಂದಿನಿಂದ ಸೇನಾಧಿಪತಿತ್ವವನ್ನು ನಿನಗೆ ಕೊಟ್ಟಿರುವೆನು. ಈ ಇತ್ತಲೆಯವನಾದ ಅಜೀಮನನ್ನೂ, ಈ ದ್ರೋಹಿಯಾದ ಗಣೇಶನನ್ನೂ ಬಂಧಿಸು. ಇವರನ್ನಿದುವರೆಗೆ ಬಹುಕಾಲದ ಹಿಂದೆಯೇ ಈ ತೆರನಾಗಿ ಶಿಕ್ಷಿಸ ಬೇಕಾಗಿದ್ದಿತು."

ಹೊಸತಾಗಿ ನಿಯಮಿಸಲ್ಪಟ್ಟ ಸೇನಾನಿಯು "ದೇವನೇ! ದಿನಾಜಪುರಾಧಿನಾಥನ ಅನುಚರರು ದ್ವಾರದಲ್ಲಿರುವರು. ಅವರನ್ನೇನು ಮಾಡಬೇಕೆಂದಾಜ್ಞೆ."

ಪಾದುಷಾ "ಅವರನ್ನು ಕೂಡ ಬಂಧಿಸು." ಚಕ್ರವರ್ತಿಯ ಅಜ್ಞಾಬದ್ಧನಾಗಿ ವಿಧೇಯತೆಯಿಂದ ಕರೀಮುದ್ದೀನನು ಗಣೇಶದೇವನನ್ನೂ ಅಜೀಮುಖಾನನನ್ನೂ ಸೆರೆಮನೆಗೊಯ್ದನು. ಪ್ರಧಾನ ಮಂತ್ರಿಯು ಇದನ್ನು ನೋಡಿ ತಲೆಯನ್ನು ಚಚ್ಚಿಕೊಳುತ "ಸುಲ್ತಾನರೇ! ಸುಲ್ತಾನರೇ! ಏನ ಮಾಡಿದಿರಿ? ಇನ್ನು ಸ್ವಸಂರಕ್ಷಣೆಗೆ ಸಾಧನವಿಲ್ಲದಂತೆ ಮಾಡಿರುವಿರಿ. ಸೇನಾನಾಯಕನನ್ನು ನಿಷ್ಕಾರಣವಾಗಿ ಬಂಧಿಸಿದಿರಿ."

ಪಾದುಷಾ "ನಿಷ್ಕಾರಣವಾಗಿಯೇ? ಆತನು ನಿನ್ನ ಮಗನೆಂದು ತಿಳಿದು ಇದುವರೆಗೆ ಅಧಿಕಾರದಲ್ಲಿಟ್ಟೆನು. ಇವೆಲ್ಲಕ್ಕೂ ಈತನೇ ಕಾರಣವೆಂದು ಈಗ ಗೊತ್ತಾಯ್ತು."

ಮಂತ್ರಿ "ಸಾರ್ವಭೌಮ! ದಿನಾಜಪುರಾಧಿನಾಥನು ಕೂಡ ಬಂಧಿ

ಸಲ್ಪಟ್ಟನಾದುದರಿಂದ ಯೆರಡು ಬಲಗಳೊಂದಿಗೂ ಯುದ್ಧವು ತಪ್ಪದು: ಏನು ನಡೆಯುವುದಕ್ಕಿರುವುದೋ: ಭಗವಂತನಿಗೆ ಅರಿಕೆ. ''

ಚಕ್ರವರ್ತಿ ''ನಿನಗೂ ಬುದ್ಧಿ ಗೆಟ್ಟಂತಿದೆ; ನಿನ್ನ ವಿವೇಕವೇನಾಯ್ತು? ನಾನು ಗಣೇಶನನ್ನು ಬಂಧಿಸಿದ ನಂತರ ಯುದ್ಧ ಮಾಡುವರಾರಿನ್ನು ? ''

ಮಂತ್ರಿ '' ಆತನ ಸೈನ್ಯವು. ಆತನನ್ನು ಸೆರೆಹಿಡಿದ ಸಂಗತಿಯು ಆತನ ತಾಯ್ಗೆ ತಿಳಿದರೆ ಆಕೆಯು ಸುಮ್ಮನಿರುವಳೆಂದುಕೊಂಡಿರಾ ಏನು? ಆತನ ರಾಜ್ಯದಲ್ಲಿ ಶಕ್ತಿಯುಳ್ಳ ಪುರುಷನೊಬ್ಬನೇ ವೊಬ್ಬನಿದ್ದರೂ, ಆತನು ಆತನ ರಾಯನಿಗೋಸ್ಕರ ಹೋರಾಡಿ ಮುಗಿಯುವನು. ''

ಪಾದುಷಾ '' ಗಣೇಶನನ್ನು ಕೊಂದುಬಿಟ್ಟರೆ ? ''

ಮಂತ್ರಿ '' ಸಾಹೆಬುದ್ದೀನನನ್ನು ಶತ್ರು ಶಿಬಿರದಲ್ಲಿ ವೊತ್ತೆ ಇಟ್ಟಿರುವ ಸಂಗತಿಯನ್ನು ಆಳುವ ಮಹಾಸ್ವಾಮಿಯು ಮರೆತಿರಬಹುದು. ಮಹಾರಾಜನನ್ನು ಬಂಧಿಸಿದ ವಾರ್ತೆಯು ಹೊರಬಿದ್ದಕೂಡಲೆ ಸಾಹೆಬುದ್ದೀನನ ಪ್ರಾಣಗಳಿಗೆ ಹಾನಿ ಯುಂಟಾಗುವುದು. ''

ಚಕ್ರವರ್ತಿ '' ಗಣೇಶನೊಡನೆ ಬಂದ ಮೈಗಾವಲಿನ ಭಟರು ಕೂಡ ಬಂಧಿಸಲ್ಪಟ್ಟರಾದುದರಿಂದ ಈ ವಾರ್ತೆಯು ಶಿಬಿರಕ್ಕೆ ಅಷ್ಟು ಬೇಗನೆ ತಿಳಿಯಲಾರದು. ಆದುದರಿಂದ ಜಾಗ್ರತೆಯಾಗಿ ಸಾಹೆಬುದ್ದೀನನನ್ನು ಬಿಡಿಸುವುದಕ್ಕೆ ಉಪಾಯವನ್ನು ಹುಡುಕು. ''

ಮಂತ್ರಿಯು ನಿರಾಶೆಯಿಂದ '' ಒಡೆಯನೇ ! ನನ್ನ ಮಾತನ್ನು ಕೇಳುವರಾರು? ವಯಸಿನಿಂದಲೂ, ಅನುಭವದಿಂದಲೂ, ವೃದ್ಧನಾದ ನನ್ನ ಮಾತನ್ನು ಸ್ವಲ್ಪ ಲಾಲಿಸಿರಿ. ಅಜೀಮುಖಾನನನ್ನು ಬಿಡಿಸಿ ದಿನಾಜಪುರದೊಡನೆ ಸಂಧಿಯನ್ನು ಸಮನಿಸಿರಿ. ಅದಿಲ್ಲದಿದ್ದರೆ ನಾವು ಹಾಳಾಗುವೆವು. ತಮ್ಮನ್ನು ಸೈತಾನು ಆವರಿಸಿದಂತಿದೆ. ''

ಪಾದುಷಾ '' ನೀನೇ ನನಗೆ ಸೈತಾನನು. ನಿನ್ನ ಮಗನಾದ ಕುತುಬನು ಗಯಜುದ್ದೀನನಿಗೆ ಉಪದೇಶಕನೆಂಬುದು ನೀನು ಬಲ್ಲೆಯಾ? ಅದರ ದೆಸೆಯಿಂದಲೆ ಈ ಕಷ್ಟಗಳೆಲ್ಲವೂ ಬಂದೊದಗಿದುವು. ''

ಮಂತ್ರಿ "ಆದುದರಿಂದಲೇ ನಾನು ಅವನನ್ನು ತೊರೆದೆನು."

ಪಾದುಷಾ "ಅದರಿಂದ ನನಗಾದ ಲಾಭವೇನು? ಅಜೀಮಖಾನನು ಕೂಡ ಗಯಾಜುದ್ದೀನನೊಡನೆ ನನ್ನ ವಿನಾಶಕ್ಕೋಸ್ಕರ ತಂತ್ರಗಳನ್ನು ನಡೆಸುವನೆಂಬುದು ನನ್ನ ನಂಬುಗೆಯು. ಹಾಗಿಲ್ಲದಿದ್ದರೆ ಇದುವರೆಗೂ ಶತ್ರುಗಳು ಕೈವಶವಾಗದಿರುವುದಕ್ಕೆ ಕಾರಣವೇನೋ ಹೇಳಬಲ್ಲೆಯಾ?" ಈಮಾತುಗಳು ಆ ಮುದಿ ಮಂತ್ರಿಗೆ ಬಹು ಕಷ್ಟತರವಾಗಿದ್ದಿತು. ಆತನ ಮೈಯುರಿಯೆದ್ದು ಸ್ಥೈರಣೆಗೆಟ್ಟು "ಎಷ್ಟು ನಾಚುಗೆ! ಎಷ್ಟು ನಾಚುಗೆ! ಒಡೆಯನೇ! ಇಂತಹ ಅನುಮಾನವು ಚಕ್ರವರ್ತಿಗೆ ತಕ್ಕುದಲ್ಲ. ಇನ್ನು ಸ್ವಲ್ಪ ಹೊತ್ತಿಗೆ ನನ್ನನ್ನು ಕೂಡ ಗಯಾಜುದ್ದೀನನ ಪಕ್ಷದವನೆಂದು ಹೇಳುವಿರಾದೀತು." ಅಂದನು. ಸುಲ್ತಾನ್ ಸಿಕಂದರುಷಾಹನು, ಮತಿಭ್ರಮೆಯಿಂದ ಲೇಶಮಾತ್ರವೂ ಅನುಮಾನಿಸದೆ "ಅಹುದು. ನನಗೆ ಆ ಅನುಮಾನ ಕೂಡವುಂಟು. ಅದಿಲ್ಲದಿದ್ದರೆ ನಿನ್ನ ನಿರಪರಾಧಿತ್ವವನ್ನು ನಿರೂಪಿಸಿ ಕೊಳುವುದಕ್ಕೋಸ್ಕರ ಇಷ್ಟು ಹಾರಾಟವೇತಕೆ?" ಅಷ್ಟು ವರುಷಗಳಿಂದ ಅಪ್ರತಿಮಾನವಾದ ಪ್ರಭು ಭಕ್ತಿಯುತನಾಗಿ ಉದ್ಯೋಗಮಾಡುತ ವಯಸ್ಸು ಕಳೆದು ನಿರ್ಲಿಪ್ತನಾಗಿ ಯತಿಯಂತಿದ್ದ, ಆ ವೃದ್ಧನಿಗೆ ಈ ಕಠೋರವಾಕ್ಯಗಳೆಂತಹ ಹೃದಯಶಲ್ಯಗಳಾದುವೋ ಹೇಳಲಗತ್ಯವಿಲ್ಲ. ಸ್ವಲ್ಪ ಹೊತ್ತಿನವರೆಗೆ ಆತನು ಕೋಪಾತುರಗಳಿಂದ ಸ್ತಬ್ಧನಾಗಿದ್ದು, ಕೂಡಲೆ ಸ್ಥಿಮಿತನಾಗಿ.

"ಸಿಕಂದರು ಚಕ್ರವರ್ತಿಯೆ! ಭಗವಂತನು ನಿಮಗೆ ವಿರೋಧಿಯಾಗಿರಬಹುದು. ಇಲ್ಲದಿದ್ದರೆ ತಾವು ಈತೆರನ ತಪ್ಪು ದಾರಿಯಲ್ಲಿ ಹೆಜ್ಜೆಯೂರಲು ಕಾರಣವಿಲ್ಲ. ಈಗಲೇ ನನ್ನ ಉದ್ಯೋಗಕ್ಕೆ ರಾಜೀನಾಮೆಯನ್ನೊಪ್ಪಿಸಿದೆನು. ನನ್ನ ಕೊನೆಯ ಮಾತುಗಳನ್ನಾಲಿಸಿ. ನೀವು ಹೋಗುವದಾರಿಯು ನಾಶನಕ್ಕೆ ಹೇತುವಾಗಿದೆ. ಸಮಯ ಮೀರುವುದಕ್ಕೆ ಮುಂಚಿತವಾಗಿಯೇ ಹಿಂದಿರುಗುವುದೊಳ್ಳೆಯದು."

ಸಭಿಕರೆಲ್ಲರೂ ಸುಲ್ತಾನನ ಪ್ರವರ್ತನೆಯನ್ನು ಕುರಿತು ಆಶ್ಚರ್ಯ ಚಕಿತರಾಗಿ ಸ್ತಂಭೀಭೂತರಾದರು. ಹೊರಟು ಹೋಗುತಿದ್ದ ಮಂತ್ರಿಯನ್ನು

ಕಣ್ಣು ಸನ್ನೆಯಿಂದಳಿಸಿದರೂ ಸಮಾಧಾನ ಪಡಿಸದಾದರು. ಅಲ್ಲಿರುವವರೆಲ್ಲರೂ ತಮ್ಮ ಅತೃಪ್ತಿಯನ್ನು ತೋರ್ಪಡಿಸಿದರು. ಇದೆಲ್ಲವನ್ನೂ ನೋಡಿಯು ಕೂಡ ಸಿಕಂದರನು ತನ್ನ ಧೋರಣೆಯನ್ನು ಬದುಲಾಗಿಸಲಿಲ್ಲ. ಸದಸ್ಯರು ನಿರುತ್ಸಾಹಿಗಳಾಗಿ ಅಂದಿಗೆ ಸಭೆಯನು ಮುಗಿಸಿ ಮರಳಿ ಮರು ದಿವಸ ಸಭೆ ಸೇರಿದರು.

ಆ ರಾತ್ರಿಯೆಲ್ಲವೂ ಮಳೆಯು ಸುರಿಯುತಿದ್ದಿತು. ಸುಲ್ತಾನನ ಸಭೆಯಂತೆಯೇ ಹೊರಗೂ ವೊಳಗೂ ವಿಕಾಸವಿಲ್ಲದಿದ್ದತು. ಅಷ್ಟರೊಳು ಕುದುರದೆ ಸಿಡಿಲು ಬಿದ್ದಂತೆ ವೊಬ್ಬ ಮನುಷ್ಯನು ಗಾಬರಿಗೊಂಡು ಬಂದು ಅತ್ಯಾತುರದಿಂದ ಪ್ರವೇಶಿಸಿ “ ದೇವನೇ ! ಗಯಜುದ್ದೀನನು ಬರುತಿದಾನೆ. ನವಾಬು ಜಲಾಲುದ್ದೀನನು ಆತನನ್ನು ತಡೆಯಲಾರದಾದನು. ಶತ್ರುಗಳು ನಮ್ಮಮೇಲೆ ಬೀಳುತಿದಾರೆ ” ಅಂದನು.

ಸುಲ್ತಾನನ ಮನಸ್ಸು ಕಳವಳಗೊಂಡು ಖಿನ್ನನಾಗಿ ಗದ್ಗದಸ್ವರದಿಂದ “ ಅಜೀಂಖಾನ್ ! ಅಜೀಂಖಾನ್ ! ಎಂದು ಗಟ್ಟಿಯಾಗಿ ಕೂಗಿಕೊಂಡನು ” ಆತನು ಸೆರೆಯಲ್ಲಿರುವನೆಂದು ಕರೀಮುದ್ದೀನನು ಬದುಲು ಹೇಳಿದನು.

ಸುಲ್ತಾನನ ಕಣ್ಗಳು ಕೆಂಡಗಳಂತಾದುವು. ಅಂತಹ ಕಣ್ಗಳಿಂದ ನೋಡಿ “ ನಿನ್ನ ಸೈನ್ಯದೊಡನೆ ಹೋಗಿ ಜಲಾಲುದ್ದೀನನಿಗೆ ಸಹಾಯ ಮಾಡು. ಅಜೀಮು ಖಾನನನ್ನು ಸೆರೆಯಿಂದ ಬಿಡಿಸುವಂತೆ ಹೇಳಿ ಅವನನ್ನು ಇಲ್ಲಿಗೆಕಳುಹು. ”

ಕರೀಮನು. “ ನಿಷ್ಕ್ರಮಿಸಿ ಮರಳಿ ಬಂದು, ನಮಗಿರುವ ಸ್ವಲ್ಪ ಸೈನ್ಯವನ್ನು ಜೊತೆಗೂಳಿಸುತಿರುವೆನು. ಆಜ್ಞೆಯಾದರೆ ಅದರೊಡನೆ ಯುದ್ಧರಂಗಕ್ಕೆ ಹೊರಡುವೆನು ” ಅಂದನು.

ಪಾದುಷಾ— “ ಅಜೀಮುಖಾನನೆಲ್ಲಿ ? ”
ಕರೀಂ— “ ಓಡಿಹೋದನು. ”
ಪಾದುಷಾ— “ ಓಡಿಹೋದನೇ ? ”

ಕರೀಂ— “ ಚಿತ್ತ ”
ಪಾದುಷಾ— “ ಎಲ್ಲಿಗೆ ? ”

ಕರೀಂ “ ಗಯಜುದ್ದೀನನನ್ನು ಸೇರುವುದಕ್ಕೆಂದು ತಿಳಿದಿರುವುದು. ” ದುಷಾ ಅವರ ನಿಜಸ್ಥಿತಿಯನ್ನು ಗ್ರಹಿಸಲಾರದವನಾದನು. ತಾನಿರುವ ರಿ, ಪ್ರಜೆಗಳು, ಯೆಲ್ಲವೂ ಹೊಡೆದುಕೊಂಡು ಹೋಗುತಿರುವಂತೆ ಕಾಣು ತು. ಹೀಗಿದ್ದು, “ ಗಣೇಶದೇವನನ್ನು ಕರೆದುಕೊಂಡು ಬನ್ನಿರಿ. ” ದು ಕೂಗು ಹಾಕಿದನು. ಕರೀಮನು “ ಅವನೂ ವೋಡಿ ಹೋದನು. ” ದುಷಾ ! “ ಅವನೂ ಹೋದನೇ ? ಅಯ್ಯೋ ! ಮಂತ್ರಿ ! ಮಂತ್ರಿ ! ಎಮಾಡೋಣ ? ”

ಕರೀಂ “ ಮಂತ್ರಿಯೂ ಹೊರಟು ಹೋದನು. ಆತನು ಕೂಡ ಗಯಾ ದ್ದೀನನನ್ನು ಸೇರಿಕೊಂಡಂತೆ ಕೇಳಿದೆನು. ”

ಇದರೊಂದಿಗೆ ಸುಲ್ತಾನನ ಅವಸ್ಥೆಯೆಲ್ಲವೂ ಮುಗಿಯಿತಾದರೂ ನ್ನು ಆತನಿಗೆ ಧೈರ್ಯವು ಕುಂದಲಿಲ್ಲ. ಬುದ್ಧಿಗೆಟ್ಟವನಂತೆ ಮೇಲಕ್ಕೆದ್ದು ಎಲ್ಲರೂ ಬಿಟ್ಟುಬಿಟ್ಟು ಹೊರಟು ಹೋದರಲ್ಲವೆ ? ಸರಿಯೆ ! ನಾನೇ ನ್ನ ಸೈನ್ಯವನ್ನು ನಡೆಸುವೆನು. ” ಚಕ್ರವರ್ತಿಯು ಈ ಮಾತುಗಳನ್ನು ಳುತಲೆ ಸಭಿಕರೆಲ್ಲರೂ ಉತ್ಸಾಹ ಪೂರಿತರಾಗಿ ಮೈಯುಬ್ಬಿ ಮೇಲಕ್ಕೆ ು. ರಾಜನು ದಿಕ್ಕಿಲ್ಲದವನಾಗಿದ್ದುದರಿಂದ ಅವರೆಲ್ಲರಿಗೂ ವೊಂದು ಬಗೆ ದ ಅಭಿಮಾನವು ಆವಿರ್ಭವಿಸಿ ಯೆಲ್ಲರೂ ವೊಂದಾಗಿ ಯೆದು · “ ಪಾದು ಹಕೀ ಜೈ ” ಎಂದು ಕೂಗಿಟ್ಟರು.

ಕೂಡಲೆ ಬೇಕಾದ ಸನ್ನಾಹಗಳೆಲ್ಲವೂ ನಡೆದುವು. ವೊಂದೇ ಒಂದು ಟೆಯೊಳಗಾಗಿ ಸಮಸ್ತವೂ ಸಂಸಿದ್ಧವಾಯ್ತು. ಸುಲ್ತಾನನು ಸ್ವಯ ಗಿ ನಡೆಸಲು ಸೈನ್ಯವೆಲ್ಲವೂ ಹೊರ ಹೊರಟಿತು. ಆ ಮರುದಿನದ ವಲು ಮೂರು ದಿನಗಳವರೆಗೆ ತಂದೆ ಮಕ್ಕಳಿಬ್ಬರಿಗೂ ಯುದ್ಧವು ನಡೆ ತು. ಈ ಯುದ್ಧದ ಪರ್ಯವಸಾನವು ವಂಗದೇಶ ಚರಿತ್ರೆಯನ್ನು ಬಲ್ಲವ

ರೆಲ್ಲರಿಗೂ ತಿಳಿದೇ ಇರುವುದು. ದೇಶಚರಿತ್ರೆಗಳಲ್ಲಿ ಬರೆಯಲ್ಪಟ್ಟಿದೆ. ಮೂರನೆಯದಿನ ಸಿಕಂದರುಷಾ ಮೃತನಾದನು. ಅವನ ಶರೀರವು ಚಿರಕಾಲದ ಕೆಳಗೆ ನಿರ್ಮಿಸಲ್ಪಟ್ಟಿದ್ದ "ಅದೀನಾಮಸ್ಜಿದ" ಯೆಂಬಲ್ಲಿ ಭೂಸ್ಥಾಪನೆಯಾಯ್ತು. ಆತನ ಕುಮಾರನಾದ ಗಯಜುದ್ದೀನನು ಸಿಂಹಾಸನಕ್ಕೆ ಬಂದನು.

---

## ಪ್ರಕರಣ ೨೫

ಗಣೇಶದೇವನು ಪಾಂಡುವಾನಗರ ಸಮೀಪದ ಹರಿವಂಶಪುರದ ಪಕ್ಕದಲ್ಲಿ ತನ್ನ ಗುಡಾರವನ್ನು ನಿರ್ಮಿಸಿಕೊಂಡಿದ್ದನು. ಅದರ ಕೆಳಭಾಗದಲ್ಲೊಂದು ಕೆರೆಯುಂಟು. ಈ ಕೆರೆಯನ್ನು ಕುರಿತು ವೊಂದು ಗಾದೆಯನ್ನು ಹೇಳುವರು. ಅದೊಂದಾಶ್ಚರ್ಯವಲ್ಲ. ಕವಿ ನಿಲಯವಾದ ನಮ್ಮ ದೇಶದಲ್ಲಿ ಪ್ರತಿ ವೃಕ್ಷಕ್ಕೂ, ಹುತ್ತಕ್ಕೂ, ಪ್ರತಿ ಶಿಲೆಗೂ, ಕೂಡ ಯಾವುದಾದರೊಂದು ಸಹಜವಾದ ಗಾದೆ ಇರುವುದೆ! ಅಂತಹ ಸಂಭವದಲ್ಲಿ ಈ ಸ್ವಾದೋದಕದ ಕೆರೆಗೆ ಮಾತ್ರ ಅದೇಕೆ ತಾನೆ ಇಲ್ಲದಿರಬೇಕು? ಅಪ್ರತಿಮಾನ ಧೀಶಾಲಿಗಳಾದ ಆರ್ಯಾವರ್ತ ದೇಶಸ್ಥರಿಗೆ ಪ್ರತಿವೊಂದು ಅಲ್ಪಕಾರ್ಯದಲ್ಲಿಯೂ ಯಾವುದಾದರೊಂದು ವಿಶೇಷವು ತೋರುವುದು ಸಹಜವು. ಕೇವಲ ಭೌತಿಕ ವಿಶೇಷಮಾತ್ರದಿಂದಲೇ, ತೃಪ್ತರಾಗುವುದು ಅವರ ಗೌರವಕ್ಕೆ ತಕ್ಕುದಲ್ಲ. ಅಮುದರಿಂದ ಇಲ್ಲಿರುವ ಸ್ವಾದೋದಕ ಸರೋವರ ದೊಳಗಿನ ನಿರ್ಮಲೋದಕ ಪಾನಮಾಡಿ ದಾಹಶಾಂತಿ ಮಾಡಿಕೊಂಡರೆ ಅದರಲ್ಲೊಂದು ವಿಶೇಷವಿದ್ದಿರಬೇಕು. ಅದಿಲ್ಲವೋ, ಆ ಕಾಸಾರವು ಕಾಸಾರವಾಗಿಯೇ ಇರಲಾರದು.

ಆ ಗಾದೆಯೇನೆಂದರೆ:- ಯುದ್ಧಾರಂಭವಾದಾಗ ದಿನಾಜಪುರಾಧಿನಾಥನನ್ನು ದ್ರೋಹಿಯೆಂದು ಪ್ರಕಟಪಡಿಸಿ ಅಜೀಂಖಾನನು ಆತನನ್ನು ಸೆರೆ ಹಿಡಿಯಲು ತಿರುಗುತಿದ್ದನು. ತನ್ನ ಸೈನ್ಯವು ಸ್ವಲ್ಪವಾದುದರಿಂದ ಗಣೇಶದೇವನು ಆತನೊಡನೆ ಕಾಳಗಕ್ಕೆ ಅಣಿಯಾಗಲಿಲ್ಲ. ಶತೃಗಳು ಬೆಂಬಿಡದೆ ಹಿಂದಟ್ಟಿಬಂದುದರಿಂದಲೂ, ನಿದ್ರಾಹಾರಗಳು ಇಲ್ಲದಿದ್ದುದರಿಂದಲೂ, ಸೈನಿಕರು ಬಳಲಿ

ಹಾಹಗೊಂಡು ಇಲ್ಲಿಗೆ ಬಂದು ಸೇರಿದರು. ಸುತ್ತುಮುತ್ತಲು ಯೆಷ್ಟುಹುಡು ಕಿದರೂ ಯೆಲ್ಲಿಯೂ ವೊಂದುತೊಟ್ಟು ನೀರು ಕೂಡ ಕಾಣಿಸಲಿಲ್ಲವು. ಅಂತಹ ಸಮಯದಲ್ಲಿ ನಿರಾಶಾ ವಶರಾಗಿ ರಾಜನು ಕುಗ್ಗಿಹೋಗಿಗಲು, ಯೋಗಿನಿಯು ಬೇಕಾದ ಆಹಾರ ಪದಾರ್ಥಗಳೊಡನೆ ಅಲ್ಲಿಗೆ ಬಂದು, ಅವರ ಸ್ಥಿತಿಯನ್ನು ನೋಡಿ, ವೊಂದು ಸ್ಥಳವನ್ನು ತೋರಿಸಿ, ಅಲ್ಲಿನೀರನ್ನು ಕುರಿತು ಹುಡುಕಿ ಬರುವುದೆಂದು ಹೇಳಿದಳು. ಅದಕ್ಕೆ ಅವರು ಅಸುತ್ತುಮುತ್ತಲೂ ಶೋಧಿಸಿದೆವೆಂದು ಬದುಲು ಹೇಳಿದರು. "ಅದರೂ ಮರಳಿ ನೋಡೋಣ!" ವೆಂದು ಸನ್ಯಾಸಿನಿಯು ನಂಬುಗೆಯಿಂದ ಹೇಳುತಲೆ ಆಕೆ ತೋರಿದ ದಿಕ್ಕಿಗೆ ಹೋಗಿ ನೋಡಿದಾಗ ಪಿಪಾಸಾರ್ದಿತರಾದವರೆಲ್ಲರಿಗೂ ಒಂದು ನಿರ್ಮಲೋದಕವುಳ್ಳ ತಟಾಕವು ಕಂಡಿತು. ಅದನ್ನು ನೋಡಿವ್ಯೆಯುಬ್ಬಿ ಸೈನಿಕರೆಲ್ಲರೂ ಅವರ ಸಹಜವಾದ ಮತಭಕ್ತಿಯು ಮೆರೆಯುತಿರಲು ದಾಹಶಾಂತಿ ಪಡಿಸಿಕೊಳುವುದಕ್ಕೆ ಮೊದಲು ಆ ಯೋಗಿನಿಯ ಚರಣಕಮಲಗಳ ಮೇಲುರುಳಿ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿದರು.

ಆ ತಣುವಾದ ನೀರೂ, ಅದರಲ್ಲಿ ದಿವ್ಯಮಹಿಮಾತಿಶಯ ವಿರುವುದೆಂದು ಸೈನಿಕರಿಗುಂಟಾದ ಭರವಸೆಯೂ, ಇಂದ್ರ ಜಾಲದಂತೆ ಅಗ ಕೆಲಸ ಮಾಡಿತು. ಈ ಸರೋವರದ ನೀರು ಅವರಿಗೆ ಯೆಲ್ಲಿಲ್ಲದ ಬಲವನ್ನೂ ಉಂಟುಮಾಡಿದುದರಿಂದ ಅವರಿಗೆ ಅದರಲ್ಲಿ ಮಹಾ ಮಹಿಮೆಯುಂಟೆಂಬ ನಂಬುಗೆಯು ಸ್ಥಿರವಾಗಿಬಿಟ್ಟಿತು. ಅದರ ಪ್ರಭಾವವು ಅಷ್ಟಕ್ಕೆ ಮುಗಿಯಲಿಲ್ಲ. ಈ ಜಲಪಾನ ಮಾಡಿದ ಕೂಡಲೆ ಅವರು ಸುಲಭವಾಗಿ ಶತೃಗಳನ್ನು ಸೋಲಿಸುವವರಾದರು. ಅದರಿಂದವರು ಅದಕ್ಕೆ "ಕಲ್ಪಕ" ತಟಾಕವೆಂದು ಹೆಸರಿಟ್ಟರು. ಅಲ್ಲಿ ಅವರು ಬಹು ದಿನಗಳಿರಲಿಲ್ಲ. ಯುದ್ಧ ನಡೆಯುತ ಶತೃಗಳು ತಮ್ಮನ್ನು ಹಿಂಬಾಲಿಸುತಿರುವುದರಿಂದ ತ್ವರೆಯಲ್ಲಿ ಅಲ್ಲಿಂದ್ಪಹೊರಟು ಹೋಗಬೇಕಾಯ್ತು. ಸೈನ್ಯವನ್ನು ಸೇರಿಸುವುದಕ್ಕೋಸ್ಕರ ಅವರು ದಿನಾಜಪುರಕ್ಕೆ ಹೊರಟರು. ಆದರೂ ಅವರಿಗೆ ಯುದ್ಧವೂ ಅನುಕೂಲವಾಗಿದ್ದುದರಿಂದ ಅವರು ಶತೃಗಳನ್ನು ಅಟ್ಟಿ ರಾಜಧಾನಿಯ ಮೇಲೆ ಹೋಗುವಿಕೆಯಲ್ಲಿ

ಕೃತಕೃತ್ಯರಾದರು. ಆವರು ಮರಳಿ ಪಾಂಡುವಾ ನಗರಕ್ಕೆ ಬರುವಾಗ ಪುನಹ ಈ ಸರೋವರದ ದಡದಲ್ಲಿಯೇ ಶಿಬಿರವನ್ನೇರ್ಪಡಿಸಬೇಕಲ್ಲದೆ ಬೇರೆ ಸ್ಥಳವು ಕೆಲಸಕ್ಕೆ ಬಾರದು. ಇಲ್ಲಿ ನಿಂತ ವೊಂದು ವಾರದ ದಿನಗಳೊಳಗಾಗಿಯೇ ಸುಲತ್ತಾನನನ್ನು ನೋಡ ಹೋಗುವಿಕೆಯೂ, ಅಲ್ಲಿ ಬಂಧಿಸಲ್ಪಡುವಿಕೆಯೂ ಅದೃಷ್ಟವಶದಿಂದ ಬಂಧನದಿಂದ ತಪ್ಪಿಸಿಕೊಳ್ಳುವಿಕೆಯೂ ನಡೆದುದು.



## ಪ್ರಕರಣ ೨೬.

ವರ್ಷಾಋತುವು ಕೊನೆಗಾಣುತ ಬಂದಿತು. ಆದರೆ ಇನ್ನೂ ಮೇಘಗಳು ಮಾತ್ರ ಕಾಣುತಿವೆ. ಈದಿನ ವಸಂತಕಾಲದ ಹಾಗೆ ವೃದ್ಧಾರ್ಕ ಕಿರಣ ಪ್ರಸಾರವು ಪ್ರಕಾಶಿಸುತಿರಲಿಲ್ಲ. ವೃಕ್ಷಗಳ ಯೆಲೆಗಳಿಂದ ಜಲಬಿಂದುಗಳು ದುರುತಿರಲು ಒಂದುಗಾಳಿಯು ಆ ತಟಾಕದ ಶಾಂತತೆಯನ್ನು ಕೆಡಿಸಿತು. ಸಮೀಪದಲ್ಲಿರುವ ಹುಲ್ಲು ಹಸುರು ನೆಲದಲ್ಲಿ ಬೈಲು ಕಪ್ಪೆಗಳು ಕೂಗಿಕೊಳುತಿದ್ದುವು. ದಾರುಕಂದುಕ ಪ್ರಹರಣ ಧ್ವನಿಗಳು ಸಾಯಂಕಾಲವಾಗುವುದನ್ನು ತಿಳಿಸುತಿದ್ದಿತು. ಶಿಬಿರದ ಸುತ್ತಲೂ ಯುದ್ಧಭಟರು ಜಾಗರೂಕತೆಯಿಂದ ಕಾವಲಿರುತಿದ್ದರು.

ಮಹಾರಾಜನ ಸೇವಕರು ಕೆಲವರು ಆ ತಟಾಕದೊಳ ಚಪ್ಪರದಮೇಲೆ ಕುಳಿತಿದ್ದರು. ಅವರು ಯುದ್ಧಭಟರಲ್ಲಿ ಸೇರದವರಾಗಿದ್ದರೂ ಆಯುಧ ಪಾಣಿಗಳಾಗಿ ಯುದ್ಧಕ್ಕೆ ಸಿದ್ಧವಾಗಿ ರುವವರಂತೆಕಾಣುವರು. ಯಾವ ಕ್ಷಣಕ್ಕೇನು ಬರುವುದೋ ಎಂದು ಬಲಗಳೆಲ್ಲವೂ ಸಿದ್ಧವಾಗಿರಿಸಲ್ಪಟ್ಟಿತು. ಹಾಗಿರುವುದರಲ್ಲಿ ಮಹಾರಾಜನ ಪರಿವಾರವೆಲ್ಲವೂ ಸೊಂಟದಲ್ಲಿ ಕತ್ತಿಯನ್ನೂ ಕೈಯೊಳು ಈಟಿಯನ್ನೂ ಧರಿಸಿದ್ದಿತು. ಈಗಿನ ಕಾಲದಂತಲ್ಲದೆ ವಂಗದೇಶೀಯರು ಪೂರ್ವದಲ್ಲಿ ಕ್ಷಾತ್ರವಂತವಾದ ಜಾತಿಯವರಾಗಿದ್ದರು. ಅಗ್ಗೆ ಇನ್ನೂ ಪ್ರಸ್ತುತಕಾಲದ ನಿರಾಧಾರ ಸ್ಥಿತಿಗೆ ಬಂದಿರಲಿಲ್ಲ. ಈಗ

ಅವರಿಗೆ ಲಕ್ಷ್ಯಗಳುಮಾತ್ರ ಸಿಕ್ಕಿವೆಯಲ್ಲದೆ ಬೇರೆಯೇನೂ ಇಲ್ಲ. ಅದನ್ನು ಕುರಿತು ಭಗವಂತನಿಗೆ ಕೃತಜ್ಞರಾಗಿರಬೇಕಾಗಿದೆ. ಮುಂದೆಯಾದರೂ ಪೂರ್ವದಸ್ಥಿತಿಗೆ ಬರಲು ಪ್ರಯತ್ನಿಸುವಿಕೆಗೆ ಅವು ಆದರ್ಶಗಳೆಂಬ ಊಹೆಯುಂಟು.

ಹೀಗೆ ಸಮಾಸೀನರಾದವರಲ್ಲಿ ನೋರ್ಬೆ ಅಧಿಕಾರಿಯೆಂಬೊಬ್ಬ ನಾಟಕ ಕರ್ತನೂ, ನಾಟಕಸಂಘ ಒಂದಕ್ಕೆ ಕಾರ್ಯದರ್ಶಿಯೂ, ಆದಾತನೊಬ್ಬನಿದ್ದನು. ಆತನು ಪಾಂಡುಮಾನಗರದ ವಸಂತೋತ್ಸವ ಸಮಯದಲ್ಲಿ ನಾವು ಕಲೆತುಕೊಂಡ ರಂಗಿಣಿಯ ಭರ್ತೃ. ಆತನ ಗೀತಗಳೆಂದರೆ ತನಗೆ ಅತ್ಯಂತ ವಿಶ್ವಾಸವಾದುದರಿಂದ ಆತನನ್ನು ರಾಯನು ತನ್ನ ಆಸ್ಥಾನ ಕವಿಯಾಗಿಯೇರ್ಪಡಿಸಿಕೊಂಡು ಬಹು ಗೌರವಿಸುತಿದ್ದನು. ಕೃಷ್ಣಲೀಲೆಯನ್ನು ಕುರಿತ ಗೀತಗಳು ಆ ಕವಿಯ ಕವಿತೆಗಳಲ್ಲಿ ಬಹು ಪ್ರಸಿದ್ಧವಾದುವು. ಅವು ಯೆಲ್ಲೆಡೆಯಲ್ಲಿಯೂ ವ್ಯಾಪಿಸಿ ಯೆಲ್ಲರೂ ಅವುಗಳನ್ನು ಹಾಡುತಿರುವರು. ಆತನ ವಯಸ್ಸು ನಲವತ್ತೆರಡು ಸಂವತ್ಸರಗಳು. ಆತನಿಗೆ ನಾಲ್ಕುಮಂದಿ ಹೆಂಡಿರುಗಳು. ಅವರಲ್ಲಿ ಮೂವ್ವರನ್ನು ಆತನ ತಂದೆ ತಾಯ್ಗಳೇ ಮದುವೆಮಾಡಿದರು. ನಾಲ್ಕನೆಯವಳಾದ ರಂಗಿಣಿಯು ಆತನ ಸ್ವಪ್ರಯತ್ನದಿಂದ ಲಭಿಸಿದಾಕೆಯು. ಆತನ ಜ್ಞಾತಿಯೊಬ್ಬನು ಆಕೆಯನ್ನು ನೋಡಿ ತನಗೆ ಕುದುರಿಸುವಂತೆ ಯಾಕವೀಶ್ವರನನ್ನು ಕಳುಹಿದನು. ನೋರ್ಬೆ ಅಧಿಕಾರಿಯು ಎಂದೆಂದಿಗೂ ಯುವಕನೇ ಆದುದರಿಂದ ಆ ಬಾಲಿಕೆಯನ್ನು ತಾನೇ ಮದುವೆಯಾಗಿ ಹಗೆ ತೀರಿಸಿಕೊಂಡನು. ಹೀಗೆ ಆತನ ವಯಸ್ಸೆಲ್ಲವೂ ವರಸೆಯಾಗಿ ಕ್ರೀಡಾವಿನೋದಗಳಿಂದಲೇ ಕಳೆಯುತಿರುವುದು. ಅವುಗಳೊಡನೆ ಆತನ ಖ್ಯಾತಿಯೂ ಅದೃಷ್ಟವೂ ಜೊತೆ ಬೀಳುತಿದ್ದಿತು. ಆದರೆ, ಅಕಸ್ಮಿಕವಾಗಿ ಹೊದಗಿದ ಈ ಯುದ್ಧವು ಅಂತರಾಯವನ್ನುಂಟುಮಾಡಿತು. ರಾಣಿಯು ತನ್ನ ಪ್ರಿಯಪತಿಯೊಡನೆ ಶಿಬಿರಕ್ಕೆ ಹೊರಟಳು. ರಂಗಿಣಿಯೂ ಆಕೆಯನ್ನು ಅಗಲಿರಲಾರದೆ ತಾನು ಕೂಡ ಹಿಂಬಾಲಿಸಿದಳು. ಈ ವಿಪ್ರಗಾಯಕನಿಗೆ ತನ್ನ ಜೀವಿತೇಶ್ವರಿಯನ್ನು ಅನುಗಮಿಸುವುದಕ್ಕಿಂತಲೂ ಬೇರೆ ಸಾಧನವಿಲ್ಲವು.

ವೇಣುವಿಗೂ ವೀಣೆಗೂ ಬದಲಾಗಿ, ಖಡ್ಗವನ್ನೂ ಈಟಿಯನ್ನೂ ಹಿಡಿದು
ಕೊಂಡು ಶಿಬಿರಕ್ಕೆ ಬರಬೇಕಾಯಿತು.

ಯುದ್ಧ ಸಮಯದಲ್ಲಿ ಜಾವಡಿಗಳೂ ಪದಗಳೂ, ಸಮಯೋಚಿವಾಗಿ
ರಲಾರವು. ಮಹಾರಾಜನೂ ಮಂತ್ರಿಗಳೂ ದಂಡಯಾತ್ರಾ ವಿಷಯಕವಾದ
ಆಲೋಚನೆಗಳಲ್ಲಿದ್ದರು. ಈಗ ಆ ಕವೀಶ್ವರನ ಹಾಡುಗಳನ್ನು ಕೇಳುವ
ವರಿಲ್ಲ. ಹೊರಗೆ ಬರುವಾಗೆಲ್ಲ ರಾಜಭಟವೇಷದಿಂದ ಬರಬೇಕಾಗಿರುವು
ದರಿಂದ ಯಾವಾಗ್ಲೂ ಆತನು ಬಿಡದಿಯನ್ನು ಬಿಟ್ಟುಬರುವಿಕೆಯೇ ಇಲ್ಲ.
ಆದರೂ ಶಿಬಿರದಲ್ಲಿಯು ಕೂಡ ಯಾರೂ ಸೋವಾರಿಗಳಾಗಿರುವುದಕ್ಕೆ ಆ
ಸ್ಪದವಿಲ್ಲ. ವೀಣೆಯನ್ನು ನುಡಿಸುವಾತನ ಕೈಗೆ ಖಡ್ಗವು ಅತಿ ಕಠಿಣತರ
ವಾಗಿರುವುದು. ಆದುದರಿಂದ ಈ ಗಾಯಕನಿಗೆ ತನ್ನ ಯೋಗ್ಯತೆಗೆ ತಕ್ಕ
ಉಪಕರಣಗಳನ್ನು ಹುಡುಕಿಕೊಳಬೇಕೆಂಬ ಅಭಿಲಾಷೆ ಇದ್ದಿತು. ಆತನ
ಅಭಿಲಾಷೆಯಂತೆ ಈ ಕವಿಗೆ ಪಾಕಶಾಲೆಯ ಉದ್ಯೋಗವು ನೇಮಿಸಲ್ಪಟ್ಟಿ
ತು. ಕವಿಯು ವೀಣೆ, ಫಿಟೀಲು, ಮೊದಲಾದುವುಗಳನ್ನೊಂದು ಮೂಲೆಗಿಟ್ಟು
ಸಟಕವನ್ನು ಕೈಲಿ ಹಿಡಿಯಬೇಕಾಗಿ ಬಂದಿತು. ಆತನು ಪಾರ್ಸ್ವನಾದುದ
ರಿಂದ ಆ ಕಾರ್ಯಕ್ಕೆ ತಕ್ಕವನಾಗಿಯೇ ಇದ್ದನು. ಇದು ಆತನಿಗೆ ಸಂಗರ
ಕ್ಕಿಂತಲೂ ಸ್ವಲ್ಪವಾದರೂ ಹೆಚ್ಚು ಅಭಿರುಚಿಯನ್ನುಂಟಾಗಿಸಲಿಲ್ಲ. ಆದ
ರೆ ಇದರಿಂದ ಆತನಿಗೆ ಅಪಾಯಮಾತ್ರವಿಲ್ಲ. ಆತನಿಗೆ ನಾಟಕಶಾಲೆಯಲ್ಲಿ
ಅನೇಕ ವೇಷಗಳನ್ನು ಹಾಕುವ ರೂಢಿಯಿದ್ದಿತು. ಒಂದೊಂದುವೇಳೆ
ಸ್ತ್ರೀವೇಷವನ್ನು ಕೂಡ ಹಾಕುವನು. ರಾಧಿಕೆಗೆ ದೂತೆಯಾದ ಬೃಂದೆ
ಯವೇಷವು, ಆತನಿಗೆ ಬಹು ವಿಶ್ವಾಸಾರ್ಹವಾದುದು. ಆದರೆ ಅಂತಹ
ಕಾರ್ಯವನ್ನು ಮಾಡುವುದು ಮಾತ್ರ ವಾಸ್ತವ ಸ್ಥಿತಿಯಲ್ಲಿ ಆತನಿಗೆ ಅಷ್ಟು
ಸುಕರವಾಗಿಲ್ಲದಿದ್ದಿತು.

ಮಳೆ ಸುರಿಯುತಿರುವ ಈ ದಿನದಲ್ಲಿ ಹೃದಯದೊಳಗಿನ ತನ್ನ ಊಹೆ
ಗಳನ್ನು ತಡೆಯಲಾರದೆ ಸಾರಂಗವನ್ನು ಕೈಯೊಳು ಹಿಡಿದು ಸೊಂಟದಲ್ಲಿ

ಹೋರಾಡುವ ಖಡ್ಗದೊಡನೆ ಈ ಗಾಯಕ ಶಿಖಾಮಣಿಯು ಪುಷ್ಕರಿಣೀತೀರದೊಳು ಸುಖಾಸೀನರಾಗಿರುವಮಿತ್ರ ಬೃಂದದ ಬಳಿ ಸಂದು ತಲೆಗುಡ್ಡೆಯನ್ನು ತೆಗೆದು ಕೆಳಗಿಟ್ಟು ಜೋಟುದ್ದದ ತನ್ನ ಜುಟ್ಟನ್ನು ಕೊಡಹಿ ಗಂಟಿಕ್ಕಿಕುಳಿತುಕೊಂಡನು. ತರುವಾಯ ಮೆಲ್ಲನೆ ಸಾರಂಗವನ್ನು ಶೃತಿಗೂಡಿಸಿ ತಲೆದೂಗುತ ಕಣ್ಗಳ ಮುಚ್ಚಿಕೊಂಡು ತಂತಿಗಳಮೇಲೆ ಬಾರಿಸಲಾರಂಭಿಸಿದನು. ಆದರೆ ಅದನ್ನು ಕೇಳಿ ಆಮೋದಿಸುವರಾರೂ ಕಾಣಲಿಲ್ಲ. ಅದೇನೋ ಸರಿಯೆ! ಆಗ ಅಲ್ಲಿನ ಕೂಗು ಮೊದಲಾದ ಗದ್ದಲದಲ್ಲಿ ಈ ಗೀತವೂ ನಿಂತು ಹೋಯಿತು. ಯೆರಡನೆಯದನ್ನು ಹಾಡುವುದಕ್ಕೆ ಸಿದ್ಧವಾಗಿರುವಾಗ ಆವರಲ್ಲಿ ಒಬ್ಬನು ತಡೆದು "ಠಾಕೂರಾ! ಇದಕ್ಕೇನೆನುವೆ?" ಎಂದು ಕೇಳಿದನು.

ಅ ಬ್ರಾಹ್ಮಣನಿಗೆ ಬೇಸರಹುಟ್ಟಿ "ನಾನು ಹೇಳುವುದೇನಿರುವುದು; ವರ್ಷಾಕಾಲವೆಲ್ಲವೂ ಭಾರ್ಯಾವಿಯೋಗದಿಂದ ನೀನು ಬಾಧೆಪಡುತಿರಬೇಕು. ನನಗೆ ನಿನ್ನಂತಹರ ಸಹಾಯವು ಯೆಂದಿಗೂ ವುಂಟಾಗದಂತೆ ಭಗವಂತನು ಪ್ರಸಾದಿಸಬೇಕು. ಇಷ್ಟೇ ನಾನು ನಿನಗೆ ಹೇಳುವುದು."

ಈ ಮಾತುಗಳನ್ನು ಕೇಳಿ ಶ್ರೀಕಾಂತಾ ಪರಿಮಾಣಿಕನೆಂಬೋರ್ವ ನಾವಿತ್ಲನು "ಮುನ್ಷಿಯವರೇ! ಠಾಕೂರರನ್ನು ಹಾಡಿಸಿ ದಯವಿಟ್ಟು ಕೇಳಿರಿ. ಹಾಡಿರಿ, ಠಾಕೂರರೇ! ನನಗೆ ಮನೆಯ ಬೇಸರ ಮನಸ್ಸಿಗೆ ಹಿಡಿದು ಮೊದ್ದಾಡಿಸುತಿದೆ. ತಾವು ಹಾಡಿದುದಾದರೆ ನನಗೆ ಸ್ವಲ್ಪ ಮನಶಾಂತಿಯಾಗುವುದು." ಅಂದನು. ಆ ಬ್ರಾಹ್ಮಣನು ಆ ಮಾತುಗಳನ್ನು ಕೇಳಿ ಸಂತೋಷಿಸಿ ಹಾಡುವುದಕ್ಕೆ ಮೊದಲಿಟ್ಟನು. ಸ್ವಲ್ಪಹೊತ್ತು ಕೇಳಿ ಪರಮಾಣಿಕನು "ಶಹಬಾಸ್, ಠಾಕೂರ! ಶಹಬಾಸ್. ನಿಮಗೀಗ ನಾನು ನನ್ನ ಕೃತಜ್ಞತೆಯನ್ನು ತೋರಿಸುವುದಕ್ಕೆ ನನ್ನ ಬಳಿಯೇನೂ ಇಲ್ಲ." ಅಂದನು. ಇದರಿಂದ ಕವಿಗೆ ಮತ್ತಷ್ಟು ಉತ್ಸಾಹ ಹುಟ್ಟಿ ಹಾಡುತಿರಲು ಸಂಗೀತವೆಂಧಳೆ ತಲೆತಿರುಗುವ ಮುನ್ಷಿಯು ಅಡ್ಡಬಂದು ನಾವಿತನೊಡನೆ "ಪರಮಾಣಿ

ಕನೇ? ನಿನ್ನಿನ ರಾತ್ರಿ ನಿನಗೆ ಕನಸು ಬಂದಂತೆ ನುಡಿವೆಯಲ್ಲವೆ; ಅದೆಂ ವುದೆಲೋ: ಸ್ವಲನಿವರಿಸು" ಅಂದನು.

"ಪರಮಾಣಿಕನು ಸ್ವಪ್ನಗಳಿಗೆ ಪ್ರಸಿದ್ಧನು" ಎಂದು ಭಾಂಡಾರಿಯು ನುಡಿದನು. ಪರಮಾ "ಆಕಾಶವೆಲ್ಲವೂ ಕೆಂಪು ಹರಿದಂತೆ ಕಂಡಿತು."

ಶಾಮುಸರಾಧ್ದರ-"ಮತ್ತು ಅದರಿಂದ ರಕ್ತವು ಹರಿಯುತಿದ್ದಿತಲ್ಲವೆ?" ಪರಮಾ "ಎಲೈ ಮಿತ್ರನೆ! ಅದೇನು ರಕ್ತಪ್ರವಾಹಗಳು! ರಕ್ತಸಮುದ್ರವೆ! ತಾಳೆಯೋಲೆಯಗಿಡವಷ್ಟು ಯೆತ್ತರದ ಮೊಂಡುಗಳ್ಳಿಗಳು! ಅವೆಲ್ಲವೂ ಮಾನವರಾದಂತೆಯೂ, ಅವರಲ್ಲಿ ನಾನೊಬ್ಬನಾದಂತೆಯೂ, ತೋರಿತು. ತರುವಾಯ ನಾನು ಗಟ್ಟಿಯಾಗಿ ಗೋಳಿಡಲಾರಂಭಿಸಿದೆನು. ಆದರೆ ಹಠಾತ್ತಾಗಿ ಕಮಲಾಸನೆಯಾದ ಭಗವತಿಯು ಪ್ರತ್ಯಕ್ಷಳಾಗಿ ಕಾಣಿಸಿ "ಮಗುವೆ! ಭಯಪಡದಿರು." ಎಂದು ಅಭಯವಿತ್ತಳು. ಅಷ್ಟಕ್ಕೆ ನನಗೆ ಎಚ್ಚರವಾಗಿ ಬಿಟ್ಟಿತು."

ಇದನ್ನು ಕೇಳಿ ಶ್ರೋತೃಮಂಡಲಿಯು ಅದ್ಭುತವೆಂದು ಕೇಕೆಗಳನ್ನು ಹಾಕುತ "ಆಕೆಯು ಯಾರನ್ನು ಹೋಲಿರುವಳು ?"

ಪರಮಾ-ಸನ್ಯಾಸಿನಿಯನ್ನು ಹೋಲಿರುವಳು.

ಮುನ್ಷಿ-ಆಕೆಯೇ ಆಗಿರಬಹುದು, ಆಕೆಯು ನಮ್ಮನ್ನು ಈ ಹಿಂದೆ ಯೊಂದು ಬಾರಿ ಕಾಪಾಡಿರುವಳು. ಮರಳಿ ಆಕೆಯ ಅನುಗ್ರಹದಿಂದಲೇ ನಾವು ಜಯಶೀಲರಾಗುವೆವು ಇದೇನೋ ಶುಭ ಸೂಚಕ ಸ್ವಪ್ನವು.

ಇದುವರೆಗೆ ಮಾತಾಡದೆ ಸುಮ್ಮನಿದ್ದ ರಾಜವೈದ್ಯನಾದ ನಿಕುಂಜ ಸೇನನು "ಅದು ನಿಶ್ಚಯವಾಗಲಿ. ಅದರೊಡನೆ ಮಹಮದೀಯರ ಗರ್ವ ಮಡಗಲಿ! ಹಕೀಮರು ಅಧೋಗತಿಯನ್ನು ಹೊಂದಲಿ! ಎಲ್ಲವೂ ಮೋಸವೇ, ಯಿಲ್ಲಿ ನೋಡಿದರೂ ಮೋಸವೆ." ಆಗ "ಹಕೀಂ ನಜೀಂಅಲಿಯನ್ನು ನೋಡುವೆನು ' ಏನು ಹೇಳುವನೊ" ಎಂದು ಹೇಳಿ ಮರಳಿ ಮೌನ ಮುದ್ರೆಯಿನ್ನ ಮಾತನಾಡದಿದ್ದವನಂತೆಯೆ ಮತ್ತೊಂದು ದಿಕ್ಕಿಗೆ ನೋಡು

ತಿದ್ದನು. ಹತ್ತುಮಂದಿಯೊಳಗೆ ಕಲತಿರದೆ ಬೇರೊಂದೆಡೆಯೊಳಿರುವಿಕೆಯು ತನಗೆ ಅಭ್ಯಾಸವಾದರೂ ಶಾಮುಸರದಾರನು ಮಾತ್ರ ಸಂಭಾಷಣೆಯನ್ನು ಬಿಟ್ಟುಬಿಡದೆ "ಆದರೆ, ಪಾದುಷಾಹನೊಂದಿಗೆ ಕಾದುವುದು ಮಾತ್ರ ಸುಕರ ವಲ್ಲ. " ಎಂದನು.

ಪರಮಾ-ಸುಲ್ತಾನನಿಗೆ ನಮ್ಮ ರಾಜನು ಯಾವುದರಲ್ಲಿ ಹಿಂದಾಗು ವನು ? "

ಮುನ್ಷಿ- " ಅದರೊಳಗೂ ಯೋಗಿನಿಯು ನಮ್ಮ ಪಕ್ಷದೊಳಿರು ವಾಗ "ಶಾಮುಸರ್ದ್ದಾರ" "ಅದು ನಿಜವೇ,ಆದರೆ ನಾವು ಮನೆಯನ್ನುಬಿಟ್ಟು ಬಂದು ಬಹುದಿನಗಳಾಗಿವೆ. ಯೇನಾಗಿ ಹೋಗಿರುವವೋ; ನಮ್ಮ ಕುಟುಂ ಬಗಳೇನಾಗಿ ಹೋಗಿರುವವೋ ತಿಳಿಯದು. "

ಇನ್ನೊಬ್ಬನು—ರಾಜನ ತಾಯಿಗೆ, ಯೋಗಿನಿಯ ಮೇಲೆ ಅಷ್ಟು ಅಸೂಯೆ ಯೇಕೆಂಬದನ್ನು ಹೇಳಬಲ್ಲೆಯಾ ? ಆಕೆಯ ಹೆಸರೆಂದರೇನೆ ಆಕೆಗೆ ತಲೆನೋವು. ಈ ಯುದ್ಧಕ್ಕೆ ಆಕೆಯೇ ಮೂಲವೆಂಬದಾಗಿಯೂ, ಆಕೆಯು ಮೋಸಗಾತಿಯೆಂಬದಾಗಿಯೂ, ಆಕೆಯು ನಮ್ಮ ಜತೆಯಲ್ಲಿರುವ ವರೆಗೂ ಮಹಾರಾಜನಿಗೆ ಕೇಡು ತಪ್ಪಲಾರದೆಂಬದಾಗಿಯೂ ಹೇಳುತಿರುವಳು. "

ಭಂಡಾರಿ— ಈ ಯುದ್ದದ ದೆಸೆಯಿಂದ ಯೆಂದಿಗಾದರೂ ಕೇಡು ಮೂಡುವುದೆಂದು ಮಹಾರಾಣಿಗೆ ಭಯವು. ಅದರ ದೆಸೆಯಿಂದ ಯುದ್ಧವನ್ನು ನಿಲಿಸಿ ಪಾದುಷಾಹನೊಂದಿಗೆ ಸಂಧಿಮಾಡಿಕೊಳಬೇಕೆಂಬುದು ಆಕೆಯ ಅಭಿಪ್ರಾಯವು.

ಸರ್ದ್ದಾರ- " ಆಕೆ ಹೇಳುವುದು ಸತ್ಯವೆ. ಸಂಧಿ ನಡೆಯುವುದೆಂದೇ ನನ್ನ ಅಭಿಮತವು. ,,

ನಾಪಿತ-ಅಂತಹ ಮಾತನ್ನು ನಿನ್ನ ಬಾಯಿಂದಾಡುವುದಕ್ಕೆ ನಿನಗೆ ನಾಚುಗೆಯಿಲ್ಲವೆ ? ನಮ್ಮ ಮಹಾರಾಜನು ಸುಲ್ತಾನನಿಗೆ ಶರಣುಹೊಕ್ಕ

ರೆ ಆತನು ನಮ್ಮೆಲ್ಲರಿಂದಲೂ ಖುರಾನನ್ನು ಓದಿಸಿ ತೀರುವನು. ಹಾಗಲ್ಲದೆ ನಮ್ಮ ಅರಸೇ ಜೈಸಿದುದಾದರೆ ಯೆಂದಿಗಾದರೂ ಆತನು ಸುಲ್ತಾನನಾಗುವನು. ದೇಶದೊಳು ಪ್ರಜಾಪೀಡೆಯೆಂಬ ಮಾತೇ ಇರಲಾರದು. ಆಗ ನಮಗೆ ರಾಮರಾಜ್ಯದಂತೆ ಎಷ್ಟು ಸೌಖ್ಯವಿರುವುದೋ " ಅಂದನು.

ಈ ಮಾತನ್ನು ಕೇಳಿದ ಶಾಮುಸರ್ದಾರನಿಗೆ ಪರಮ ಸಂತೋಷವಾಗಿ, 'ಅಹುದು ನಿಶ್ಚಯವೆ ' ಎಂದು ಹೇಳಿದನು.

ಮುನ್ಷಿ-ಗಣಪತಿಯು ಇಲ್ಲಿ ಇಲ್ಲವಾದನಲ್ಲ. ಆತನು ಒಳ್ಳೆಯ ಜ್ಯೋತಿಷ್ಕನು. ಆತನು ಪರಮಾಣಿಕನ ಕನಸಿಗೆ ಫಲವನ್ನು ಹೇಳುವನು.

ಶಾಮು ಸರ್ದಾರ-ಬಹುಶಃ ಠಾಕೂರನು ಹೇಳಬಲ್ಲನು. ಆತನು ಬ್ರಾಹ್ಮಣನು. ಆತನಿಗೆ ಶಾಸ್ತ್ರಪರಿಚಯವಿರಬಹುದು. ಠಾಕೂರರೆ! ಕೇಳಿರಿ. ಆತನನ್ನು ನೀವು ಕೇಳಿದಿರಾ? ಹೇಳಿರಿ. ಯಾರು ಗೆಲುವರು? ನಮ್ಮ ಮಹಾರಾಜನು ಯಾವಾಗಲಾದರೂ ಸುಲ್ತಾನನಾದಾನೇ ?" ಇಲ್ಲವೆ? ಎಂದು ಹೇಳುತ ಅತ್ಯುತ್ಸಾಹದಿಂದ ಕವೀಶ್ವರನ ಬೆನ್ನಿನಮೇಲೆ ಗಟ್ಟಿಯಾಗಿ ಹೊಡೆಯಲು ಆತನು ಮುಂದಕ್ಕೆ ಮುಗ್ಗರಿಸಿ ಕೋಪದಿಂದ " ನೀವೂ ನಿಮ್ಮ ಕನಸುಗಳೂ ಗಂಗೆಯಲ್ಲಿ ಸೇರಲಿ! ನಾನು ಹೋಗುವೆನು. ಇಲ್ಲಿ ನನ್ನನ್ನು ಸ್ಥಿಮಿತವಾಗಿ ಇರಲೀಸಿರಿ, ನೀವು,, ಎಂದು ಹೇಳಿ ಸಾರಂಗವನ್ನು ತೆಗೆದುಕೊಂಡು ಎದ್ದು ಹೊರಟನು.

ಸರ್ದಾರನು "ಆತನನ್ನು ಕರೆಕರೆದು ಇರು' ಇರು. ಠಾಕೂರ! ಕನಸಿನ ಫಲವನ್ನು ಹೇಳದೆ ಹೊರಟು ಹೋಗದಿರು.

ನಾಪಿತ-ಇಗೋ ! ನಿಮ್ಮ ತಲೆ ಪಾಗನ್ನಿಲ್ಲಿ ಮರೆತು ಹೋಗಿರುವಿರಿ. ಬಂದು ತೆಗೆದುಕೊಳಿರಿ.

ಅಷ್ಟರೊಳು ಪರಿಹಾಸಪ್ರಿಯನಾದ ಮುನ್ಷಿಯು "ಠಾಕೂರ್! ದಯಮಾಡಿ ತಮ್ಮ ತಲೆ ರುಮಾಲೆಯನ್ನು ತೆಗೆದುಕೊಳಿರಿ. ಯಾರಾದರೂ ಬುರುಡೆಯ ಮೇಲೆ ಹೊಡೆದರೆ ಯೇನೂ ಇಲ್ಲದಿರುವುದರಿಂದ ನಿಮ್ಮ ತಲೆಗೆ

ಪೆಟ್ಟು ಬೀಳುವುದು. ನಿಮ್ಮ ಸಣ್ಣ ಜುಟ್ಟು ನಿಮಗೆ ಅಷ್ಟು ವುಪಕಾರಿಯಾಗದು. 'ಎಂದು ಚಮತ್ಕಾರದಲ್ಲಿ ಸರ್ದಾರನು ಸಾವಿತನನ್ನು ವಿಾರಿದನು.

ಎಲ್ಲರೂ ಪಕಪಕನೆ ನಕ್ಕು ಆ ಕವೀಶ್ವರನನ್ನು ಗೇಲಿ ಮಾಡಲಾರಂಭಿಸಿದರು. ವೈದ್ಯನು ಮಾತ್ರ ಕಡೆಗಣ್ಣಿಂದ ಆ ವಿಪ್ರವರನನ್ನು ನೋಡಿ ಮರಳಿ ಧ್ಯಾನಿಸುತ ಕಣ್ಗಳನ್ನು ಮುಚ್ಚಿಕೊಂಡನು. ಠಾಕೂರನು ಅವರ ಮಾತುಗಳನ್ನು ಕೇಳಿ ಲಕ್ಷ್ಯಮಾಡದೆಯೆ ಅವರಿಗೆ ಕಾಣಿಸದಷ್ಟು ದೂರ ಹೋಗಿ ವೊಂದು ಮರದಡಿ ಕುಳಿತು ನಿಶ್ಚಲವಾಗಿ ಸಾರಂಗವನ್ನು ಬಾರಿಸುತ ತಾನೆ ಆನಂದಿಸುತಿದ್ದನು.



## ಪ್ರಕರಣ ೨೭.

ಆತನು ಬಾರಿಸುತಿದ್ದ ಹಾಡು ಪೂರೈಸಿತು. ಆ ಬ್ರಾಹ್ಮಣನು ಸಾರಂಗವನ್ನು ಮೆಲ್ಲನೆ ಕೆಳಗಿಟ್ಟು ಧ್ವನಿಯೆತ್ತಿ ಇನ್ನೊಂದು ರಾಗವನ್ನು ಹಾಡಲಾರಂಭಿಸಿದನು. ಅಷ್ಟರಲ್ಲಿ ಒಂದು ಮರದ ನೆಳಲಲ್ಲಿ ಒಂದು ಮುಖವು ಕಾಣಿಸಿತು. ಸ್ತ್ರೀಯೊಬ್ಬಳು ಸವಿಾಪಿಸಿ ನೆಮ್ಮದಿಯಾಗಿ ''ಠಾಕೂರರಿಗೆ ವಂದನವು. ಎಷ್ಟು ಇಂಪಾದ ಹಾಡಿಕೆಯು!'' ಬ್ರಾಹ್ಮಣನು ಆ ಮಾತುಗಳನ್ನು ಕೇಳಿ ಆಶ್ಚರ್ಯಪಟ್ಟನು. ಆಕೆಯ ಸೌಂದರ್ಯವು ಅತ್ಯದ್ಭುತವಾಗಿದ್ದಿತು ಆಕೆಯು ತುಂಬು ಜವ್ವನೆಯಾಗಿದ್ದಳು. ಆಕೆಯನ್ನು ನೋಡಲು ಆತನಿಗೆ ವನ ದೇವತೆಯೆಂದು ಭಾಸವಾಯಿತು. ಆದುದರಿಂದ ಆತನು ಆಕೆಗೆ ಸಮಾಧಾನವೇನೂ ಹೇಳಲಾರದೆ ಹೋದನು.

ಸ್ತ್ರೀ,—''ಠಾಕೂರ್! ದಯೆಯಿಟ್ಟು ನಿಲಿಸದಿರಿ. ಇನ್ನೊಂದು ಗೀತವನ್ನು ಯೆತ್ತಿ ಹಾಡಿರಿ. ಕೇಳುವೆನು.''

ಅಂದಕೂಡಲೇ ಗಾಯಕನು ಮೈಯುಬ್ಬಿ ಆಕೆ ಯಾರೋ ತಿಳಿದುಕೊಳಬೇಕೆಂಬ ಬಯಕೆಯು ಮಿತಿವಿಾರಿ ಆತುರಗೊಂಡನು. ಈ ವನ ದೇವತೆಯು ನಮ್ಮ ಕಥಾನಾಯಿಕೆಯಾದ ಶಕ್ತಿಯಲ್ಲದೆ ಬೇರೆಯಾರೂ ಅಲ್ಲ. ಆಕೆಯು

ಗಾಯಕನನ್ನು ನೋಡಿದ ಕೂಡಲೆ ಗುರುತುಹಿಡಿದಳು. ಏಳು ವರುಷದ ಕೆಳಗೆ ನೋಡಿದ್ದರೂ, ಆತನಲ್ಲಿ ಯಾವ ಮಾರ್ಪ್ಪು ಉಂಟಾಗಿರಲಿಲ್ಲ. ಆದರೆ ಆಕೆ ಮಾತ್ರ ಹಾಗಲ್ಲದೆ ಅಗ್ಗೆ ಬಾಲಿಕೆಯಾಗಿದ್ದು ಈಗ ಭಾಮಿನಿಯಾಗಿ ಬೆಳೆದುದರಿಂದ ಆಕೆಯಲ್ಲಿ ಮಾರ್ಪ್ಪು ಹೆಚ್ಚಾಗಿ ಕಾಣುತಿದ್ದುವು. ಆಕೆಯನ್ನು ನೋಡಿ ಕವಿಯು "ತರುಣೀಮಣಿಯೆ! ನೀನಾರೋ ಕೇಳಬಹುದೆ?"ಎಂದು ಪ್ರಶ್ನಿಸಿದನು.

ಶಕ್ತಿ—" ನನ್ನ ವೇಷವನ್ನು ನೋಡಿದರೆ ಗೊತ್ತಾಗುವುದಿಲ್ಲವೆ? ನಾನೊಬ್ಬ ಭಿಕ್ಷುಕಳು."

ಕವಿ—"ಸಾರಂಗವನ್ನು ಕೆಳಗಿಟ್ಟು"ಕೈಜೋಡಿಸಿ ನನ್ನನ್ನು ಮೋಸಗೊಳಿಸದಿರು. ನೀನು ವನದೇವತೆಯು,, ಎಂದು ಹೇಳಿ ಸ್ವಾಷ್ಟಾಂಗ ನಮಸ್ಕಾರಮಾಡ ಹೋದಾಗ ಶಕ್ತಿಯು ಮನ ನೊಂದು ಸಮಾಧಾನಮಾಡಿ "ನೀನು ನನಗೆ ನಮಸ್ಕರಿಸಬಾರದು. ನಾನು ಕ್ಷತ್ರಿಯಸ್ತ್ರೀಯು. ಆದರೆ ನನಗೆ ಈ ಲೋಕದಲ್ಲಿ ಯಾರೂ ಇಲ್ಲ. ನಾನು ನಿಶ್ಚಯವಾಗಿಯು ತಿರಿಕೆಯವಳೆ,, ಎಂದು ನುಡಿದಳು.

ಆ ಬ್ರಾಹ್ಮಣನು ಆಶ್ಚರ್ಯದಿಂದ ಗದ್ಗದ ಸ್ವರವುಳ್ಳಾತನಾಗಿ "ತಾಯೆ; ಬಲುಮಂದಿ ತಿರಿಕೆಯವರನ್ನು ನೋಡಿರುವೆನಾದರೂ ನಿನ್ನಂತಹ ತಿರುಪಗಾತಿಯನ್ನು ನಾನೆಲ್ಲಿಯೂ ನೋಡಲಿಲ್ಲ.,, ಅಂದನು

ಶಕ್ತಿಯು ಸಂಭಾಷಣೆಯನ್ನು ನಿಲಿಸುವುದು ಯುಕ್ತವೆಂದೆಣಿಸಿ ಠಾಕೂರರೇ! ಯಿನ್ನೊಂದು ಹಾಡನ್ನು ಹಾಡಿ ನನಗೆ ಕೇಳಿಸಲಾರಿರಾ ? ನನಗೆ ನೋರ್ಬಿ ಅಧಿಕಾರಿಯ ಹಾಡುಗಳೆಂದರೆ ಯೆಷ್ಟೋ ವಿಶ್ವಾಸವು. ಈಗ ನೀವು ಹಾಡಿದ್ದು ಆತನು ರಚಿಸಿದುದೇ ಅಲ್ಲವೆ? ,, ಎಂದುಕೇಳಿದಳು.

ಸಹಜವಾಗಿ ಡಂಭಾಚಾರಿಯಾದ ನೋರ್ಬಿಅಧಿಕಾರಿಯು ಯಿದರಿಂದ ಮತ್ತಷ್ಟು ಮೈಯುಬ್ಬಿ ಮಾತು ತಡೆತಡೆಯೆ " ನಾನೇ; ನೋರ್ಬಿಅಧಿಕಾರಿಯು,, ಯೆಂದು ನುಡಿದನು. ಆದಕ್ಕೆ ಆಕೆಯು, "ನೀನೇನೆ ; ಅಪುನವಿದ್ವಾಂಸನು? ನಿನ್ನ ಹೆಸರನ್ನು ದೇಶವೆಲ್ಲವೂ ಬಲ್ಲುದು."

ಈದಿನ ತಮ್ಮ ಸಂದರ್ಶನವಾದುದರಿಂದ ಸುದಿನವು. ತಮ್ಮ ಕವಿತೆಯನ್ನು ವಿಸ್ತಾರವಾಗಿ ನಾನು ಕೇಳಿದ್ದುದುಂಟು. ನಿಮ್ಮ ಸಂದರ್ಶನವಾಗುವುದೆಂದು ಎಣಿಸಿರಲಿಲ್ಲ. ದಯೆಯಿಟ್ಟು ಇನ್ನೊಂದು ಕೀರ್ತನೆಯನ್ನು ಹಾಡುವಿರಾ? ಎಂದು ಕೇಳಿಕೊಂಡಕೂಡಲೆ ಆ ವಿದ್ವಾಂಸನು ಅತ್ಯುತ್ಸಾಹದಿಂದ ಅನೇಕರೀತಿಯಾದ ಸ್ವರಕಲ್ಪನೆಗಳಿಂದ ಆಲಾಪನೆ ಮಾಡಿ ಹಾಡಲಾರಂಭಿಸಿದನು. ಶಕ್ತಿಯು ತದೇಕ ನಿಷ್ಠೆಯಿಂದ ಕೇಳುತಿದ್ದಳು. ಅಷ್ಟರೊಳು ಸಾಯಂಕಾಲ ವಾಸನ್ನವಾಯ್ತು. ಗಾಳಿಬೀಸಿ ಮೇಘಗಳು ಚೆದರಿ ಆಕಾಶವು ನಿರ್ಮಲವಾಯ್ತು. ನಭೋಮಂಡಲದಲ್ಲಿ ಚಂದ್ರನುದಯಿಸಿ ತನ್ನ ಕಾಂತಿಗಳನ್ನು ಅವನ ನೆರಳಲ್ಲಿ ಪ್ರಕಾಶಪಡಿಸಿದನು. ಈ ಆಹ್ಲಾದದ ದೆಸೆಯಿಂದ ಕವೀಶ್ವರನ ಹಾಡಿಕೆಯು ಬರುತ ಬರುತ ಹೆಚ್ಚುತ ಕೊನೆಮುಟ್ಟುವ ವರೆಗೆ ಆತನಿಗಾವುದೂ ತಿಳಿಯದೆ ಪೂರೈಸಿದ ತರುವಾಯ ಅತ್ಯಂತ ಶ್ರದ್ಧೆಯಿಂದ ಕೇಳುತಿದ್ದ ಶಕ್ತಿಯ ಕಡೆಗೆ ತಿರುಗಲು ಆಕೆಯು—"ಅದೀಗ ನನಗೆ ಬಹುಪ್ರಿಯತಮವಾದ ಹಾಡು. ಯಿದು ಕೂಡ ತಾವು ಮಾಡಿದುದೇನೋ?,, ಕವಿಯು "ಅಹುದು. ಅದುಕೂಡ ನನ್ನದೇ ನಿನಗೆ ಸಂಗೀತದಲ್ಲಿ ಬಹು ವಿಶ್ವಾಸವಿರುವಂತೆ ಕಾಣುತ್ತದೆ. ನೀನು ಕೂಡ ಹಾಡಬಲ್ಲೆಯಲ್ಲವೆ; ,,

ಶಕ್ತಿ:-ತಿರುಪೆಯಿಂದ ಜೀವಿಸತಕ್ಕವಳಾದುದರಿಂದ ಆಗಿಂದಾಗ ಸ್ವಲ್ಪ ಹಾಡಬೇಕಾಗಿ ಬರುವುದು.

ಕವಿ:-ನನಗೆ ಸ್ವಲ್ಪ ಕೇಳಿಸುವೆಯೋ; ನೀನು ನನ್ನ ಹೆಣ್ಣುಮಗಳಸಮಾನಳು. ನನ್ನಬಳಿ ನಾಚಿಗೊಳಬಾರದು. ,,

ಶಕ್ತಿ:-"ಅದೇನೋ ನಿಶ್ಚಯವೇ; ಆದರೂ ತಾವು ಮಹಾವಿದ್ವಾಂಸರು ನಾನು ತಿರಿಕೆಯವಳು. ನಾನು ತಮ್ಮ ಮುಂದೆ ಹಾಡುವುದು ಸಾಹಸವಲ್ಲವೆ? ಆದರೂ ತಾವು ಅಪೇಕ್ಷಿಸುವಿರಿ, ಆದುದರಿಂದ ಹಾಡುವೆನು. ,,

ಎಂದುಹೇಳಿ ಶಕ್ತಿಯು ಮೆಲ್ಲನೆ ಆರಂಭಿಸಿ ಕ್ರಮಕ್ರಮವಾಗಿ ಅಸಾಧ್ಯವಾಗಿ ಹಾಡಿದಳು.

ತಲೆನು ರಚಿಸಿದುದನ್ನು ಯಿತರರು ಮನೋಹರವಾಗಿ ಹಾಡುತಿರಲು ಕೇಳುವಿಕೆಯಲ್ಲಿ ವುಂಟಾಗುವ ಆನಂದವು ಕವಿಯೇ ಬಲ್ಲನು. ಆ ಕವೀಶ್ವರನ ಹೃದಯವು ಯಿಮ್ಮಡಿ ಅರಳಿ ಆತನ ಮನಸ್ಸು ಬೆಳದಿಂಗಳಿಂದ ಉಬ್ಬೇರುವ ಸಮುದ್ರದಂತಾಯ್ತು. ಆತನಿಗದು ವೈಕುಂಠದಲ್ಲಿ ದೇವಗಾನವನ್ನು ಕೇಳುತಿರುವಂತಿದ್ದಿತು. ಈ ಸಂತೋಷವನ್ನುಂಟು ಮಾಡಿದುದಕ್ಕೋಸ್ಕರ ಆತನಿಗೆ ಶಕ್ತಿಯೊಳು ಕೇವಲ ಕೃತಜ್ಞತೆಯು ಹುಟ್ಟಿ '' ತಾಯೇ ; ನನ್ನಿಂದ ನಿನಗೇನಾಗಬೇಕು ,, ಎಂದು ಕೇಳಿದನು.

ಶಕ್ತಿಗೆ ಬೇಕಾದುದೇ ಇದು. ಆಕೆಯು ಬುದ್ಧಿಶಾಲಿನಿಯಾದುದರಿಂದ ತಾನು ಮೊದಲು ಮಾತಾಡದೆಯೇ ಆತನ ಸಂಗತಿಯನ್ನು ಗುರುತರಿತು '' ನಾನು ಸನ್ಯಾಸಿನಿಯು. ನನಗೇನು ಬೇಕಾದುದು? ಠಾಕೂರರೇ! ಆದರೂ ವೊಂದುಸಲ ರಾಣಿಯನ್ನಾದರೂ ರಾಯನನ್ನಾದರೂ ನೋಡಬೇಕೆಂಬ ಕುತೂಹಲವಿದೆ. ಅವರೊಂದಿಗೆ ಕಲಹವನ್ನು ಕುರಿತು ಕೆಲವು ರಹಸ್ಯಗಳನ್ನು ಹೇಳಬೇಕಾಗಿರುವುದು.'' ಎಂದು ಹೇಳಿದಳು.

ಮಹಾರಾಣಿಯು ಯೋಗಿನಿಗಳಾರೂ ಅರಸನನ್ನು ನೋಡಲಾಗದೆಂದು ಕಠಿಣ ಶಾಸನವಮಾಡಿರುವಳಲ್ಲವೆ? ಯೆಂದಾಲೋಚಿಸಿ.

'' ಆ ರಹಸ್ಯವೇನೋ,ನನ್ನೊಡನೆ ಹೇಳಬಾರದೇ ?,, ಯೆಂದು ಕೇಳಿದನು. ಶಕ್ತಿಯು, '' ಹಾಗಾಗದು ಅವಿದ್ದರೆ ವೊದಲೇ ಹೇಳುತಿದ್ದೆನು.'' ಪಾರ್ವನು ಸ್ವಲ್ಪಯೋಚಿಸಿ ನಾನು ನನ್ನ ಹೆಂಡಿರೊಡನೆ ಮಾತಾಡುವೆನು. ಆಕೆಯಿಂದ ನಿನ್ನ ಕೆಲಸ ಕೈಗೂಡಬಹುದು. ಅಂಜದೆ ನಂನೊಡನೆಬಾ.,,

ನಿರುಪಮೆಯನ್ನಾದರೂ ಮಹಾರಾಜನ ತಾಯಿಯನ್ನಾದರೂ ನೋಡಲೇ ಬೇಕೆಂಬ ಕುತೂಹಲವು ಶಕ್ತಿಗಿಲ್ಲದಿದ್ದರೂ, ಮಹಾರಾಜನನ್ನು ಮಾತ್ರವೇ ಕೇಳಿದರೆ ಠಾಕೂರನಿಗೆ ಅನುಮಾನ ಉಂಟಾದೀತೆಂದು ಹಾಗೆ ಹೇಳಿದಳು.

ಮಹಾರಾಜನಿದ್ದಲ್ಲಿಗೆ ಹೋದಾಗ, ತನ್ನನ್ನೊಂದುಬಾರಿ ಸ್ವರ್ಗಕ್ಕೇರಲೆತ್ತಿ ಮರಳಿ ಪಾತಾಳಕ್ಕೆ ತಳ್ಳಿ ತುಳಿದಾತನು. ಆಗ ಶಕ್ತಿಗೆ ಆತನು

ಹೇಗೆ ಕಾಣಿಸುವಸು ? ಆಕೆಯೊಂದು ಪಟಕುಟೀರದ ಬಳಿಯಲ್ಲಿ ನಿಂತು ತೆರೆಯು ಸ್ವಲ್ಪ ತೆಗೆದಿದ್ದುದರಿಂದ ಒಳಗೆ ಬಗ್ಗಿನೋಡಿದಳು. ಒಳಗಿನ ಮಂಚದಮೇಲೊಂದು ಶಿಶು ನಿದ್ರಿಸುತಿದ್ದಿತು. ಅದು ಎರಡುವರುಷ ವಯಸ್ಸಿನದು. ತಂದೆಯಾದ ಗಣೇಶದೇವನು ಮಂಚದಮೇಲೆಯೇ ತಲೆಯ ಕೆಳಗೆ ಕೈಯಿಊರಿ ಮಲಗಿ ಕುವರನನ್ನು ಸಪ್ರೇಮವಾಗಿ ನೋಡುತಿದ್ದನು. ಆತನು ನಿದ್ರಿಸುತಿದ್ದ ಮೊಗುವನ್ನು ಮುದ್ದಾಡುತಿದ್ದನು. ಶಾಂತಮೂರ್ತಿಯಾದ ನಿರುಪಮೆಯು ಮಗ್ಗುಲಲ್ಲಿ ನಿಂತು ಕೊನೆಯುಗುರಿನಿಂದ ತಲೆಗೂದಲನ್ನು ನೀವಿಕೊಳುತ ಭಕ್ತಿಯೊಡನೆ ಪತಿಯ ನಗೆಮೊಗವನ್ನು ವೀಕ್ಷಿಸುತಿದ್ದಳು. ಆಹಾ ! ಯೆಂತಹ ನಿಸ್ಸೀಮ ಪ್ರೇಮ ! ಮಾನವಕೋಟಿಗೆ ಅಂತಹ ಸೌಖ್ಯವನ್ನೂ ಆನಂದವನ್ನೂ ಉಂಟುಮಾಡುವುದು ದಿವ್ಯವಾದ ಪ್ರೇಮವೆ ಅಲ್ಲವೆ ! ಇಲ್ಲಿ:—

ಪಟಕುಡ್ಯಕ್ಕೆ ಮೈಯೊರಗಿಸಿ ಭಗ್ನಮನೋರಥಳಾಗಿ ನಿರಾಶಾವಶಳಾದ ಯಾಚಕಜೀವಿಯೊಬ್ಬಳು ನಿಂತಿರುವಳು. ಒಳಗೆ ರಾಜನು ಒಂದು ಮುದ್ದಿಡುವಾಗ ಆಕೆಯ ಭಗ್ನಹೃದಯಕ್ಕೊಂದು ಗಾಯವಾಗುತಿದ್ದಿತು. ಆಕೆಯೊಂದುಸಲ ನಕ್ಕರೆ ಅದು ಆ ಗಾಯಗಳಲ್ಲಿ ವಿಷವನ್ನು ಸುರಿದಂತಾಗುತಿದ್ದಿತು. ಹಾ ! ಭಗವಂತಾ ! ಅದೆಂದೆಂದಿಗೂ ಹೀಗೆಯೇ ಇರಬೇಕೆ? ಒಬ್ಬರು ಸುಖಪಡುತಿರುವಾಗ ಇನ್ನೊಬ್ಬರು ದುಃಖಿಸುತಿರಬೇಕೆ ? ಹೀಗೆಯೇ ನಡೆಯುತಿದೆ. ಕಾಲವು ಕಳೆದು ಹೋಗುತಿದೆ. ದುಃಖಪಡುವರು ದುಃಖಭಾಗಿಗಳಾಗುತಿದಾರೆ.

ತಾನು ಬರುವ ವರೆಗೆ ಶಕ್ತಿಯನ್ನು ಕಾದಿರತಕ್ಕುದೆಂದು ಹೇಳಿ ರಂಗಿಣಿಯು ಒಳಹೊಕ್ಕು, ಮರಳಿಬಂದು ಅರಸಿನಪ್ಪಣೆಯಂತೆ ಒಳಗೆ ಬರಹೇಳಿ ಕರೆದಳು. ಅದಕ್ಕೆ ಶಕ್ತಿಯು "ನಾನು ಅರಸಿನೊಡನೆ ರಹಸ್ಯವಾಗಿ ಮಾತನಾಡಬೇಕು. ಮಹಾರಾಜನನ್ನೇ ಇಲ್ಲಿಗೆ ಬರಮಾಡು." ಎಂದು ಹೇಳಲು ರಂಗಿಣಿಯು ಒಳಗೆ ಹೋಗಿ ಆ ಕ್ಷಣದಲ್ಲೆ ಅರಸನು ಹೊರಗೆಬಂದನು.

"ಯುದ್ಧಸಂದರ್ಭದಲ್ಲಿ ಕೆಲವು ರಹಸ್ಯಗಳನ್ನು ಹೇಳಬೇಕೆಂದಿರು

ವೆಯುಂತೆ. ಅವುಗಳನ್ನಿಲ್ಲಿ ನಿರ್ಭಯದಿಂದ ಹೇಳಬಹುದು" ಎಂದು ಅರಿಸನು ನುಡಿದನು.

ಶಕ್ತಿಯು ತಾನು ಬಂದ ಕಾರ್ಯವು ಬಹು ಮುಖ್ಯವಾದುದೆಂಬದಾಗಿ ತೋರ್ಪಡಿಸುತ ತನ್ನ ಕಂಠಸ್ವರವನ್ನು ಬದಲಾಯಿಸಿ "ನಾನಿಲ್ಲಿ ಹೇಳಲಾರೆನು. ತಾವು ಆ ಕೆರೆಯಬಳಿ ಬರುವಿರಾ ?" ಎಂದು ಪ್ರತ್ಯುತ್ತರಕ್ಕೆ ನಿರೀಕ್ಷಿಸದೆಯೆ ಆಕೆಯು ಹೊರಟುಹೋಗುತಲೆ ರಾಜನೂ ಆಕೆಯನ್ನು ಹಿಂಬಾಲಿಸಿದನು. ತಟಾಕವನ್ನು ಸಮೀಪಿಸಿದೊಡನೆಯೆ ತನ್ನ ಮೇಲ್ಮುಸುಕನ್ನು ಹಾರಬಿಡಿಯಲು ಆಕೆಯ ಸುಂದರವದನೇಂದುವು ಆ ಬೆಳದಿಂಗಳಲ್ಲಿ ಚಂದವಾಗಿ ಪ್ರಕಾಶ ಪಟ್ಟಿತು. ಚಂದ್ರನೇ ಇಳಿದುಬಂದು ಕಾಲ್ಗಳಮೇಲೆ ಬಿದ್ದರೂ ಗಣೇಶದೇವನು ಅಷ್ಟು ಆಶ್ಚರ್ಯವನ್ನು ಹೊಂದದಿರ್ರುವನು. ಮೊತ್ತಮೊದಲು ನಿರ್ವಿಣ್ಣನಾಗಿ ಸ್ವಲ್ಪ ಹೊತ್ತಿನಮೇಲೆ ಸ್ತಿಮಿತತೆಯಿಂದ ಪಕ್ಕಕ್ಕೆ ಹೋಗಿ ತಿರಸ್ಕಾರಭಾವದಿಂದ "ಮುಸಲ್ಮಾನೀ ! ಇಲ್ಲಿಗೇಕೆ ಬಂದಿರುವೆ ?" ಎಂದು ಕೇಳಿದನು.

ಈ ಕಠೋರ ವಾಕ್ಯವು ಆಕೆಗೆ ಅಮಿತವಾದ ನಾಚುಗೆಯನ್ನುಂಟಾಗಿಸಿತು. ಆಕೆಯು ಜನ್ಮಮಧ್ಯದಲ್ಲಿ ಯಾವಾಗಲೂ ಇಂತಹ ಅಪಮಾನವನ್ನು ಹೊಂದಿರಲಿಲ್ಲ. ಆಕೆಗೀಗ ಹಿಂದುವೆನಿಸಿಕೊಳುವಿಕೆಗೆ ಯಾವ ಬಗೆಯಾದ ಅಧಿಕಾರವೂ ಇಲ್ಲ. ಅಂತಹ ತಾನೀಗ ದಿನಾಜಪುರಾಧಿನಾಥನನ್ನು ಹೇಗೆತಾನೆ ಸಮೀಪಿಸಬಲ್ಲಳು. ಚಿರಕಾಲದಿಂದ ಕಷ್ಟಗಳನ್ನು ಅನುಭವಿಸಿದವಳಾದುದರಿಂದ ಆಕೆಯು ತಾಳ್ಮೆಯುಳ್ಳವಳಾಗಿ ರಾಜಕುಮಾರನ ತಿರಸ್ಕಾರವನ್ನು ಸಹಿಸುತ "ರಾಜಕುಮಾರನೆ ! ನಾನಿನ್ನೂ ಕರಣತ್ರಯದಿಂದಲೂ ನಿನ್ನವಳೆ ! ಎಂದು ನಂಬು; ನನ್ನನ್ನು ನೀನೊಂದು ಪರಿಯಾಗಿ ತಿರಸ್ಕರಿಸುತಿರುವೆ; ಮುಸಲ್ಮಾನರ ಅಂತಃಪುರಪ್ರವೇಶಕ್ಕಿಂತಲೂ ಬೇರೆಯಾವ ಪಾತಕವನ್ನೂ ಕಂಡು ನಾನರಿಯೆನು."

ಹಿಂದಿನ ಇವರಿಬ್ಬರ ಸಮಾವೇಶಕ್ಕೂ ಇದಕ್ಕೂ ಅಪರಿಮಿತವಾದ ವೆತ್ಯಾಸವುಂಟು. ಆಗ ಪ್ರಶಾಂತವಾದ ವನದಲ್ಲಿ ಒಂಟಿಯಾಗಿ ಆಕೆಯು

ನ್ನು ಕಲೆತು ಹೃದಯವೆಲ್ಲವೂ ಪ್ರೇಮಪರಿಪೂರಿತವಾಗಿದ್ದಿತು. ಈಗಲೋ, ನಿಶ್ಚಲವಾದ ಹೃದಯದಿಂದ ಆಕೆಯೆದುರಿಗೆ ನ್ಯಾಯ್ಯಾಧಿಪನಂತೆ ನಿಷ್ಪಕ್ಷಪಾತಬುದ್ಧಿಯಿಂದ ನಿಂತು "ನೀನು ತುರಕರ ಅಂತಃಪುರದಲ್ಲಿ ನಿವಾಸವಾಗಿರುವೆ, ನೀನು ನನ್ನ ಪತ್ನಿಯೆಂದೆಂದಿಗೂ ಆಗಲಾರೆ. ನಿನ್ನ ಮನದ ಅಂತಹ ಆಸೆಯನ್ನು ಇನ್ನು ಸಂಪೂರ್ಣವಾಗಿ ಬಿಟ್ಟುಬಿಡು. ನೀನು ಮಾಡಿದ ಕಾರ್ಯಕ್ಕೆ ಪ್ರತಿಕ್ರಿಯೆಯನ್ನು ನಾನೇನೂ ಮಾಡಲಾರೆನು. ನಾನು ನಿನ್ನನ್ನು ನನ್ನ ಪತ್ನಿಯಾಗಿ ಪರಿಗ್ರಹಿಸಲೆಣಿಸಿದೆನಾದರೂ ನೀನು ನನ್ನನ್ನು ತಿರಸ್ಕರಿಸಿ, ಬಿಟ್ಟು ಹೋದೆ. ಆ ಮರುದಿನ ಬೆಳಿಗ್ಗೆಯೇ ನಿನಗೋಸ್ಕರ ಬಂದೆನು. ಆದರೂ ಆಸಮಯವು ನೀನು ಗಯಜುದ್ದೀನನಿಗೆ ಜೇಗವಾದೆಯೆಂದು ತಿಳಿದುಕೊಳುವುದಕ್ಕೆ ಮಾತ್ರ ವಿನಿಯೋಗವಾಯಿತು."

ಶಕ್ತಿ—"ನಿಮ್ಮ ತಾಯನ್ನು ನಿರಾಕರಿಸಿ ನನ್ನನ್ನು ಪರಿಗ್ರಹಿಸಿರುತಿದ್ದೆಯಾ?"

ರಾಜ—"ತಪ್ಪದೆ ಕೈಹಿಡಿದಿದ್ದೆನು."

ತರುಣಮಿಾರಿತು. ಸಮಯ ಮಿಾರಿದ ತರುವಾಯವಾದರೂ ಶಕ್ತಿಗೆ ತನ್ನ ತಪ್ಪು ತನಗೆ ತಿಳಿಯಲಿಲ್ಲ. ಇನ್ನೊಂದು ದಿನದ ಮಟ್ಟಿಗೆ ತಾಳ್ಮೆಯಿಂದ ಇದ್ದಳಾಗಿದ್ದರೆ ಯೆಲ್ಲವೂ ಕ್ರಮಪಡುತಿದ್ದಿತು. ಎಲ್ಲ ಗ್ರಹಗಳೂ ಆತನಿಗೆ ವಕ್ರೀಭೂತವಾದ ಬಳಿಕ, ದೇವತೆಗಳು ಕೂಡ ಇನ್ನು ನಿನಗೆ ದಕ್ಕುವನಲ್ಲವೆಂದು ಹೇಳಿದ ತರುವಾಯ, ಮನಸೆಲ್ಲವೂ ಆ ಮೂಲಾಗ್ರವಾಗಿ ಕಳವಳಿಸಿ ವಿಧಿಗೆ ವಶವಾಗಿ ಹೋಗಿ ಪ್ರಯತ್ನಿಸಿದ್ದರೂ ಸಾಗಲಾರದ ಶಕ್ತಿಗೆ ಶಕ್ತಿಯೂ ತಗ್ಗಿಬಿಟ್ಟಿತು. ಈಗ ಆಕೆಗೆ ಉಂಟಾದ ಪಶ್ಚಾತ್ತಾಪದಿಂದ ಹೃದಯವು ಭಿನ್ನವಾಗಿ ಹೀನಸ್ವರದಿಂದ "ಇನ್ನು ಆಸೆಯಿಲ್ಲವೇ?" ಎಂದು ಮಾತ್ರ ನುಡಿದು ಮೂರ್ಛೆಗೊಂಡಳು.

'ನೀನಾರನ್ನು ವರಿಸಿದೆಯೋ ಆತನಬಳಿಗೆ ಹೋಗು. ಆತನೇ ನಿನಗೆ ನ್ಯಾಯವಾಗಿ ಶರಣಾಗತಕ್ಕವನು."

ಆಕೆಯ ಹೃದಯದಲ್ಲಿ ಗಾಯವಾಗದಿದ್ದ ಪ್ರದೇಶವು ಸೂಜಿಮೊನೆಯಷ್ಟು ಮಟ್ಟಿಗಾದರೂ ಯಿಲ್ಲ. ಈ ನಿಷ್ಕಾರಣವಾದ ಕಠೋರವಾಕ್ಕುಗಳು ಆಕೆಯ ಪ್ರಾಣಗಳನ್ನು ತಲ್ಲಣಿಸುವಂತೆ ಮಾಡಿ ಬಿಟ್ಟಿತು. ಆಗ ಆಕೆಗೆ ಆಶೆ ಲೇಶವಾದರೂ ಇಲ್ಲ. ಬುದ್ಧಿಪೂರ್ವಕವಾಗಿ ತಂದಿಟ್ಟುಕೊಂಡ ಆಕೆಯ ಹಿಂಸೆಗಳನ್ನು ಯಾರುತಾನೇ ತಪ್ಪಿಸಬಲ್ಲರು? ರಾಜನು ಕಾಪಾಡ ಹೋದ ಪಕ್ಷದಲ್ಲಿ ಆಕೆಯೊಡನೆ ಆತನದು ಕೂಡ ಅಧೋಗತಿ ಯಾಗುವುದು. ತನಗೆ ತಾನು ಮಾಡಿಕೊಂಡ ಮುಪ್ಪನ್ನು ತಪ್ಪಿಸಲು ದೈವಕ್ಕಾದರೂ ಅಳವಲ್ಲದೆ ಯಿರುವುದೆಂಬ ಸಂಗತಿಯು ಆಕೆಯ ಹೃದಯದಲ್ಲಿ ಚೆನ್ನಾಗಿ ನೆಟ್ಟಿತು. ಇದುವರೆಗೆ ಆಕೆಗೆ ಮೊದಲಿನಿಂದಲು, ಯಾವ ಕೆಲಸ ಮಾಡಿದಾಗಲು ಕೂಡ ಬಿಟ್ಟು ಬಿಡಲಾರದ ಸ್ವಾಭಿಮಾನ ಗರ್ವವೇ ಅಲ್ಲದೆ ವುಳಿದುವೆಲ್ಲವೂ ನಾಶವಾಗಿ ಬಿಟ್ಟಿತು. ಈಗ ಆಕೆಯ ಗತಿಯು ಸಮುದ್ರ ಮಧ್ಯದಲ್ಲಿ, ದಾರಿತಪ್ಪಿ ದಿಕ್ಪ್ರದರ್ಶಿನಿಯೂ ಪಟವೂಕೂಡ ಕಳೆದು ಕೊಂಡವನ ದೆಸೆಯಂತಿದ್ದಿತು. ಗರ್ವವೂ ಬಲವೂ ಸ್ಥೈರ್ಯ ಬುದ್ಧಿಯೂ, ಯಿವೆಲ್ಲವೂ ವೊಂದೇಬಾರಿ ಆಕೆಯನ್ನುಬಿಟ್ಟು ಹೋಗಿ ಘೋರವಾದ ಪೆಟ್ಟಿನಿಂದೊಂದು ಸಲ ಕಣ್ಣಿಂದ ರಕ್ತ ಬಾಷ್ಪಗಳು ಪ್ರವಹಿಸೆ ಬಿಕ್ಕಿ ಬಿಕ್ಕಿ ಹೀಗೆ ರೋದಿಸಲಾರಂಭಿಸಿದಳು. "ಮಹಾರಾಜನೇ! ನನ್ನನ್ನು ಅವಮಾನಪಡಿಸಿ ಬಿಟ್ಟುಬಿಡದಿರು. ನನ್ನ ಮನಸ್ಸುವೊಲ್ಲದವನೊಡನೆ ನಾನೆಂತು ನಿವಸಿಸಬಲ್ಲೆನು? ಲೋಕವನ್ನು ಲಕ್ಷ್ಯಮಾಡದೆ ನಿನ್ನ ಅಂತರಾತ್ಮನನ್ನುದ್ಧರಿಸು. ಭಗವಂತನ ದೃಷ್ಟಿಯಲ್ಲಿ ನಮ್ಮ ಸಮಾಗಮವು ಪಾಪಹೇತುವಾದುದಲ್ಲ."

ರಾಜಕುಮಾರನಿಗೆ ಮಿತಿಮೀರಿದ ಕನಿಕರ ಹುಟ್ಟಿತು. ಆದರೂ ಮಾಡತಕ್ಕುದಾವುದೂ ಯಿಲ್ಲದುದರಿಂದ ವ್ಯಸನ ಭಾಗಿನಿಯಾದ ಆಕೆಯನ್ನುನೋಡಿ ಬಾಯ್ಮಾತು ಹೊರಡದೆ ಸ್ವಲ್ಪ ಹೊತ್ತು ಸುಮ್ಮನಿದ್ದು ಕೊನೆಗೆ "ಶಕ್ತೀ! ಕೇಳು, ನನ್ನನ್ನು ಯೆಷ್ಟು ಪ್ರಾರ್ಥಿಸಿದರೂ ನಾನು ನಿನ್ನನ್ನು ಗೃಹಿಣಿಯಾಗಿ ಪರಿಗ್ರಹಿಸಲಾರೆನು. ನನ್ನ ಪ್ರಾಣಗಳು ಹೋದರೂ ನಾನು ಹಾಗೆ ಮಾಡಲಾರೆನು. ಏಕೆಂದರೆಯಾ? ಹಾಗೆ ಮಾಡುವುದು ತಪ್ಪು. ಅನ್ಯಾಯ. ಪಾತಕ.

ನೀನೀಗ ವಿವಾಹಿತೆಯಾಗಿ ಯಿನ್ನೊಬ್ಬಾತನ ಗೃಹಿಣಿಯಾಗಿರುವೆ. " ಯೆಂದ್ಫ ನುಡಿಯಲು ಶಕ್ತಿಯು.

" ಇಲ್ಲ ಇಲ್ಲ ,, ಮಹಾರಾಜನೇ ! ಇಲ್ಲ. ನಾನು ವಿವಾಹಿತಳಾಗಿಲ್ಲ. ನೀನು ನನ್ನನ್ನು ಮದುವೆಯಾಗದಿದ್ದರೂ ನನ್ನನ್ನು ರಕ್ಷಿಸಿಯಾದರೂ ರಕ್ಷಿಸು. ನನ್ನನ್ನು ತಲೆತಗ್ಗಿಸುವಿಕೆಯಿಂದ ಜೀವಿಸುವಳನ್ನಾಗಿಸದಿರು " ಎಂದು ಹೇಳಲು ಶಕ್ತೀ ! ಸ್ಥೈರಿಸು. ಸ್ಥೈರಿಸು. ವಿವೇಕವನ್ನು ತಂದುಕೊಳ್ಳು. ನಿನ್ನ ಅಭೀಷ್ಟವಾತ್ರವೆಂದಿಗೂ ಸಾಗತಕ್ಕುದಲ್ಲ. ಇನ್ನು ನಿನ್ನ ದಾರಿ ನಿನ್ನದು. ನನ್ನದಾರಿ ನನ್ನದೇ ಅಲ್ಲದೆ ಅವು ಕಲೆಯಲಾರದು. ನಾನು ನಿನ್ನನ್ನು ಅವನಿಂದ ಬೇರ್ಪಡಿಸಿ ಕೈಹಿಡಿದೆನಾದರೆ ನಿನಗೂ ನನಗೂ ಕೂಡ ಅಪಖ್ಯಾತಿ ಬರುವುದು. ನೀನು ಬುದ್ಧಿಪೂರ್ವಕವಾಗಿ ಅವನನ್ನು ಸೇರಿರುವೆ. ಆದುದರಿಂದ ನ್ಯಾಯಶಾಸ್ತ್ರವನುಸರಿಸಿಯೂ, ನೀತಿಶಾಸ್ತ್ರವನುಸರಿಸಿಯೂ, ಆತನವಳಾಗಿರುವೆ. ಭರ್ತನಿಗುಳ್ಳ ನ್ಯಾಯವಾದ ಸೊತ್ತನ್ನು ನಾನೆಂತು ಅಪಹರಿಸುವೆನು ? ಧರ್ಮವಿರುದ್ಧವಾದ ಅನುಬಂಧ ನಿಲ್ಲಲಾರದು. ಸ್ತ್ರೀಗೆ ಪತಿಯು ನ್ಯಾಯವಾದ ರಕ್ಷಕನು. ಸ್ತ್ರೀಯು ಧರ್ಮಬದ್ಧಳಾಗಿರಬೇಕು. ಆಕೆಗೆ ನಾಥನೇ ಸಮಸ್ತವು. ಆದುದರಿಂದ ನೀನು ನಿನ್ನ ಹೃದಯವನ್ನು ಆತನಿಗರ್ಪಿಸು. ನಿನ್ನ ಧರ್ಮವನ್ನು ನೀನು ನೆರವೇರಿಸಲು ಪ್ರಯತ್ನಿಸು. ಅದರಿಂದ ನಿನಗೆ ತಕ್ಕ ಧೈರ್ಯವುಂಟಾಗಿ ಭಗವಂತನೂ ಸಹಾಯವಾಗುವನು. " ಯೆಂದು ಹೇಳಿದನು.

ಆದರೆ ಈ ಉಪದೇಶವು ಶಕ್ತಿಗೆ ಬೋಧೆಗೆಬರಲಿಲ್ಲ. ತಾನು ಯಾವಕೆಲಸಕ್ಕೂ ವುಪಯೋಗವಿಲ್ಲದವಳಾಗಿ ನಿರಾಕರಿಸಲ್ಪಟ್ಟೆಂತೆ ಆಕೆಯ ಯೆಣಿಕೆಯು. ಈ ಯೆಣಿಕೆಯಿಂದ ಆಕೆಗೆ ನಿರಾಶೆಯುಂಟಾಯಿತು. ಆದರೂ ಮರಳಿ ಆಕೆಯ ಸಹಜವಾದ ಧೈರ್ಯವು ತಲೆದೋರಿ ಪ್ರತ್ಯುತ್ತರ ಕೊಡುವಾಗ ಕಣ್ಣೀರಿಲ್ಲದೆ ಗಾಂಭೀರ್ಯವಾಗಿ ಮಾತನಾಡಿದಳು.

" ಗಣೇಶದೇವಾ ! ನಿನಗೆ ನಾಚುಗೆಯಿಲ್ಲ. ನಾನು ನಿಭಾಗ್ಯಳಾಗಿನಿನ್ನಬಳಿಗೆ ಬಂದಂತೆ ನೀನು ಯೋಚಿಸಿರುವೆ. ನೀನು ನನ್ನ ಗೌರವವನ್ನೂ ಪಾವನತ್ವವನ್ನು ಕಾಪಾಡುವೆಯೆಂದು ಬಂದೆನು. ಆದರೆ ನನ್ನನ್ನು ಕಾಪಾಡುವದಕ್ಕೆ ಲೋಕಕ್ಕೆ ಹೆಚ್ಚಾಗಿ ಹೆದರುತಿರುವೆ. ಆದುದರಿಂದ ನಿನ್ನ ವಿಷಯವಾಗಿ ನನ್ನ ಅಂತರಂಗದಲ್ಲಿ ಯಿದುವರೆಗಿರುವ ಮರಿಯಾದೆಯೆಲ್ಲವನ್ನೂ ಹೋಗಲಾಡಿಸಿಕೊಳುತಿದ್ದೇನೆ. ಯಿನ್ನು ನಿನಗೆ ನ್ಯಾಯವೆಂದು ತೋರಿದುದೂ; ಲೋಕವು ಗೌರವವೆನುವುದೂ, ಯಾವುದೋ ಅದನ್ನು ಮಾಡುವೆನು. ಆದರೆ ಯಿ ಸಂಬಂಧವಾದ ಪಾತಕಗಳೇನಿದ್ದರೂ ನನ್ನದಲ್ಲ. ನಿನ್ನಿಂದ ಹಾಗೆ ಮಾಡಿಸಿದವರದಾಗುವುದು. " ಯೆಂದು ಹೇಳಿ ಗಿರಕ್ಕನೆ ಹಿಂದಿರುಗಿ ಹೊರಟು ಹೋದಳು. ಗಣೇಶದೇವನು ಮಾತ್ರ ಆ ಬೆಳದಿಂಗಳಲ್ಲಿ ಪುಷ್ಕರಿಣೀ ತೀರದೊಳು, ಬಹಳ ಹೊತ್ತು ಕುಳಿತಿದ್ದನು.

ಜಯಲಕ್ಷ್ಮಿಯ ಕೈಹಿಡಿದು ಬರುತಿರುವ ಗಯಜುದ್ದೀನನು ತನ್ನ ವಧುವನ್ನು ಆದರಿಸುವುದಕ್ಕೆ ತಕ್ಕ ಪ್ರಯತ್ನಗಳಲ್ಲಿದ್ದನು. ಆಕೆಯೂ, ಮೊದಲಿನ ವೇಷವನ್ನುತೆಗೆದು ಹಾಕಿ ಉಚಿತಾಲಂಕಾರಗಳಿಂದ ಆತನಿಗಾಗಿ ಯೆದುರು ನೋಡುತಿದ್ದಳು. ಶೋಭನವಸ್ತ್ರಗಳನ್ನು ಧರಿಸಿ ರಾಣಿಯಂತೆಯೇ ಆಕೆಯು ಗಯಜುದ್ದೀನನನ್ನು ಪ್ರತ್ಯುತ್ಥಾನಮಾಡಿದಳು. ಸುಲ್ತಾನನು ತನ್ನ ಕಿರೀಟವನ್ನು ತೆಗೆದು ಆಕೆಯ ಪಾದಗಳಮೇಲಿಟ್ಟು " ಪ್ರೇಯಸೀ! ನನ್ನ ರಾಜ್ಯವೆಲ್ಲವನ್ನೂ ನಿನ್ನ ಪಾದಗಳಿಗರ್ಪಿಸುತಿದ್ದೇನೆ. ಅನುಗ್ರಹಿಸಿ ಈ ಕಿರೀಟವನ್ನು ಪರಿಗ್ರಹಿಸಿ ನಿನ್ನ ಸೇವಕನನ್ನು ಕಾಪಾಡು " ಯೆಂದು ಹೇಳಿದನು. ಆಕೆಯ ಹೃದಯವು ಇನ್ನೂ ಹಿಂದೆಗೆಯುತಿದ್ದರೂ ಆಕೆಯು ಅತನ ಆಲಿಂಗನಕ್ಕೆ ವೊಳಗಾಗಿ ತಡವರಿಸುವ ಮಾತುಗಳಿಂದ " ನಾನು ನಿನ್ನವಳಾಗಿರುವೆನು " ಯೆಂದು ಹೇಳಿದಳು. ಆ ರಾತ್ರಿಯಲ್ಲಿಯೇ ಶಕ್ತಿಯನ್ನು ಸುಲ್ತಾನನ ಸಹಧರ್ಮಿಣಿಯಾಗಿ ಮಾಡಿದ ಶುಭಕಾರ್ಯಗಳೆಲ್ಲವೂ ನಡೆಸಲ್ಪಟ್ಟುವು.



# ಪ್ರಕರಣ ೨೯.

ದಿನಾಜಪುರ ಸಂಸ್ಥಾನವು ಗದ್ದಲಗಳಾವುವೂ ಇಲ್ಲದೆ ಶಾಂತವಾಗಿದ್ದಿತು. ಸುಲ್ತಾನ ಸಿಕಂದರುಷಾ ಸತ್ತಕೂಡಲೇ ಕಲಹಗಳೆಲ್ಲವೂ ಕೊನೆಗಂಡಿತು. ದಿನಾಜಪುರಾಧಿಪನು ಹೊಸ ಸುಲ್ತಾನನೊಡನೆ ಸಂಧಿಮಾಡಿಕೊಂಡುದರಿಂದ ಆತನಿಗೆ ತನ್ನ ಪ್ರಜೆಗಳ ಕ್ಷೇಮವನ್ನು ವಿಚಾರಿಸುವುದಕ್ಕೆ ಅವಕಾಶ ದೊರೆಯಿತು. ಯುದ್ಧದಿಂದ ನಷ್ಟವಾದುದೆಲ್ಲವನ್ನೂ ಮರಳಿ ಜೊತೆಗೊಳಿಸಲ್ಪಡುತಿದ್ದಿತು. ಹೊಸ ಹೊಸ ಕೋಟೆಗಳು, ಹೊಸ ಹೊಸ ಕಟ್ಟಡಗಳೂ, ಹೊಸ ಹೊಸ ತೋಟಗಳೂ ನಿರ್ಮಿಸಲ್ಪಟ್ಟುವು. ಪ್ರಜೆಗಳಿಗೆ ಯುದ್ಧದಿಂದುಂಟಾದ ನಷ್ಟಗಳನ್ನು ಮಹಾರಾಜನು ಅರಮನೆಯ ಬೊಕ್ಕಸದಿಂದ ಕೊಡಿಸಿದನು. ಸತ್ತವರ ಪ್ರಾಣಗಳೊಂದರ ವಿನಾ ಮಿಕ್ಕುಳಿದುವೆಲ್ಲವೂ ಮರಳಿ ಯಥಾಸ್ಥಿತಿಗೆ ತರಲ್ಪಟ್ಟಿತು. ವರುಷವೂ ಆರುತಿಂಗಳು ನಡೆದ ಯುದ್ಧವು ಯಾವಾಗಲೋ ನಡೆದು ಸ್ವಪ್ನಪ್ರಾಯವಾಗಿ ತೋರುವಂತೆ ಪ್ರಜೆಗಳು ನೂತನಸಂಪದಭಿವೃದ್ಧಿಯಿಂದ ಮೆರೆಯುತಿದ್ದರು.

ನದಿಯ ಪಕ್ಕದೊಳಿರುವ ರಾಜನಗರಿಯ ಬಳಿಯಲ್ಲಿ ಹೊಸದಾಗಿ ಒಂದುತೋಟವು ನಿರ್ಮಿಸಲ್ಪಟ್ಟಿತು. ನದಿಯಲ್ಲಿ ಸ್ನಾನಮಾಡುವಂತವರು ಆ ಉದ್ಯಾನವನದೊಳಗಿಂದ ಹೋಗುತಿರುವರು. ಅಲ್ಲೊಂದುದಿನ ಪ್ರಾತಃಕಾಲದಲ್ಲಿ ಸೂರ್ಯನು ಚೆನ್ನಾಗಿ ಪ್ರಕಾಶಿಸುತಿದ್ದನು. ಅರಮನೆಯ ಗಾಯಕರು ಬಿಲಹರಿಯನ್ನು ಹಾಡುತಿದ್ದರು. ತೋಟದವನೊಬ್ಬನು ಸಣ್ಣಗೆ ಸಂಗೀತವನ್ನು ಹಾಡುತ ಕೆಲಸಮಾಡುತಿದ್ದನು. ಯುವಕನಾದ ಫಕೀರನೊಬ್ಬನುಸಮೀಪದಲ್ಲಿದ್ದ ಗಿಡಗಳಲ್ಲಿ ಹೂ ಬಿಡಿಸುತಿದ್ದನು. ಅವನು ಸ್ವಲ್ಪದೂರದಿಂದೆ ಬರುತಿರುವ ಭೇರೀಧ್ವನಿಯನ್ನು ಕೇಳುವಂತಿದ್ದಿತು. ಆ ದಾರಿಯಲ್ಲಿ ಹೋಗುತಿದ್ದವನೊಬ್ಬನು ಈ ಫಕೀರನನ್ನು ನೋಡಿ ಮನೆಯಲ್ಲಿ ಹಾಸಿಗೆಯೊಳಗಿರುವ ತನ್ನ ಮಗುವಿನ ಸಂಗತಿಯನ್ನು ಇವನನ್ನು ಕೇಳಬೇಕೆಂದು ಯೋಚಿಸುತಿದ್ದನು. ಇನ್ನೊಬ್ಬನು

ಹೊಗೆಯೇ ಅವನನ್ನು ಮಾತಾಡಿಸುವುದಕ್ಕೆ ಹೋಗಿ ಪಖೀರನನ್ನು ನೋಡಿ ಅನುಮಾನದಿಂದ ತನ್ನೊಳುತಾನೆ ತಲೆದೂಗಿದನು.

ಮೊದಲನೆಯವನು ಅದನ್ನು ನೋಡಿ ಬೇಗಬೇಗ ಅವನಬಳಿಗೆ ಹೋಗಿ "ಈ ಫಖೀರನು ನಿನಗೆ ಪರಿಚಯಸ್ತನಾಗಿರಬಹುದು. ಅವನ ಬಳಿಗೆ ನನ್ನನ್ನು ಕರೆದುಕೊಂಡು ಹೋಗುವೆಯಾ? ನಿನಗೆ ಪುಣ್ಯಬರುವುದು. ಐದುಮಂದಿ ಫಕೀರರಿಗೆ ಹರಕೆಯನ್ನು ಸಲಿಸಿ ಕಾಳಿಕಾಂಬೆಗೊಂದು ಮೇಕೆಯನ್ನು ಬಲಿಕೊಟ್ಟೆನು. ಇನ್ನೂ ನನ್ನ ಮೊಗುವಿಗೆ ಗುಣವಾಗಲಿಲ್ಲ."

ಅಷ್ಟರೊಳು ಮೂರನೆಯವನೊಬ್ಬನು. ಬಂದು "ನಗಾರೆಯ ಧ್ವನಿಯು ಯೆಷ್ಟು ಬಲವಾಗಿದೆ ನೋಡಿದಿರಾ ? ಈದಿನ ಅಮಾವಾಸ್ಯೆಯೇ? ಕಾಳೀಪೂಜೆಯು ನಡಿಯುತಿರುವುದೇ ? ಮೊದಲು ಪಾದುಷಾಹನ ಮೇಲೆ ದಾಳಿಹೋದಾಗಿನಿಂದೀಚೆಗೆ ಇಂತಹ ಭೇರೀಧ್ವನಿಯನ್ನು ಕೇಳಿರಲಿಲ್ಲ. ಅಬ್ಬಬ್ಬಾ ! ಆಗಿನ ಭೇರೀಧ್ವನಿಯನ್ನೇನೆಂದು ಹೇಳಲಿ ! ಈಗಲೂ ಯೆದೆ ಬಿರಿಯುತಿದೆ,, ಯೆಂದು ನಿಟ್ಟುಸಿರು ಬಿಟ್ಟನು.

ನಾಲ್ಕನೆಯವನು, ಅವೆಲ್ಲವೂ ಒಳ್ಳೆಯಕಾಲ. ದೇಶಾಭಿಮಾನವು ಹೇಗಿದ್ದಿತು ? ಒಬ್ಬ ಶತೃವನ್ನು ಕೊಲ್ಲಬೇಕಾದರೆ ಪ್ರಜೆಗಳೆಷ್ಟುಸ್ತಾರಿ ಪ್ರಾಣಅಪಾಯವಾದರೂ ಸಿದ್ಧರಾಗುತಿದ್ದರು. ಯೆಂತಹ ದಿನಗಳವು ?

ಇನ್ನೊಬ್ಬನು "ಅಹುದು ! ಇನ್ನು ಕೆಲವು ದಿನಗಳು ಹಾಗಿದ್ದರೇನಾಗುತಿದ್ದಿತೋ ? ಅದೃಷ್ಟವಶದಿಂದ ಅವರು ತಮ್ಮಷ್ಟಕ್ಕೆ ತಾವೆ ಹಿಂದಿರುಗದಿದ್ದರೆ ನಮಗೆ ತಿಂಡಿಯಿಲ್ಲದೆ ನಿಲಲಾರದೆ ಹೋಗುತಿದ್ದೆವು. ಅಬ್ಬಬ್ಬ! ಭೇರೀಧ್ವನಿಯು ಎಷ್ಟು ಬಲವಾಗಿ ಕೇಳಿಸುತಿರುವುದು ?

ಈ ಮೊಳಗಾಗಿ ಮೊಲನೆಯವನು ಎರಡನೆಯವನನ್ನು ನೋಡಿ "ನೀನು ಫಖೀರನನ್ನು ನೋಡಿದಾಗ ತಲೆದೂಗಿದುದೇಕೆ ? ಆತನ ಸಂಗತಿಯು ನಿನಗೇನಾದರೂ ತಿಳಿಯುವುದೋ ? ಹಾಗಿದ್ದರೆ ನನಗೆ ಸ್ವಲ್ಪ ತಿಳಿಸು" ಎಂದು ಕೇಳಿದನು.

ಎರಡನೆಯುವನು. " ಯಾರೊಡನೆಯೂ ಹೇಳುವುದಿಲ್ಲವಲ್ಲ ! ನನ ಗೆ ಭಾಷೆಮಾಡಿಕೊಡು. "

ಮೊದಲನೆಯುವನು. " ಯೆಂದೆಂದಿಗೂ ಹೇಳಲಾರೆನು. "

ಎರಡನೆಯುವನು. " ಆತನು ಫಖೀರನಲ್ಲ. ಸಹಬುದ್ದೀನನು. "

ಮೊದಲನೆಯುವನ ಮನಸ್ಸು ಗಾಬರಿಗೊಂಡು ಮಾಡಿದ ಪ್ರಮಾಣವನ್ನು ಮರೆತುಹೋಗಿ " ನಮ್ಮ ಸುಲ್ತಾನನ ಅವರಸಪುತ್ರ ಸಹಬುದ್ದೀನನೇ ? " ಯೆಂದು ಘಟ್ಟಿಯಾಗಿ ಕೂಗುತ ಕೇಳಿದನು. ರಹಸ್ಯವು ಹೊರಪಟ್ಟುಹೋಯಿತು. ಮತ್ತೊಬ್ಬನು " ಚಿಕ್ಕತಂದೆಯು ಅವನನ್ನು ಕೊಲ್ಲಲಿಲ್ಲವೆ? " ಯೆಂದು ಕೇಳದನು. ತಿಳಿದವನೊಬ್ಬನು " ಏಳುಮಂದಿ ಸೋದರರೂ ಹತರಾದರು. ಈಗ ಸುಲತ್ತಾನನು ಇವನನ್ನು ಕೊಲಿಸುವುದಕ್ಕೋಸ್ಕರ ಹುಡುಕಿಸುತಿದಾನೆ. ಆದರೂ ಆತನು ತಪ್ಪಿಸಿಕೊಂಡು ನಮ್ಮ ಮಹಾರಾಜನನ್ನು ಶರಣುಹೊಕ್ಕಿರುವನು. "

" ನಿನಗಿದೆಲ್ಲವೂ ಹೇಗೆ ತಿಳಿಯಿತು ? "

"ನನ್ನ ಹೆಂಡತಿಯು ಅಧಿಕಾರಿಯಾದ ಠಾಕೂರನ ಹೆಂಡಿರ ಬಳಿಯಲ್ಲಿ ಕೆಲಸವಮಾಡುತಿರುವಳು. ಅವಳಿಗೆ ಆಕೆಯು ಹೇಳಿದುದು. ಆದುದರಿಂದ ಇದು ನಿಶ್ಚಯವೇ ಇರಬಹುದು."

"ಹಾಗಾದರೆ ನಮ್ಮ ಕೆಲಸವು ಸಿದ್ಧವಾಗಿದೆ. ಆ ಧ್ವನಿಯು ಆಯುಧಗಳನ್ನು ಧರಿಸಬೇಕೆಂದೇ ಅಲ್ಲದೆ ಮತ್ತೊಂದಲ್ಲ. ಕನಲ್ನಸರ್ದಾರ್! ನೀನು ಯುದ್ಧವಾಗಬೇಕೆಂದು ಬಯಸುತಿರುವೆ. ಹಾಗೆಯೇ ಒದಗಿತು. ಮರಳಿ ರಕ್ತವು ಕಾಲುವೆಗಳಾಗಿ ಹರಿಯಬೇಕಾದುದೆ? ಮನೆಯಲ್ಲಿ ಮೊಗುವಿಗೆ ಅಸ್ವಸ್ಥವಾಗಿರುವುದೇ ? ಆಗಲಿ ಈಗ ಹಗೆಯೊಡನೆ ಹೋರಾಡುವವರಾರು ? ನನ್ನ ಮಗನೊಬ್ಬನು ಗತಿಸಿದನು. ಸತ್ತವನಿಗೆ ಅತ್ತು ಅತ್ತು ನನ್ನ ಹೆಂಡತಿಯೂ ಗತಿಸಿದಳು. ಯೆರಡನೆಯ ಮಗನು ಸಾಯುವುದಕ್ಕೆ ಸಿದ್ಧವಾಗಿರುವನು. ಮತ್ತಿನ್ನು ಯುದ್ಧವನ್ನು ಮಾಡುವವರಾರು ?

ಏನಯ್ಯ! ಬುದ್ಧಿಹೀನನೆ, ನೀನು? "ನಿನ್ನ ಹೆಂಡಿರು ಮಕ್ಕಳಿಲ್ಲದಿದ್ದರೆ ಮಹಾರಾಜನು ಯುದ್ಧವನ್ನೆ ಮಾಡಲಾರನೇನು? ನಿನಯಿಬ್ಬರು ಮಕ್ಕಳು ಯಿಲ್ಲದಿದ್ದರೆ ಯಿನ್ನು ದೇಶದಲ್ಲಿ ಮಾನವರೇ ಇಲ್ಲವೋ ಏನು?"

"ಸರಿಯೆ! ಇಷ್ಟವಾಗಿದ್ದರೆ ನೀನು ಯುದ್ಧವನ್ನು ಮಾಡು. ನಾವು ಮಟ್ಟಿಗೆ ಮಹಾರಾಜನ ಸನ್ನಿಧಿಗೆ ಹೋಗಿ ಒಬ್ಬನಿಗೋಸ್ಕರ ಸಾವಿರಾರು ಮಂದಿಯನ್ನು ಬಲಿಯಾಗಿ ಕೊಡಬಾರದು. ಸಹ ಬುದ್ಧೀನನನ್ನು ಸುಲ್ತಾನನಿಗೆ ಒಪ್ಪಿಸಿಬಿಡು ಎಂದು ಅರಿಕೆ ಮಾಡುವೆವು."

"ನೀನೇ ಮಹಾ ಬುದ್ಧಿಶಾಲಿಯೆಂದು ತಿಳಿದಿರುವೆಯೇನೋ? ಮಹಾರಾಜನು ನಿನ್ನಂತಹ ಬುದ್ಧಿಶಾಲಿಯ ಮಾತನ್ನೇ ಕೇಳುವನಾದೀತು?"

"ಹಾಗೆ ಕೇಳದಿದ್ದರೆ ತಾಯಿಯಾದ ಮಹಾರಾಣಿಯವರೊಂದಿಗೆ ಶೃತಪಡಿಸುವೆವು. ಆಕೆಯು ನದಿಗೆ ಸ್ನಾನಕ್ಕೋಸ್ಕರ ಬರುವಾಗ ಆಕೆಯ ಪಾದಗಳಮೇಲೆ ಬಿದ್ದು ತಾಯೀ! ನಮ್ಮನ್ನು ರಕ್ಷಿಸಿಂಯಾದರೂ ರಕ್ಷಿಸು. ಅದಿಲ್ಲವೋ; ನಿನ್ನ ಕಾಲಿನಿಂದೊದೆದು ನದಿಯಲ್ಲಿ ತಳ್ಳಿಕೊಂದುಹಾಕು" ಎಂದು ಹೇಳಿ ಕೊಳುವೆವು.

"ಇದು ನಿಶ್ಚಯ. ಒಂದುಸಲ ಪಾದುಷಾಹನು ನಮ್ಮ ದೇಶದಲ್ಲಿ ಹೆಜ್ಜೆಯೂರಿದನೋ; ಆಕೆಯನ್ನು ಮೊದಲು ಕೊಲುವನು. ಆ ಹುಡುಗನನ್ನು ನೋಡಿ ಲೇಶವಾದರೂ ಕನಿಕರ ವಿಡಲಾರನು. ನಮ್ಮ ಮಹಾರಾಜನೋ ದಯಾಸ್ವರೂಪನು. ಕೇವಲ ಧರ್ಮರಾಯನಂತವನು." ಹೀಗೆ ಮಾತಾಡಿಕೊಳುತ ಅವರು ಘಟ್ಟವನ್ನು ಸೇರಿದರು.

---

## ಪ್ರಕರಣ ೩೦

ಪ್ರಜೆಗಳಣಿಸಿದುದು ನಿಶ್ಚಯವೆ! ಗಣೇಶದೇವನು ಸಹ ಬುದ್ಧೀನನಿಗೆ ಅಭಯದಾನ ಮಾಡಿದ್ದನು. ಅದು ಅತ್ಯಂತ ರಹಸ್ಯವಾಗಿದ್ದಿತು. ಆದರೆ ಗಯಬುದ್ದೀನನು ಹೇಗೋ ಆ ಸಂಗತಿಯನ್ನು ತಿಳಿದು ಅವನನ್ನು ಹುಡುಕುವ

ದಕ್ಕೆ ಕುತುಬನನ್ನು ದಿನಾಜಪುರಕ್ಕೆ ಕಳುಹಿದನು. ಇವರು ನದಿಗೆ ಹೋಗುತಿರಲು ಕೇಳಿಸಿದುವು ಕುತುಬನ ಸೈನ್ಯಗಳ ಭೇರೀ ನಿನಾದವೇ. ಈಗ ಗಣೇಶದೇವನ ಸ್ಥಿತಿಯು ಸಂದಿಗ್ಧವಾಗಿ ಬಿಟ್ಟಿತು. ತನ್ನನ್ನು ಮರೆಹೊಕ್ಕ ಸ್ನೇಹಿತನನ್ನು ಬಿಟ್ಟಾದರೂ ಬಿಡಬೇಕು. ಅದಿಲ್ಲದಿದ್ದರೆ ರಾಜ್ಯವಿನಾಶ ಹೇತುವಾದ ಯುದ್ಧವನ್ನಾದರೂ ಮಾಡಬೇಕು. ಅವಶ್ಯಕವಾದರೆ ಯುದ್ಧವನ್ನಾದರೂ ಮಾಡೆಂದು ಯೋಗಿನಿಯು ಆಲೋಚನೆಯನ್ನು ಹೇಳಿದಳು. ಏನು ಹೋದರೂ ಸರಿಯೆ! ಆಪ್ತರಕ್ಷಣವು ಪರಮ ಧರ್ಮವೆಂಬುದು ಆಕೆಯ ಸಿದ್ಧಾಂತವು. ಗಣೇಶದೇವನ ತಾಯಿಯು ಇದಕ್ಕೆ ಭಿನ್ನಾಭಿಪ್ರಾಯವುಳ್ಳವಳು. ರಾಜ್ಯವನ್ನು ಸಂರಕ್ಷಣೆ ಮಾಡುವುದು ಅರಸನಿಗೆ ಪ್ರಥಮ ಧರ್ಮವೆಂಬದಾಗಿಯು, ಅದಕ್ಕೆ ಯಾವುದಾದರೂ ಆತಂಕ ವುಂಟಾದರೆ ಅವುಗಳನ್ನು ತೊಲಗಿಸಬೇಕೆಂಬದಾಗಿಯು, ಆಕೆಯ ತಾತ್ಪರ್ಯವಾದುದರಿಂದ ಸಹ ಬುದ್ದೀನನನ್ನು ಬಿಟ್ಟುಕೊಡಬೇಕು. ಗಣೇಶದೇವನು ತಾಯ ಅಭಿಪ್ರಾಯದೊಡನೆ ಯೇಕೀಭವಿಸಲಿಲ್ಲ. ಅದು ಧರ್ಮಕ್ಕೂ, ಅಂತರಾತ್ಮ ಬೋಧೆಗಳಿಗೂ, ವಿರೋಧವಾಗಿ ತೋರಿತು. ತನ್ನನ್ನು ಸಿಕಂದರುಷಾ ಸೆರೆಹಿಡಿಯುವಾಗ ಬಿಡಿಸಿದವನು ಸಹಬುದ್ದೀನನು. ಅಂತಹನು ತನಗೆ ರಕ್ಷಣಾರ್ಹನಲ್ಲವೆ? ಭವಿಷ್ಯತ್ಸಂಭವವು ಯಾರಿಗೆತಾನೆ ಗೊತ್ತು? ಮುಂದೆ ಸೋತು ಹೋಗುವೆವೋ ಯೇನೋ ಯೆಂಬ ಭಯದಿಂದ ತಾನು ಕಾಪಾಡುವೆನೆಂದು ವಾಗ್ದಾನಮಾಡಿದವನ ಪ್ರಾಣಗಳನ್ನು ಕಾಪಾಡದೆ ಬಿಟ್ಟುಕೊಡುವುದು ಪಶುಧರ್ಮವೆ ಸರಿ! ಮಾತು ಕೊಟ್ಟಿರುವನು; ಯೇನಾದರೂ ಸರಿಯೆ! ಅದನ್ನುನಿಲಿಸಿಕೊಂಡೇ ಮುಗಿಯಬೇಕು. ಗಣೇಶದೇವನು ಇಂತಹ ಧರ್ಮಗಳಿಂದ ವೃದ್ಧಿಹೊಂದಿದ ವರ್ತನೆ ವುಳ್ಳವನು.

ಆತನು ಶಕ್ತಿಯ ದುರದೃಷ್ಟವನ್ನು ಈಗ್ಲೂ ಮರೆತಿರಲಿಲ್ಲ. ಅದಕ್ಕೆ ನೀನು ಕೂಡ ಸ್ವಲ್ಪಮಟ್ಟಿಗೆ ಉತ್ತರವಾದಿಯೆಂದು ಆತನ ಅಂತರಾತ್ಮವು ಹೇಳುತಿದ್ದಿತು. ತಾನು ನಿರಸನ ಮಾಡಿದ ಸ್ತ್ರೀಯು ಕಾಪಾಡಬೇಕೆಂದು ಪ್ರಾರ್ಥಿಸುತಿರಲು ಲೋಕಾಭಿಪ್ರಾಯವನ್ನು ಸಡ್ಡೆಮಾಡಿದೆ, ಯೆಂದು ಆತನ

ಅಂತರಪ್ಪಣೆಯು ನುಡಿಯುತಿದ್ದಿತು. ಸಂದರ್ಭವನ್ನು ಕುರಿತು ಆತನು ಹಿಡಿತದಿಂದ ವರ್ತಿಸಿದ ಪಕ್ಷದಲ್ಲಿ ಯುದ್ಧವು ಸನ್ನಿಹಿತವಾಗುವುದು ನಿಶ್ಚಯವೆ, ಆದುದರಿಂದ ಅದು ಅನಾಥೆಯಾದ ಅಬಲೆಯನ್ನೂ, ಶರಣುಹೊಕ್ಕವಳನ್ನೂ, ಕಾಪಾಡದೆ ಬಿಟ್ಟುದಕ್ಕೆ ಪ್ರತಿಫಲವಾಗಿ ಭಗವಂತನು ಸನ್ನಿಹಿತವಾಗುವಂತೆ ಮಾಡಿದನೋ ಏನೋ ? ಆತನು ಅಂತಹ ಅಪರಾಧವನ್ನು ಪುನಹ ಮಾಡುವನೇ ? ಸಹಬುದ್ದೀನನು ತನ್ನ ಪ್ರಾಣಗಳನ್ನು ಆತನ ಕೈಯೊಳಗಿಟ್ಟನು. ಅಂತಹ ನನ್ನು ನಿರಾಕರಿಸಲೊಲ್ಲನು. ಆತನನ್ನು ಕಾಪಾಡುವುದಕ್ಕೆ ಪ್ರಯತ್ನಿಸುವಿಕೆಯಲ್ಲಿ ತನ್ನ ಪ್ರಾಣಗಳನ್ನು ಸೂರೆಕೊಟ್ಟರೂ, ತಾನು ಶಕ್ತಿಯ ವಿಷಯದಲ್ಲಿ ಮಾಡಿದ ಪಾತಕ ವಿಮೋಚನವಾಗುವುದು ಗೋಚರ. ಆದರೂ ಇನ್ನೊಂದು ಸಂಗತಿಯುಂಟು ಪಾಲಕನಾದ ತನ್ನ ದೋಷಗಳಿಸ್ಕರ ನಿರ್ದೋಷಿಗಳಾದ ತನ್ನ ಪ್ರಜೆಗಳು ಹಿಂಸೆಪಟ್ಟು ಮುಗಿಯುವರಲ್ಲ, ಎಂಬದಾಗಿ ಆತನ ಮನಸ್ಸು ಕಳವಳಕ್ಕೆ ಸಿಕ್ಕಿತು. ಇಂತಹ ಸಂದಿಗ್ಧ ಸಮಯದಲ್ಲಿ ಆ ಧರ್ಮೈಕ ಪರಾಯಣನಾದ ಮಹಾರಾಜನಿಗೆ ಯಾವುದನ್ನು ಮಾಡುವುದಕ್ಕೂ ತೋರದೆ ತನ್ನದೇಶದೊಳಗಿನ ಪ್ರಮುಖ್ಯರೆಲ್ಲರನ್ನೂ ಕರೆಯಿಸಿ ಸಭೆಯನ್ನು ಸೇರಿಸಿ ಯಾವದ್ವೃತ್ತಾಂತವನ್ನೂ ಅವರಿಗೆ ಶೃತಪಡಿಸಿದನು.

ಮುಂದೆ ಬರುವುದಕ್ಕಿರುವ ಮಹದಪಾಯವನ್ನು ಸಭಿಕರಿಗೆ ವಿವರಿಸಿ ಹೇಳಿದನು. ಆತನು ಎದ್ದುನಿಲ್ಲುತಲೆ ಸಭೆಯೆಲ್ಲವೂ ಯೆದ್ದುನಿಂತಿತು. ಹೀಗಿರಲು ಆತನು ಈ ತೆರನಾಗಿ ಆರಂಭಿಸಿದನು. " ಮಕ್ಕಳಿರಾ! ಹಿಂದಣ ಕಷ್ಟಗಳೆಲ್ಲವೂ ಗತಿಸಿದವಾದರೂ, ಇನ್ನೊಂದು ಮಹಾಕಷ್ಟವು ಈಗ ಮರಳಿ ಸಿದ್ಧವಾಯಿತು. ತನ್ನ ಏಳುಮಂದಿ ಸೋದರರನ್ನು ಕೊಂದರೂ ಸುಲ್ತಾನನಿಗಿನ್ನೂ ಭಯವು ತೀರಲಿಲ್ಲ. ತನ್ನ ಅಣ್ಣನ ಮಗನ ಪ್ರಾಣವನ್ನು ಕೂಡ ತೆಗೆಯಬೇಕೆಂದು ಮರಳಿ ಪ್ರಯತ್ನಿಸುತಿರುವನು. ಈ ಸಣ್ಣಹುಡುಗನು ನನ್ನನ್ನು ಮರೆಹೊಕ್ಕನು. ನಾನು ಅವನಿಗೆ ವಾಗ್ದಾನ ಮಾಡಿದೆನು. ಅವನನ್ನು ಬಿಟ್ಟುಕೊಟ್ಟೆನಾದರೆ ಶರಣಾಗತ ರಕ್ಷಣವನ್ನು

ವಿಧಿಸುವ ಧರ್ಮಶಾಸ್ತ್ರಗಳಿಗೆ ತಪ್ಪಿ ಪ್ರವರ್ತಿಸಿದವನಾಗುವೆನು. ಹಾಗಲ್ಲದೆ ಆತನನ್ನು ಕಾಪಾಡುವೆನೆಂದರೆ, ಯುದ್ಧವು ಮೊದಗದಿರಲಾರದು. ಯಿದರಿಂದ ನಿರ್ದೋಷಿಗಳಾದ ನನ್ನ ಪ್ರಜೆಗಳು ಹಿಂಸೆ ಪಡುವರು. ಯಾವದಾರಿಯಲ್ಲಿ ಅಡಿಯಿಡುವುದಕ್ಕೂ, ನನಗೆ ತೋರದಿದೆ. ಆಲೋಚನೆಯನ್ನು ಹೇಳಬೇಕೆಂದು ಕೋರುತ್ತೇನೆ''

ಸಭಿಕರೆಲ್ಲರೂ ಏಕವಾಕ್ಯತೆಯಿಂದ '' ನಮಗೆಲ್ಲರಿಗೂ ತಂದೆಯೂ, ಸಂರಕ್ಷಕನೂ, ಆದ ನಮ್ಮ ಮಹಾರಾಜರವರ ಶ್ರೀಮಾನದಂತೆ ನಾವೆಲ್ಲರೂ ನಡೆಯತಕ್ಕವರು. ನಾವೆಲ್ಲರೂ ಅವರ ಮಕ್ಕಳು. ಮತ್ತು ಸೇವಕರೂ ಅಲ್ಲವೆ? ಅವರಿಗೆ ಯಾವುದು ಉತ್ತಮವೆಂದು ತೋರಿ ನಮ್ಮನ್ನು ಮಾಡಹೇಳುವರೋ, ಅವನ್ನು ಶಿರಸಾವಹಿಸಿ ನಡಸತಕ್ಕವರು.'' ಯೆಂದು ಹೇಳಿದರು.

ರಾಜಭಕ್ತಿಯನ್ನು ತೋರ್ಪಡಿಸುವ ಈ ಸಾಂಘಾತಿಕಘೋಷವು ಅಡಗಿದನಂತರ ವೊಬ್ಬ ಸಾಮಂತರಾಜನು ಮೇಲಕ್ಕೆದ್ದು ನೆಮ್ಮದಿಯಾಗಿಯೂ, ಸ್ಪಷ್ಟವಾಗಿಯೂ, ಹೀಗೆ ಅರಿಕೆಮಾಡಿದನು. '' ಮಹಾರಾಜನೆ! ನಮ್ಮ ಮನಸ್ಸಿನಲ್ಲಿರುವವುಗಳನ್ನು ಧಾರಾಳವಾಗಿ ಅರಿಕೆಮಾಡಿಕೊಳುವದಕ್ಕೆ ತಾವು ಪ್ರೋತ್ಸಾಹಪಡಿಸುವರಾದುದರಿಂದ ನನ್ನ ಭ್ರಾತೃವೃಂದದ ಪಕ್ಷವಾಗಿಯು, ನನ್ನ ಪಕ್ಷವಾಗಿಯು, ನನಗೆ ತೋರಿದವುಗಳನ್ನು ಶೃತಪಡಿಸುತಿದೇನೆ. ರಾಜಕುಮಾರನಾದ ಸಹಬುದ್ಧೀನನು ಆರ್ತನಾಗಿ ತಮ್ಮ ಮರೆ ಹೊಕ್ಕಿರುವನು. ತಾವು ಅವನಿಗೆ ಅಭಯಪ್ರದಾನಮಾಡಿರುವಿರಿ. ತಾವು ಅವನನ್ನು ಕಾಪಾಡುವುದು ಸಹಜಧರ್ಮವೆ. ಆದರೆ ಅದಕ್ಕಿಂತಲೂ ಉತ್ಕೃಮವಾದ ಧರ್ಮವು ಯಿನ್ನೊಂದುಂಟು. ಅದಾವುದೆಂದರೆ: ತಮ್ಮ ಮಕ್ಕಳಾದ ಪ್ರಜೆಗಳನ್ನು ಕಾಪಾಡುವಿಕೆಯು. ಗತಿಸಿದ ಯುದ್ಧಕ್ಕೆ ಫಲವಾಗಿ ಇದುವರೆಗೂ ಪ್ರಜೆಗಳು ಹಿಂಸೆಪಡುತಲೇ ಇರುವರು. ಇದರಲ್ಲಿ ವಿಚಾರಣೀಯವಾದ ಅಂಶವಾವುದೆಂದರೆ:- ಹೊರಗಿನವನೊಬ್ಬನಿಗೋಸ್ಕರ ಸಾವಿರಾರು ಮಂದಿಯನ್ನು ಕೊಂದು ದೇಶವೆಲ್ಲವನ್ನೂ, ದುಃಖಪಾಲುಮಾಡುವದುಚಿತವೇ ? ಎಂಬುವದನ್ನು ಯೋಚಿಸತಕ್ಕುದಾಗಿದೆ. ಸಭೆಯಲ್ಲಿ '' ಅನುಮೋದನೆ'' ಎಂಬ ಮಹತ್ತರವಾದ ಧ್ವನಿಯೊಂದಾಯ್ತು.

ಅವರಲ್ಲೊಬ್ಬನು "ಮಹಾರಾಜನು ವರ್ಧಿಸಲಿ. ಮಕ್ಕಳಿಂತ ನಮ್ಮನ್ನು ಆ
ತನು ಕಾಪಾಡಲಿ, ಹೊಬ್ಬ ವಿದೇಶಸ್ಥನಿಗೋಸ್ಕರ ನಾವೆಲ್ಲರೂ ಮಡಿಯು
ರುವಂತಾಗಲಿ!" ಎಂದು ಗಟ್ಟಿಯಾಗಿ ಕೂಗಿಕೊಂಡನು.

ಇದಕ್ಕೂ ಸಭಿಕರೆಲ್ಲರೂ ಅಂಗೀಕರಿಸಿದಂತೆ ತೋರಿತು.

"ಮಹಾರಾಜನೆ ! ಸ್ಥಿರಜೀವಿಯಾಗಿ ವರ್ಧಿಸು. ನಾವು ತಮಗೋ
ಸ್ಕರ ಎಷ್ಟು ಸಲವಾಗಿ ಪ್ರಾಣಸಂಕಟವನ್ನು ಅನುಭವಿಸುವುದಕ್ಕಾದರು
ಅಂಗೀಕರಿಸುವೆವು. ಆದರೆ ನಾವು ತುರಕರವನೊಬ್ಬನಿಗೋಸ್ಕರ ಸಾ
ರಾರುಮಂದಿ ಸಾಯಬೇಕೇಕೆ ?" ಯೆಂದು ಮತ್ತೊಬ್ಬನೆಂದನು.

ಇನ್ನೊಬ್ಬನು "ಮಹಾರಾಜನಿಗೆ ಮಂಗಳವಾಗಲಿ ! ಮೊನ್ನೆಯ
ದಿನ ಬೆಳಗಾಗ ನಾಲ್ವರು ಮಕ್ಕಳನ್ನು ಕೊಂದುಕೊಂಡೆನು. ಇನ್ನೊ
ಬ್ಬನು ಮಾತ್ರ ಉಳಿದಿರುವನು. ನಾನು ಮುದುಕನು. ಅದರೊಳಗು
ಅಂಧನು. ಮಹಾಸ್ವಾಮಿಯ ಅನುಜ್ಞೆಯಾದರೆ ಅವನು ಕೂಡ ಯುದ್ಧ
ಮಾಡಿ ಮಡಿಯಬೇಕಾದುದೆ ! ನಾನು ವೃದ್ಧಾಪ್ಯದಲ್ಲಿ ಮಕ್ಕಳಿಲ್ಲದ
ನಾಗುವೆನು. ಆದರೂ ಹೊರಗಿನವನೊಬ್ಬನಿಗೋಸ್ಕರ ಸಾವಿರಾರು ಮಂ
ನಿನ್ನ ಮಕ್ಕಳನ್ನು ಕೊಲ್ಲುವೆಯಾ ?" ಅಂದನು.

ಹೀಗೆ ಯೆಲ್ಲರೂ ಹೇಳಿ ಮುಗಿದಾದನಂತರ ಮಹಾರಾಜನು ಮ
ನ್ನೊಂದುಬಾರಿ ಪೀಠಕ್ಕೆ ಯೆದ್ದುನಿಂತು ಹೀಗೆಂದನು. "ನನ್ನ ಪ್ರೀ
ತಿಪಾತ್ರರಾದ ಮಕ್ಕಳಿರಾ ! ಕೇಳಿರಿ. ನೀವು ಹೇಳಿದುದೆಲ್ಲವೂ ಸರಿಯೆ
ಮಕ್ಕಳನ್ನು ಕಾಪಾಡುವುದು ತಂದೆಗೆ ಯೆಲ್ಲಕ್ಕಿಂತಲೂ ಮುಖ್ಯವೆ ಅಹ
ದು. ಆದರೆ ಅವರ ಐಹಿಕಸುಖ ಮಾತ್ರವೇ ಆತನಿಗೆ ವಿಚಾರಣೀಯವಲ್ಲ
ಅವರಿಗೆ ಧರ್ಮ, ಸುಗುಣ, ಘನತೆ, ಮೊದಲಾದುವುಗಳನ್ನು ಕಲಿಸುವುದ
ಕೂಡ ರಾಜನಿಗೆ ವಿಧಿಯು. ಅವಶ್ಯಕವಾದಾಗ ನನ್ನನ್ನು ಕಾಪಾಡಿದ
ಬ್ಬ ಸ್ನೇಹಿತನನ್ನು ಕಾಪಾಡದೆ ಬಿಟ್ಟುಕೊಟ್ಟದಾದರೆ ನಿಮ್ಮಕೀರ್ತಿಗು
ನನ್ನ ಕೀರ್ತಿಗೂ ಹಾನಿಯುಂಟಾಗುವುದು. ಅದುದರಿಂದ ಆರ್ತರಕ್ಷಣ
ಮರ್ವನ್ನು ನಡೆಸದೆ ಶಾಸ್ತ್ರದೂರರಾಗುವುದೇ ಅಲ್ಲದೆ,ಉಪಕಾರವನ್ನರಿಂ

ದ ಕೃತಘ್ನರು ಕೂಡ ಆಗುವೆವು. ಮೊದಲು ಸುಲ್ತಾನ್ ಸಿಕಂದರು ಷಾಹ ನು ಸಂಧಿಮಾತುಗಳಿಗೋಸ್ಕರ ನನ್ನನ್ನು ತನ್ನ ಆಸ್ಥಾನಕ್ಕೆ ಕರೆಸಿದಾಗ ಸಹಬುದ್ದೀನನನ್ನು ನಮ್ಮ ಬಳಿಯಲ್ಲಿ ಒತ್ತೆಯಿಟ್ಟ ಸಂಗತಿಯು ನೀವೆಲ್ಲ ರೂ ತಿಳಿದಿರುವಿರಲ್ಲವೆ ? ಆಗ ಸುಲ್ತಾನನು ಮೋಸಮಾಡಿ ನನ್ನನ್ನು ಸೆರೆ ಹಿಡಿದಾಗ ಅಜೀಮುಖಾನನು ಇಬ್ಬರು ರಾಜಭಟರಮೂಲಕ ಆ ವರ್ತಮಾ ನವನ್ನು ನಮ್ಮ ಶಿಬಿರದಲಿ ತಿಳಿಯುವಂತೆ ಮಾಡಿದನು. ಅದು ತಿಳಿದು ಆಸ್ಥಾನಕ್ಕೆ ಬಂದು ನಮ್ಮನ್ನು ಬಿಡಿಸಿದವನು ಸಹಬುದ್ದೀನನು. ಇಂತಹ ಸಂದರ್ಭದಲ್ಲಿ ಆತನನ್ನು ಬಿಟ್ಟುಕೊಟ್ಟೆವಾದರೆ ನಾವು ಮನಸಾಕ್ಷಿಯು ಳ್ಳವರಾಗಿ ಗೌರವ ಉಳ್ಳವರಂತೆ ವರ್ತಿಸಿದವರಾಗುವೆವೇ ? ನಾವು ನೀಚರೂ, ಕೃತಘ್ನರೂ ಆಗಲಾರೆವೇ ? ನಿಮಗೆ ಸೌಖ್ಯವೂ, ಗೌರವವೂ, ಗುಣವೂ ಕಾಪಾಡುವುದಕ್ಕಾಗಿ ನನ್ನೊಬ್ಬನ ಪ್ರಾಣವು ಸರಿಬಿದ್ದುದಾದರೆ ಸಂತೋಷ ವಾಗಿ ನಿಮಗೆ ಸಮರ್ಪಿಸುವೆನು. ನನ್ನ ಪ್ರಾಣಗಳೊಡನೆ ನಿಮ್ಮಪ್ರಾಣಗ ಳನ್ನು ಕೂಡ ಬಲಿಯಿಡಬೇಕಾಯಿತಲ್ಲಾ ! ಎಂಬ ವಿಚಾರವೊಂದೇ ನನ್ನ ನ್ನು ಬಾಧೆಪಡಿಸುತಿದೆ. ಆದರೂ ನೀವು ಕಾದಬೇಕಾದುದು ನನಗೋಸ್ಕ ರವಲ್ಲ. ಧರ್ಮಕ್ಕೋಸ್ಕರ. ನಾವು ಆಲೋಚಿಸಬೇಕಾದುದು ತುರಕರವ ನು, ಹೊರಗಿನವನು, ಯೆಂಬ ವಿಷಯಗಳಲ್ಲ. ಕೇವಲ ನಮ್ಮ ಗೌರವವೂ, ಧರ್ಮವೂ ಈಗ ಆಲೋಚನೀಯಾಂಶವು. ಇದು ಪರಮ ಪಾವನ ಯುದ್ಧವೆಂ ದು ತಿಳಿಯಬೇಕು. ಏಕೆಂದರೆ:-ಇದರಿಂದ ಬಲಹೀನರಿಗೆ ಮತ್ತು ನಿರ್ದೋಷಿಗ ಳಿಗೆ ಸಹಾಯಕರಾಗಿ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡಿ ಕೃತಜ್ಞ ತೆಯಿಂದ ನಡೆದವರಾಗುವೆವು. ಈ ಯುದ್ಧದಲ್ಲಿ ಸಾಯುವಿಕೆಯಿಂದ ನಮ್ಮ ಭಾವಿಸಂತತಿಗೆ ಮಾರ್ಗದರ್ಶಕರಾಗಿ ವೀರಸ್ವರ್ಗವನ್ನು ಅನುಭವಿಸತಕ್ಕವ ರು. ನಾವೆಲ್ಲರೂ ಯಾವಾಗಲೋ ಸಾಯದೆ ಏನೋ ತೀರದು. ಅದು ವಿಧಿಯೇ ! ಅಲ್ಲವೆ ? ಅಂತಹ ನಶ್ವರವಾದ ಪ್ರಾಣವನ್ನು ಧರ್ಮಯುದ್ಧ ದಲ್ಲಿ ಕಳೆಯಲು ಹಿಂಜರಿಯಲೇಕೆ ? ” ಯೆಂದು ಉಪನ್ಯಸಿಸಿದನು.

ಈ ಮಾತುಗಳನ್ನು ಕೇಳಿದ ಕೂಡಲೆ ಶ್ರೋತೃಗಳೆಲ್ಲರಿಗೂ ಉದ್ರೇಕ ಹುಟ್ಟಿತು.

" ಜಯವಾಗಲಿ! ಜಯವಾಗಲಿ!! ಮಹಾರಾಜನಿಗೆ ಜಯವಾಗಲಿ!!! ಈತನು ಯುಧಿಷ್ಠಿರನ ಅವತಾರ ಮೂರ್ತಿಯು."

" ನಾವು ಆತನಿಗೋಸ್ಕರ ಯುದ್ಧಮಾಡೋಣ."

" ಈ ಧರ್ಮಯುದ್ಧದಲ್ಲಿ ಸತ್ತುಹೋಗೋಣ."

" ಮಹಾರಾಜನು ದೀರ್ಘಾಯುವಾಗಲಿ."

ಎಂದೀರೀತಿಯಾಗಿ ಸಭ್ಯರೆಲ್ಲರೂ ಒಂದೇಸಲ ಗಟ್ಟಿಯಾಗಿ ಮುಟ್ಟುವಂತೆ ಕೂಗಿಸಲಾರಂಭಿಸಿದರು. ಆ ಕೂಗು ಅಡಗಿದ ತರುವಾಯ ಮಹಾರಾಜನು ಮರಳಿ ಈ ರೀತಿಯಾಗಿ ನುಡಿದನು.

" ಮಕ್ಕಳಿರಾ! ನಿಮ್ಮವರಲ್ಲಿ ಯಾರಿಗಾದರೂ ವ್ಯರ್ಥವಾಗಿ ತುಸವಾದರೂ ಹಿಂಸೆ ಪಡಿಸಲಾರೆನು. ಮೊದಲು ಸಹಬುದ್ದೀನನನ್ನು ಕ್ಷಮಿಸಬೇಕೆಂದು ನಾನು ಸುಲ್ತಾನನನ್ನು ಕೇಳಿಕೊಳುವೆನು. ಅವನಿಂದ ಸುಲ್ತಾನನಿಗೆ ಯಾವ ಭಯವೂ ಇಲ್ಲದಂತೆ ನಾನು ಈಡಾಗಿರುವೆನು. ಆತನಿಗೆ ದೂರದಲ್ಲಿ ಯೆಲ್ಲಾದರೂ ಒಂದು ರಾಷ್ಟ್ರಕ್ಕೆ ಅಧಿಪತ್ಯವನ್ನು ಕೊಡಬೇಕೆಂದು ಕೇಳುವೆನು. ಸುಲ್ತಾನನು ಅದಕ್ಕೆ ಅಂಗೀಕರಿಸದಿದ್ದರೆ ಆಗ ಯುದ್ಧ ಮಾಡಬೇಕಾಗುವುದೆ ಅಲ್ಲದೆ ಅದುವರೆಗೆ ಅಗತ್ಯವಿಲ್ಲ." ಯೆಂದು ಹೇಳಲು ಸಹಬುದ್ದೀನನು ವಿಶ್ವಾಸ ಘಾತುಕತೆಯನ್ನು ತೋರ್ಪಡಿಸಿದರೆ ನಡೆಯತಕ್ಕುದೇನೆಂದು ಸಂಶಯವೊಂದನ್ನು ಶೃತಪಡಿಸಿದರು. ಅದಕ್ಕೆ ಮಹಾರಾಜನು "ಸಹಬುದ್ದೀನನು ಗೌರವಸ್ಥನು. ಮತ್ತು ಪಾಪಭೀತಿಯುಳ್ಳವನು ಇದನ್ನು ನಾನು ಬಲ್ಲೆನು. ಆತನು ವಿಶ್ವಾಸಘಾತುಕ ಮಾಡಲಾರನೆಂಬುದನ್ನು ನಿಶ್ಚಯವಾಗಿ ನಾನು ಹೇಳುವೆನು. ಪಾದುಷಾಹನಮೇಲೆ ಯೆಂದಿಗೂ ಯೆದುರಿಸಲಾರನು. ಆದರೆ ಸುಲ್ತಾನನ ಅನಂತರ, ಆತನು ಸಿಂಹಾಸನಕ್ಕೆ ಪ್ರಯತ್ನಿಸಿದಪಕ್ಷದಲ್ಲಿ ಆಗ್ಗೆ ನಾನು ಜೀವಿಸಿದ್ದನೇ; ತಪ್ಪದೆ ಅದಕ್ಕೆ ಸಹಾಯಮಾಡುವೆನು" ಯೆಂದು ಹೇಳಿದನು. ಸಭಿಕರೆಲ್ಲರೂ ತೃಪ್ತರಾಗಿ ಅಂಗೀಕಾರವನ್ನು ಶೃತಪಡಿಸಿದರು. ಆ ಮಧ್ಯಾಹ್ನದಲ್ಲಿಯೇ ದಿನಾಜಪುರದ ಅರಸನು ತಾನುಹೇಳಿದಂತೆ ಕುತುಬನೊಡನೆ ಮಾತಾಡಿದನಾದರೂ

ತವನು ಅದು ಕೇವಲ ಸುಹಸವೆಂದು ಹೇಳಿ ಬೆದರಿಸಿದನು. ಅದಕ್ಕೆ ಮಹಾ ರಾಜನು "ಹಾಗೆಯೇ ಆಗಲಿ. ಆದರೆ ನನ್ನನ್ನು ಕೊಂದಲ್ಲದೆ ಸಹಬುದ್ಧೀನನನ್ನು ತೆಗೆದುಕೊಂಡು ಹೋಗಲಾರೆ. ನಾನು ಜೀವಿಸಿರಲಾಗಿ ಆತನು ನಿನಗೆ ದೊರೆಯಲಾರನು." ಯೆಂದು ಹೇಳಿದನು.



## ಪ್ರಕರಣ ೩೧.

ಸಹಬುದ್ಧೀನನನ್ನು ಕಾಪಾಡುವಿಕೆಯಲ್ಲಿ ತಾನು ಧರ್ಮವನ್ನೇ ಅನುಸರಿಸುತಿದ್ದೇನೆಂದು ಗಣೇಶದೇವನಿಗೆ ಕೇವಲ ಭರವಸೆ ಯಿದ್ದುದರಿಂದ ಆತನಿಗೆ ಯುದ್ಧವೆಂದರೆ ವಿಚಾರವಾದರೂ, ಭಯವಾದರೂ, ಲೇಶವೂ ಇರಲಿಲ್ಲ. ಪ್ರಜಾ ಪೀಡೆಯನ್ನು ಹೋಗಲಾಡಿಸುವುದೊಂದೇ ಆತನ ಕೋರಿಕೆಯು. ಅದಕ್ಕೋಸ್ಕರ ರಕ್ತಸ್ರಾವಕ್ಕೆಷ್ಟು ಅವಕಾಶ ವುಂಟಾದರೂ ಅದೆಲ್ಲವೂ ನ್ಯಾಯವೆಂದೇ ಆತನ ನಿಶ್ಚಯವು. ಸಭೆಯು ಮುಗಿದ ತರುವಾಯ್ಯ ಅದೇ ವಿಷಯವನ್ನೇ ಯೋಚಿಸುತ ಅಂತಃಪುರಕ್ಕೆ ಹೋದನು. ನಿರುಪಮೆಯು ಆತನನ್ನು ಕುರಿತು ಸಹಬುದ್ಧೀನನನ್ನು ಯಿನ್ನೂ ಬಿಟ್ಟು ಕೊಡದಿರುವುದರಿಂದ ಮಹಾರಾಣಿಗೆ ಕೋಪವಿರುವಂತೆ ಹೇಳಿದಳು. ಅದನ್ನು ಕೇಳಿ ಆತನು "ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು? ಆತನನ್ನು ಕಾಪಾಡುವುದು ವೊಳ್ಳೆಯದೇ ಅಲ್ಲವೇ?" ಯೆಂದು ಕೇಳಿದನು.

ನಿರುಪಮೆ— "ತಾವು ವೊಳ್ಳೆಯ ಕೆಲಸವನ್ನೇ ಮಾಡುವಿರಿ. ದೀನ ಜನ ಸಂರಕ್ಷಣವು ರಾಜನಿಗಲ್ಲದೆ ಮತ್ತಾರಿಗುಂಟು? ಪ್ರಜಾ ಪೀಡೆಯನ್ನು ಹೋಗಲಾಡಿಸದಿದ್ದರೆ ದೇಶದ ಗತಿ ಯೇನಾದೀತು? ನಿನ್ನ ಘನತೆಗೂ ದಯಾಳುತ್ವಕ್ಕೂ ತಕ್ಕಂತೆ ಮಾಡಿರುವೆ." ಯೆಂದು ಹೇಳಿದಳು.

ಈ ಮಾತುಗಳನ್ನು ಕೇಳಿ ಆಕೆಯ ಅಂಗೈಯನ್ನು ಚುಂಬಿಸಿ "ಪ್ರೇಯಸಿ! ಉತ್ತಮ ಸ್ತ್ರೀಗೆ ಅರ್ಹವಾದ ರೀತಿಯನ್ನು ಹೇಳಿರುವೆ." ಯೆಂದು ಸಂಭಾವಿಸಿದನು.

ನಿರುಪಮೆಯು ಸಂತೋಷತರಂಗಿತ ಸ್ವಾಂತಳಾಗಿ ಮರಳಿ ಹೀಗೆ ಹೇಳಲಾರಂಭಿಸಿದಳು. ಆಕೆಯು ತನ್ನ ಪ್ರಭುವಿನೊಡನೆ ಹೇಳುವ ಹೊಸ ಸಂಗತಿಯೊಂದುಂಟು. ಯಾವುದೆಂದಿರಾ? "ಶಕ್ತಿಯನ್ನು ತಾವು ಬಲ್ಲಿರೋ? ಆಕೆಯು ಗಯಾಜುದ್ದೀನನನ್ನು ಮದುವೆಯಾದಳಂತೆ!"

ಮಹಾರಾಜ— "ನಿಜವಾಗಿಯೂ."

ನಿರುಪಮೆ— ನಿನಗಿನ್ನೂ ತಿಳಿಯಲಿಲ್ಲವೆ? ಈ ಮಾತು ಕುತುಬನ ಬಾಯಿಂದ ಹೊರಬಂದಿರುವುದರಿಂದ ಅಸತ್ಯವಾಗಲಾರದು. ಧನಾಧಿಕಾರಗಳನ್ನಪೇಕ್ಷಿಸಿ ತುರಕರಲ್ಲಿ ಕಲೆಯುವುದೆಂತಹ ಘೋರ ಪಾತಕವೋ!"

ಈ ತಿರಸ್ಕಾರ ವಚನಗಳು ಗಣೇಶದೇವನ ಮನಸ್ಸನ್ನು ಬಹುನೋಯಿಸಿತು. ಅದೆಲ್ಲವೂ ತಾನು ಅರಿಯದ ಸಂಗತಿಯಲ್ಲ. ಲೋಕದ ತೀರ್ಮಾನವು ಯೆಂತಹ ಪ್ರಮಾದಕ್ಕೆ ಮೊಳಪಟ್ಟದ್ದಿತು?

ಪಾಪ! ಆ ಹತಭಾಗ್ಯಳು ಅಗ್ನಿಗುಂಡದಲ್ಲಿ ಹೊಕ್ಕಂತೆ ಮಹಮದೀಯರ ಅಂತಃಪುರವನ್ನು ಹೊಕ್ಕಳು. ಅದರ ಜೊತೆಗೆ ಲೋಕವು ನಿಷ್ಕಾರಣವಾಗಿ ದೂರಲನುವಾಯ್ತಾದರೂ ನಿರುಪಮೆಗೆ ಅದೆಲ್ಲವನ್ನೂ ಹೇಳುವುದೊಳ್ಳೆಯದಲ್ಲವಾದುದರಿಂದ ಆತನುನಿದಾನದಿಂದ ಹೀಗೆ ಹೇಳತೊಡಗಿದನು.

"ಆಕೆಯನ್ನು ಯೇನೊಂದೂ ಅನ್ನದಿರು. ಆಕೆಯ ಉದ್ದೇಶವೇನೊ ನಿನಗೆ ತಿಳಿಯದಿರಬಹುದು. ಅಷ್ಟೇ ಅಲ್ಲದೆ ತುರಕರನ್ನು ಮಾತ್ರ ನಾವೇಕೆ ನಿಂದಿಸಬೇಕು? ನಾವು ಹೇಗೋ ಅವರು ಕೂಡ ಹಾಗೆಯೇ ನಮ್ಮದೇಶಸುತರಲ್ಲವೆ? ಭೇದವು ಮತದಲ್ಲಿ ಮಾತ್ರವಿದೆ. ಅವರಿಗಿಂತಲೂ ನಾವು ದೊಡ್ಡವರೆಂದೇಕೆ ಯೆಣಿಸಬೇಕು?"

"ಕಾರಣ ವಿಂತಹುದೆಂದು ನಾನು ಹೇಳಲಾರೆ ನಾದರೂ ಅದೇತಕ್ಕೊ ಅವರೆಂದರೆ ನನಗೆ ಅಸಹ್ಯವು. ಸ್ವರ್ಗಪ್ರಾಪ್ತಿಯಾಗವಿದ್ದರೂ ಸರಿಯೆ; ನಾನು ಮಾತ್ರ ಮಹಮದೀಯ ಮತವನ್ನೆಂದಿಗೂ ಅನುಸರಿಸಲಾರೆನು." ಯೆಂದು

ನಿರುಪಮೆಯು ತಿಳಿಯದಿದ್ದರೂ,ತನ್ನವರೆಂದುಕೊಳುವ ಅಭಿಪ್ರಾಯವನ್ನು ಹೊರಪಡಿಸಿದಳು.

ಅದನ್ನುಕೇಳಿ ಪತಿಯು. "ಅಂತಹ ಅಭಿಪ್ರಾಯಗಳಿರುವುದು ತಪ್ಪು ನಾವು ಹಾಗೆ ಪ್ರೊಬ್ಬರನ್ನು ದೂರುವಾಗ ನಮ್ಮನ್ನು ಹೆರವರು ಹಾಗೆಯೆ ದೂರುವುದರಲ್ಲಿ ಆಶ್ಚರ್ಯವೇನು? ಸಹನವೆ ನಮ್ಮ ಹಿಂದೂಮತವೆಲ್ಲಕ್ಕೂ ಇರುವ ವಿಶೇಷವು. ಹಿಂದೂ ಮತಸ್ಥರೆಂದು ಗರ್ವಪಡುತ ಯೆಲ್ಲಮತ ಗಳನ್ನೂ ಸಮಾನವಾಗಿ ನೋಡಬೇಕಲ್ಲದೆ ವೊಂದನ್ನೂ ನಿಂದಿಸಬಾರದೆಂಬ ದಾಗಿ ಬೋಧಿಸುವ ನಮ್ಮ ಮತ ಧರ್ಮಗಳನ್ನು ವಿಚಾರಿ ನಡೆಯುತಿರುವೆ." ಯೆಂದು ಮೂದಲಿಸಿದನು.

ಈ ಮಾತುಗಳನ್ನು ಕೇಳಿ ಚಿಕ್ಕ ಮಹಾರಾಣಿಯು ಆತನ ವಾಸ್ತವ ವನ್ನು ಗ್ರಹಿಸಿ ಯೇನೊಂದೂ ಹೇಳಲಾರದೆ ತೊದಳ್ನುಡಿಗಳಿಂದ "ಶಕ್ತಿ" ಮಾತ್ರ ಇಲ್ಲಿಗೆ ಬಂದಪಕ್ಷದಲ್ಲಿ ಆಕೆಯನ್ನು ಸಮಾನ ಗೌರವದಿಂದ ಸತ್ಕ ರಿಸಲಾರೆನು" ಅಂದಳು. ಗಣೇಶದೇವನು:-

"ಆಕೆಯು ನಿನ್ನ ಸಮವಾಗಿ ಇಲ್ಲಿಗೆ ಬರುವುದಕ್ಕೆ ಆಕೆಗೇ ಗೌರವ ಹಾನಿಯು. ಆಕೆಯು ವಂಗ ಸಾಮ್ರಾಜ್ಯಕ್ಕೆ ಪಟ್ಟದರಾಣಿಯು. ನೀನಾ ದರೋ ಆಕೆಗೆ ವೊಳಪಟ್ಟಿರುವ ಅನೇಕ ಮಂವಿರಾಣಿಯರೊಳೊಬ್ಬಳು."

ಎಂದು ಹೇಳಿದ ಕೂಡಲೆ ಆ ಕಾಂತಾ ಲಲಾಮದ ಮನಸ್ಸು ಚೆದರಿ ಹೋಗಿ ಶಕ್ತಿಯಮೇಲೆ ಮೊದಲಿನ ಅಸೂಯೆಯು ಮರಳಿ ತಲೆದೋರಿತು. ಆ ಮಾತುಗಳಿಗೆ ಆಕೆಗೆ ಯಾವುದೋ ಅರ್ಥ ಬೋಧೆಯಾಯ್ತು ತನ್ನ ಗೌರ ವಕ್ಕೆ ಹಾನಿಯುಂಟಾಯ್ತು. ಆದರೂ ನೆಮ್ಮದಿಯಾಗಿ "ನೀನು ಹೇಳಿದು ದೆಲ್ಲವೂ ನಿಶ್ಚಯವೆ" ಎಂದು ತಡವರಿಸುತ ಸುಮ್ಮನಾದಳು. ಅಂತಹ ಸಮಯದಲ್ಲಿ ಯಾರೋ ಬಂದು ಬಾಗಿಲ ತಟ್ಟಿದರು. ಒಡನೆಯೆ ಭಗವತಿ ಯಾದ ಯೋಗಿನಿಯು ಬಂದು ಬಾಗಿಲ ಬಳಿ ಯೆದುರು ನೋಡುತಿರುವಂತೆ ದಂಗಿಣಿಯು ಅರಸನೊಡನೆ ಬಿನ್ನೈಸಿದಳು. ಅರಸನು ಸ್ವತಃ ಎದ್ದು

ಹೋಗಿ ಯೋಗಿನಿಯನ್ನು ಕರೆತಂದನು. ಆಕೆಯೊಂದು ಶೋಕವಾರ್ತೆಯನ್ನು ತಂದಳು. ಆಕೆಯು ಅರಸನೊಡನೆ "ನಿಮ್ಮ ತಾಯಿಯು ಕುತುಬನೊಡನೆ ಸಹಬುದ್ದೀನನಿದ್ದ ಸ್ಥಳವನ್ನು ಹೇಳಿರುವಳು. ಇದುವರೆಗೆ ಆವನನ್ನು ಬಂಧಿಸಿರ ಬಹುದೆಂದೆಣಿಸುತ್ತೇನೆ. ಕರ್ತ್ತವ್ಯವೇನೋ ಆಲೋಚಿಸುವನಾಗು. ತ್ವರೆಪಡುವನಾಗು. ತಡವಾಗಬಾರದು." ಎಂದು ನುಡಿದಳು.

ಗಣೇಶದೇವನು ಗಾಬರಿಗೊಂಡು "ತಾಯೇ! ನೀನೀ ಸಂಗತಿಯನ್ನು ತಿಳಿಯಪಡಿಸಿದುದಕ್ಕೆ ಕೃತಜ್ಞನಾಗಿರುವೆನು. ಸಾಧ್ಯವಾದಷ್ಟು ತ್ವರೆಯಲ್ಲಿ ಬಲಗಳನ್ನು ತರಹೇಳಿ ಸೇನಾಪತಿಯೊಡನೆ ತಿಳಿಸುವುದು. ಈ ಒಳಗಾಗಿ ಕಾವಲಿನಲ್ಲಿರುವಷ್ಟು ಸೇನೆಯೊಡನೆ ನಾನು ಹೊರಡುವೆನು."

ಎಂದು ಹೇಳಿ ನಿಮಿಷಮಾತ್ರವೂ ಆಲಸ್ಯವಾದದೆ ಕಣ್ಗೆಬಿದ್ದ ಭಟಸಮುದಾಯದೊಡನೆ ಹೊರಟನು. ತನ್ನ ಬಲಗಳು ಬರುವ ವರೆಗೆ ಕುತುಬನನ್ನು ತಡೆಯಲಾದರೆ ಸಾಕು. ಕೇವಲ ಯುವಕನಾಗಿರುವನಾದರೂ ದಿನಾಜಪುರಾಧಿನಾಥನು ಸಹಜವಾಗಿ ಮಹಾಶೂರನು. ಆತನಿಗೆ ಧರ್ಮ ಸಂಸ್ಥಾಪನೆಯೆಂಬ ಮಹಾಕಾರ್ಯವು ಮತ್ತಷ್ಟು ಧೈರ್ಯವನ್ನೂ, ಹಿಂಜರೆಯದ ಬಲವನ್ನೂ, ಉಂಟುಮಾಡಿತು. ಕತಿಪಯ ಪರಿವಾರದಿಂದಿದ್ದರೂ ಮಿತಿಮೀರಿದ್ದ ವೈರಿಬಲವನ್ನು ಮುತ್ತಿದನು. ಆದರೂ ಆತನ ಪ್ರಯತ್ನಗಳು ನಿಷ್ಫಲವಾಯಿತು. ತಾನು ಅಭಯ ಪ್ರದಾನವಮಾಡಿದ ರಾಜಪುತ್ರನನ್ನು ಕಾಪಾಡಲಾರದಾದನು. ಆರಾತ್ರಿಯಲ್ಲಿಯೇ ಕುತುಬನ ಭಟರಿಂದ ಗಣೇಶದೇವನೂ ಸಹಬುದ್ದೀನನೂ ಬಂಧಿಸಲ್ಪಟ್ಟರು.



## ಪ್ರಕರಣ ೩೨.

ನದೀತೀರದೊಳೊಂದು ವಿಲಾಸಮಂದಿರವು ಸುಂದರ ತರೋದ್ಯಾನ ಪರಿವೃತವಾಗಿ ಶೋಭಿಸುತ್ತಿದ್ದಿತು. ಗಂಗಾ ತುಂಗ ತರಂಗ ಸೀಕರಗಳು ನೀರಿ

ಸ ದಡದೊಳಿರುವ ಹೂ ಹೊದರುಗಳಿಗೆ ಅಭಿಷೇಕ ಮಾಡುತಿದ್ದಿತು. ಎಲ್ಲೆಲ್ಲಿ ನೋಡಿದರೂ ಘಮಘಮಾಯಮಾನವಾದ ಪುಷ್ಪವಿಕಾಸಗಳೂ,ವನದ ರಾಮಣೀಯಕತೆಯೂ, ಪ್ರಶಾಂತತೆಯೂ, ಹೃದಯಕ್ಕೆ ಅಮಂದಾನಂದವನ್ನುಂಟುಮಾಡುತಿದ್ದಿತು. ಜಲಯಂತ್ರಗಳಿಂದ ಇಂಪಾದ ಧ್ವನಿಯೊಡನೆ ಸ್ವಚ್ಛವಾದ ಜಲಧಾರೆಗಳು ಮೇಲಕ್ಕೇರುತಿದ್ದುವು. ಪದ್ಮಪತ್ರ ಚಿತ್ರಶೋಭಿತವಾದ ವೊಂದು ನೀರಿನ ಕಾಲುವೆಯು ಮಲ್ಲಿಗೆಯ ಹೊದರುಗಳೂ, ಗುಲಾಬಿಯ ಅಂಟುಗಳೂ, ಉಳ್ಳ ಸ್ಥಳಗಳಲ್ಲಿ ಹರಿಯುತಿದ್ದಿತು. ಮಾರ್ಗಗಳ ಎಡಬಲಮಗ್ಗುಲುಗಳಲ್ಲಿ ಪೂರ್ವಿಕರಾದ ಪುರಾಣ ಪುರುಷರುಗಳ ಸ್ಫಟಿಕ ಶಿಲಾ ವಿಗ್ರಹಗಳು ವರಸೆ ವರಸೆ ಯಾಗಿರುತ ಪುರಾಣೋನ್ನತಿಯನ್ನು ಪ್ರಕಟಿಸುತಿದ್ದಿತು. ಒಂದುಕಡೆಯಲ್ಲಿ ರಾಧಿಕೆಯು, ಇನ್ನೊಂದು ಮಗ್ಗುಲೊಳು ಶ್ರೇಷ್ಠವಾದ ವೇಣುವನ್ನು ಧರಿಸಿದ ಶ್ರೀಕೃಷ್ಣನು, ಮತ್ತೊಂದು ಕಡೆಯೊಳು ಸಂಪಿಗೆಯಮರದ ನೆಳಲೊಳು ವೀಣಾಗಾನ ವಿಶಾರದೆಯಾದ ಶಾರದೆಯು, ಬೇರೊಂದೆಡೆಯಲ್ಲಿ ಕಮಲ ಸಂಭವೆಯಾದ ಲಕ್ಷ್ಮಿಯು, ವೊಂದು ಜಲಯಂತ್ರದ ಮುಂಭಾಗದೊಳು ವಲ್ಕಲಧಾರಿಣಿಯಾಗಿ ಒಂದು ಕೈಯೊಳು ಕುಂಭವುಳ್ಳವಳಾಗಿ ಯೆರಡನೆಯ ಕೈಯೊಳು ಜಿಂಕೆಯ ಮರಿಯನ್ನು ಸವರುತಿರುವ ಶಕುಂತಳೆಯು ವೊಂದು ಸ್ಥಳದಲ್ಲಿ ಮೋಹಿತೆಯಾಗಿ ಪ್ರಿಯತಮನಾದ ಉದಯನ ಮಹಾರಾಯನ ಮುಂದೆ ತಲೆತಗ್ಗಿಸಿಕೊಂಡು ನಿಂತಿರುವ ರತ್ನಾವಳಿಯೆ ಮೊದಲಾದ ವಿಗ್ರಹಗಳು ಪುರಾಣ ಕಾಲವನ್ನು ಸ್ಮರಣೆಗೆ ತರುತಿದ್ದುವು.

ದೂರದಲ್ಲಿದ್ದ ಚಂದ್ರಕಾಂತ ಶಿಲಾನಿರ್ಮಿತ ಮಂದಿರದ ಮೇಲ್ಭಾಗದಲ್ಲೊಂದು ನವಿಲು ಸಗರ್ವವಾಗಿ ತಲೆಯೆತ್ತಿ ನಿಂತು ತಳತಳನೆ ಮಿರುಗುದ್ದುವ ತನ್ನ ಪಿಂಛವನ್ನು ಬಿಚ್ಚಿ ಆಡುತಿದ್ದಿತು. ಒಂದು ನಿರ್ಮಲೋದಕ ತಟಾಕದಲ್ಲಿ ತಾವರೆ ಬಳ್ಳಿಗಳ ನಡುವೆ ಎರಡು ರಾಜಹಂಸಗಳು ಕ್ರೀಡಿಸುತಿದ್ದುವು. ಅವುಗಳ ಗೋಳಾಕಾರವಾದ ರೆಕ್ಕೆಗಳೂ, ರಮಣೀಯವಾಗಿ ಬಗ್ಗಿರುವ ಕಂಧರಗಳೂ, ಚಂದ್ರಕಾಂತ ಶಿಲೆಗಳ ಕೆತ್ತನೆ ಗೆಲಸವನ್ನು ನೆನಪಿಗೆ

ತರುತಿದ್ದಿತು. ಬೆಳ್ಳಿಯ ತೊಟ್ಟಿಲೊಳು ಬಂಗಾರದ ವಿಾನುಗಳುಅಲ್ಲಿಂದಿಲ್ಲಿಗೂ ಇಲ್ಲಿಂದಲ್ಲಿಗೂ ತಿರುಗುತ ಕಿರಣಗಳಂತೆ ಪ್ರಕಾಶಿಸುತಿದ್ದಿತು.ಅಂದವಾದ ರೆಕ್ಕೆಗಳುಳ್ಳ ರಾಮಗಿಳಿಗಳು ಬಂಗಾರದ ಸರಪಳಿಗಳಿಂದ ಕಟ್ಟಲ್ಪಟ್ಟು ಕೊಂಬೆಗಳಮೇಲೆ ಹಾರಾಡುತಿದ್ದುವು. ಕಾಡು ಪಾರಿವಾಳಗಳು ಪಂಜರಗಳಲ್ಲಿ ಕುಪ್ಪಳಿಸುತಿದ್ದುವು. ಗಿಡಗಳಮೇಲೆ ಗುಬ್ಬಿ ಹಕ್ಕಿಗಳು ಪಿಲಪಿಲಗುಟ್ಟುತಿದ್ದುವು. ಮಂಜಿನಹಾಗೆ ಬಿಳಿದಾದ ಮೈಯುಳ್ಳ ಒಂದು ಹೆಣ್ಣು ಜಿಂಕೆಯು ಗರಿಕೆ ಗರಿಗಳನ್ನು ಕಚ್ಚುತ ಹಸರು ಹುಲ್ಲಿನಮೇಲೆ ಮಲಗಿದ್ದಿತು. ಉದ್ದುದ್ದವಾದ ತಾಳೆಯ ಮರಗಳು ಒಂದು ಬಗೆಯಾದಧ್ವನಿಯಾಗಿಸುತಿದ್ದಿತು.

ಇಂತಹ ರಮಣೀಯ ಪ್ರದೇಶದೊಳು ಚಕ್ರವರ್ತಿನಿಯಾದ ಶಕ್ತಿಯು ಕುಳಿತಿದ್ದಳು. ಆಕೆಯು ತನ್ನ ಸವತಿಯರೊಡನೆ ಇರಲು ಇಷ್ಟಪಡಲಿಲ್ಲವಾದುದರಿಂದ ಸುಲ್ತಾನನು ಈಕೆಗೆ ಈ ಭವನವನ್ನು ಹೊಸತಾಗಿಕಟ್ಟಿಸಿದನು. ಆಕೆಯು ಮತಕ್ಕೆ ಬಾಹ್ಯನಾದರೂ ಆಕೆಯ ಇಷ್ಟಬಂದಂತೆ ಪೌರಾಣಿಕ ಪ್ರತಿಮೆಗಳನ್ನು ಇಟ್ಟುಕೊಳುವುದಕ್ಕೂ ಮತಧರ್ಮಗಳನ್ನು ಆಚರಿಸುವುದಕ್ಕೂ ಅಡ್ಡಿಮಾಡದೆ ಆಕೆಯು ಕೋರಿದುದೆಲ್ಲವನ್ನೂ ಕೊಡುತಿದ್ದನು. ಆದರೆ ಚಕ್ರವರ್ತಿನಿಗೇನಾದರೂ ಸಖವುಂಟೆ ? ಆಕೆಗೆ ಅಪಾರವಾದ ಸೌಂದರ್ಯ ಉಂಟು. ಆಕೆಯ ಶರೀರವು ಕೋಮಲವಾಗಿದ್ದಿತು. ಆಕೆಯ ಮುಖದಲ್ಲಿಯೆಂದಿನಂತೆ ಯೌವ್ವನವು ತುಳುಕಾಡುತಿದ್ದಿತು. ಆದರೂ ಆಕೆಯ ದೃಷ್ಟಿಯೊಳು ದೈನ್ಯತೆಯು ಇವೆಲ್ಲಕ್ಕೂ ಹೆಚ್ಚಾಗಿ ಗೋಚರಿಸುತಿದ್ದಿತು. ಕಿರುನಗೆಯನ್ನು ತೋರಿಸತಕ್ಕ ಕೆಂದುಟಿಗಳು ದುಃಖವನ್ನು ಸೂಚಿಸುತಿದ್ದಿತು. ಆಕೆಯ ಕೈಯಿಂದ ಮೇವು ತಿನ್ನುವ ಅಭ್ಯಾಸ ವಿದ್ದುದರಿಂದ ಜಿಂಕೆಯ ಮರಿಯು ಸಮಿಾಪದಲ್ಲಿ ಬಂದುನಿಂತಿತು. ಮಂದಹಾಸದಿಂದ ಅದನ್ನು ಆಕೆಯು ಕೈಯಿಂದ ನೀವಿದಳು. ಆ ಪುಷ್ಪತರು ವಿತಾನವು ಆಕೆಗೆ ಸ್ವಲ್ಪಮಟ್ಟಿಗೆ ಮನಸ್ತಾಪವನ್ನು ತಗ್ಗಿಸುತಿದ್ದುದರಿಂದ ಅಲ್ಲಿ ಸ್ವಲ್ಪ ಹೊತ್ತು ನಿಂತು ವಿಹರಿಸುವುದು ಆಕೆಗೆ ಇಷ್ಟವಾಗಿದ್ದಿತು. ಆಕೆಗೆ ಪರಿಸರವೆಲ್ಲವೂ ಮನೋಹರವಾಗಿದ್ದರೂ ಮನಸ್ಸುಮಾತ್ರ ಪರಿತಾಪ ಪಡುತಿದ್ದಿತು. ತನ್ನ ಬಾ

ಳಿವಿಯ ನಿಕೃಷ್ಟತೆಯು ಇನ್ನೂ, ಆಕೆಗೆ ಮನಸ್ಸಿನೊಳು ಬಾಧಿಸುತ್ತಿದ್ದುದ ರಿಂದ ಸಂತೋಷವನ್ನಾದರೂ, ಮನಶ್ಶಾಂತಿಯನ್ನಾದರೂ ಕಂಡು ಗುರುತರಿ ಯುಳು. ಆದುದರಿಂದ ಏಕಾಂತವನ್ನು ಅಪೇಕ್ಷಿಸುತ ಗಂಟೆಗಳ ಕಾಲವ ನ್ನು ಹಾಗೆಯೇ ಯುವೆ ಇಕ್ಕಿದೆ ನೋಡುತಿದ್ದಳು. ಅಷ್ಟರೊಳು ಸಾಯಂ ಕಾಲವಾಗಿ ನಭೋಮಂಡಲದಲ್ಲಿ ಚಂದ್ರನುದಯಿಸಿ ತಂಗಾಳಿಯು ಬೀಸು ತಿರಲು ಗಂಗಾತರಂಗಿಣೀ ಸೀಕರಗಳು ಆಕೆಯ ತಳಿರಡಿಗಳನ್ನು ತೊಯಿಸುತಿ ದ್ದಿತು. ಆ ಸಮಯದಲ್ಲಿ ಆಕೆಗೆ ಚಿಕ್ಕಂದಿನ ಸುಖದಿನಗಳೂ ತನ್ನ ಪ್ರೇಮ ವೂ ಅದರಿಂದುಂಟಾದ ದುಃಖವೂ, ಬಾಡಿಹೋದ ಹೂಸರವನ್ನು ಧೂಳಿ ನಲ್ಲಿ ಕಲೆಸಿದುದೂ, ಇವೆಲ್ಲವೂ ಜ್ಞಾಪಕಕ್ಕೆ ಬಂದು ದೊಡ್ಡದಾಗಿ ಬಿಸಿಬಿಸಿ ಯಾದ ನಿಟ್ಟುಸಿರು ಬಿಟ್ಟಳು. ಈಗ ಶೀತಕಾಲವಾಗಿರುವುದರಿಂದ ಹಗಲು ವಿನೋದವಾಗಿರುತಿದ್ದರೂ, ಇರುಳು ಚಳಿಯಿಂದ ಹಿಂಸೆಯಾಗಿದ್ದಿತು. ಅದ ರಿಂದ ಶಕ್ತಿಯು ವೊಂದು ಮನೆಯೊಳಕ್ಕೆ ಹೋದಳು. ಅಲ್ಲಿ ಲತಾಗೃಹಗ ಳೂ, ಜಲಯಂತ್ರಗಳೂ, ಬೊಂಬೆಗಳೂ, ಮೊದಲಾದ ಮನೋಹರವಾದ ವಸ್ತುಜಾಲವು ವಿಸ್ತಾರವಾಗಿ ಅಣಿಯಾಗಿರುವುದರಿಂದ ಅದು ಕೂಪ ವೊಂದು ಉದ್ಯಾನವನದಂತೆಯೇ ಇದ್ದಿತು. ಅಷ್ಟರೊಳು ಯಾರೋ ಬಂದುದರಿಂದ ಆಕೆಯ ಯೆಣಿಕೆಗಳೆಲ್ಲಕ್ಕೂ ಅಂತರಾಯ ಸಂಭವಿಸಿತು. ಆಕೆಯ ಮುಖವೈ ಖರಿಯಲ್ಲಿ ವೊಂದು ಬಗೆಯಾದ ಮಾರ್ದ್ವ, ತಿರಸ್ಕಾರ, ಮತ್ತು ಬೇಸರಗಳು ತೋರ್ಪಡುತ ಆತನೊಡನೆ ಮಾತಾಡದೆ "ಏನದು ! ಸಹಬುದ್ಧೀನನನ್ನು ಕೊಲಲೆಳಸಿ ಸೆರೆಹಿಡಿದಿರುವಂತೆ ತಿಳಿಯಬಂದಿತು. ಅಂತಹ ಕ್ರೂರಾತ್ಮನ ನ್ನು ಮದುವೆಯಾದುದನ್ನು ಕುರಿತು ನಾನು ನಾಚುಗೆ ಗೊಳುವೆನು" ಎಂದು ಕೋಪದಿಂದ ನುಡಿದಳು.

ಆ ದಿನ ಸಾಯಂಕಾಲದೊಳು ಆಕೆಯು ಅಷ್ಟು ತ್ವರೆಯಲ್ಲಿ ತನ್ನನ್ನು ನೋಡಬಂದುದಕ್ಕೆ ಸುಲ್ತಾನನು ಅತ್ಯಾಶ್ಚರ್ಯಗೊಂಡನು. ಪ್ರತಿದಿನವೂ ಬ ಹಳ ಹೊತ್ತು ಕಾದಿದ್ದಲ್ಲದೆ ಆಕೆಯು ದರ್ಶನ ಕೊಡುವ ಪದ್ಧತಿಯಿಲ್ಲ. ಅದು ಶಕ್ತಿಯು ತನ್ನ ಕೈಮೊಗುವನ್ನು ಯೆದೆಹಾಲುಣಿಸಿ ಸಮಾಧಾನಪಡಿ

ಸಿ ಅದರೊಡನೆ ಆಟವಾಡುತಿರುವ ಸಮಯವು. ಆದಿನ ಆಕೆಗೆ ಸಹಬುದ್ದೀನನನ್ನು ಸೆರೆಹಿಡಿದ ಸಂಗತಿಯು ತಿಳಿದುದರಿಂದ ಅದರ ನಿಜಸ್ಥಿತಿಯನು ಪತಿಯಿಂದಲೇ ತಿಳಿದುಕೊಳ್ಳಬೇಕೆಂದು ತ್ವರೆಯಲ್ಲಿ ಪತಿಸಂದರ್ಶನಕ್ಕೆ ಬಂದಳು.

ಆದರೂ ಆಕೆಯು ಸುಲ್ತಾನನನ್ನು ಪ್ರೀತಿಪುರಸ್ಸರವಾಗಿ ಆದರಿಸುವ ಸ್ಥಿತಿಯೊಳಿಲ್ಲೆಂದು ಆತನಿಗೆ ಒಡನೆಯೇ ತಿಳಿದು ಆಕೆಯು ಮಗ್ಗುಲೊಳೊಂದು ಮೃದುವಾದ ಆಸನದಮೇಲೆ ಕುಳಿತು ಆತನು "ನನ್ನ ಪ್ರಾಣಾಧಾರವಾದ ಸ್ತ್ರೀಗಿಂತಲೂ ಕ್ರೂರನೇ ? ನಾನು ನನ್ನ ಸರ್ವಸ್ವವನ್ನೂ ನಿನ್ನ ಅಡಿಗಳಿಗೆ ಸಮರ್ಪಿಸಲಿಲ್ಲವೆ ? ಅದರೂ ನೀನು ನನಗೆ ವಶವಾಗದೆ ಯಾರೋ ಶತ್ರುವನ್ನು ಕೊಲುತಿರುವುದನ್ನು ಕುರಿತು ನನ್ನನ್ನು ಕ್ರೂರನೆಂದು ನಿಂದಿಸುತಿರುವೆ."

ಶಕ್ತಿಯು ತನ್ನನ್ನು ಪತಿಯು ಅನಾದರಣೆಮಾಡಿದರೂ ತಾಳುವಳಿ ಅಲ್ಲದೆ ಆತನ ಅತಿವಿನಯವನ್ನು ಮಾತ್ರ ಆಕೆಗೆ ಅಸಹ್ಯವನ್ನು ಹುಟ್ಟಿಸಿತು. ಆಕೆಯು ಕಟ್ಟಕಡಲದೆ "ಮುಂದೆ ಯಾವಾಗಲಾದರೂ ನಿನಗೆ ಅಪಕಾರವಮಾಡುವುದರಿಂದ ಕೇಡುಮಾಡೀತೋ,ಯೇನೋ, ಎಂಬ ಭಯದಿಂದ ನೀನು ವೊಬ್ಬ ನಿರಪರಾಧಿಯನ್ನು ಕೊಲ್ಲುತಿರುವೆ. ಇದೇನೆ ಮಹಮ್ಮದೀಯರ ಶೌರ್ಯವು ; ಇದುವರೆಗೆ ಏಳುಮಂದಿ ಸೋದರರನ್ನು ಕೊಂದ ಪಾತಕವನ್ನು ಮಡಲಲ್ಲಿ ಗಂಟಿಕ್ಕಿರುವೆ. ಅಷ್ಟರೊಳು ತೃಪ್ತನಾಗದೆ ಯಾವದೋಷವನ್ನೂ ಅರಿಯದ ಯೆಳೆ ಪಸುಳೆಯನ್ನು ಕೂಡ ಕೊಲ್ಲಬೇಕಾಗಿದ್ದೀತು ? ಇದೀಗ ಹೇಡಿಗಳ ಲಕ್ಷಣವು" ಎಂದು ನಿಂದಿಸ ತೊಡಗಿದಳು.

"ನಿಮ್ಮ ಹಿಂದೂಶೂರರು ನಿನ್ನಂತಹ ರತ್ನವು ಹೆರವರಪಾಲಾಗಿ ಹೋಯಿತೆಂದು ಕಾಣರೆಂದು ತೋರುತಿದೆ. ಇಲ್ಲದಿದ್ದರೆ ವೊಬ್ಬಹೇಡಿಯು ನಿನ್ನನ್ನು ಕೈಹಿಡಿದರೆ ಸುಮ್ಮನೇಕಿರುತಿದ್ದರು ? ಹೇಡಿತನಕ್ಕೇ ಜಯವೂ ಶೌರ್ಯಕ್ಕೇ ಅಪಜಯವೂ, ದೊರೆಯುತಿರುವಂತೆ ತೋರುತ್ತದೆ " ಎಂದು ಇಂತಹ ಕಟಕಿಮಾತುಗಳಿಂದ ಸುಲ್ತಾನನು ಆಗಿಂದಾಗ ಶಕ್ತಿಯನ್ನು ಎತ್ತಿ

ಕಿವಿಯುತಿದ್ದನು. ಈ ಮಾತುಗಳು ನಿಶ್ಚಯವಾದುದರಿಂದ ಶಕ್ತಿಗೆ ಯೆಲ್ಲಿಲ್ಲದ ಆಗ್ರಹವೂ ಬಂದು ಮುಖವು ಕೆಂಪಡರಿತು. ಸಮೀಪದಲ್ಲಿದ್ದ ಗಿಡಗಳಿಂದೊಂದು ಹೂ ಕೊಯ್ದು ಬೆರಲಿನಿಂದ ಕಿವಿಚಿ ಬಿಸಾಟಳು. ಈ ಮೊಳಗೆ ಜಲಯಂತ್ರಗಳಿಂದ ಸುರಭಿಳವಾರಿಪೂರಗಳು ಪ್ರವಹಿಸಲು ಆ ಮಂದಿರವೆಲ್ಲವೂ ಪರಿಮಳಪರಿಸಕ್ತವಾಯಿತು. ಆದರೆ ಶಕ್ತಿಗಿದೊಂದೂ ಗೊತ್ತಾಗುವುದಿಲ್ಲ. ಆಕೆಯು ಮೋರೆನೋಟಗಳಿಂದ ನೋಡುತ ವಿಷಾದವನ್ನೂ ನಿರಸನಭಾವವನ್ನೂ, ಸೂಚಿಸುತಿದ್ದಳು. ಅಲ್ಲಿನ ಕರ್ಪೂರದೀಪಕಾಂತಿಗಳು ಆಕೆಯ ಮುಖದಮೇಲೆ ಪ್ರಸರಿಸಿ ಪ್ರಕಾಶಪಡಿಸುತಿದ್ದಿತು. ಸುಲ್ತಾನನು ಆಕೆಯನ್ನು ತಲೆಯೆತ್ತಿನೋಡಿ “ ಪ್ರೇಯಸೀ ! ಪ್ರಾಣನಾಯಕೀ? ನಿನ್ನ ಸೌಂದರ್ಯಕ್ಕೆ ಸೋತುಹೋದೆನು. ನೀನು ನನ್ನನ್ನು ಮೋಡಿಸಿದರೂ ನಾನು ನಿನ್ನನ್ನು ಬಿಡಲಾರದವನಾಗಿರುವೆನು ” ಎಂದು ವ್ಯಾಮೋಹವು ಮಿತಿಮೀರಿ ಆಲಿಂಗನದಿಂದ ಚುಂಬಿಸಿದನು.

ಇಲ್ಲಿಗೆ ಐದು ವರುಷಗಳಿಂದ ಆಕೆಯು ಆತನಿಗೆ ಗೃಹಿಣಿಯಾಗಿದ್ದು ಕೂಡ ಆತನ ಸರಸಗಳಿಗೆ ಸಾಧ್ಯವಾದಷ್ಟು ಮಟ್ಟಿಗೂ ತಪ್ಪಿಸಿಕೊಳುತಿದ್ದಳು. ಈದಿನ ಅವು ಮೊದಲಿಗಿಂತಲೂ ಕ್ರೂರತಮಗಳಾಗಿ ಬಹು ವೆಗಟಾಗಿ ಬಿಟು ಆತನನ್ನು ಸೇರುವುದಕ್ಕೇ ಮನವೊಪ್ಪದೆ ವೈಮನಸ್ಯ ಹುಟ್ಟಿದುದರಿಂದ ತನ್ನಲ್ಲಿ ತಾನು ಹೀಗೆಂದುಕೊಂಡಳು. “ ಗಣೇಶದೇವಾ ! ಯೇನಮಾಡಿದೆ? ನಾನು ಈದಿನ ಜೀವಿಸಿರುವೆನೇ ! ನಿನ್ನನ್ನು ಸಾಧಿಸುವುದಕ್ಕೋಸ್ಕರವೇ ? ” ಎಂದು ತನ್ನಲ್ಲಿ ಯೆಣಿಸಿಕೊಳುತಿದ್ದಳು.

ಅಷ್ಟರೊಳು ಅಳುತಿರುವ ಬಾಲಿಕೆಯನ್ನು ಯೆತ್ತಿಕೊಂಡು ಪರಿಚಾರಿಕೆಯೊಬ್ಬಳು ಬಂದು “ ತಾಯೀ ! ಈ ರಾಣಿಯವರನ್ನು ನಾನು ಹಿಡಿಯಲಾರದೆ ಇಲ್ಲಿಗೆ ಕರೆತಂದೆನು ” ಎಂದು ಹೇಳಿದಳು. ಆ ಎಳೆಪಸುಳೆಯು ತಾಯಬಳಿಗೆ ಓಡಿ ಓಡಿಬಂದು ಅಳುತಳುತ “ ನಾನು ನಿನ್ನ ಬಳಿಯಲ್ಲಿಯೇ ಇರುವೆನು ನಾನು ಹೋಗಲಾರೆ ” ನೆಂದು ಹೇಳಿತು.

ಶಕ್ತಿಯು. ಪರಿಚಾರಿಕೆಯನ್ನು ಕಳುಹಿಕೊಟ್ಟು ಮೊಗುವನ್ನು ಕಂಕ್ಳೊಳಗೊಟ್ಟು ಮುದ್ದಾಡಲು ಅದು ಕಿಳಗಿಳಿದು "ತಾಯೀ! ನೀನು ಒಳ್ಳೆಯವಳಲ್ಲ. ನಾನು ತಂದೆಯ ಬಳಿಗೆ ಹೋಗುವೆನು" ಯೆಂದು ತಂದೆಯ ಕಾಲ್ಗಳಮೇಲೇರಿತು.

ಶಕ್ತಿಯ ಕೋಪವೆಲ್ಲವೂ ತನ್ನ ಮೊಗುವನ್ನು ನೋಡಿದೊಡನೆಯೇ ಕನಿಕರವಾಗಿ ಮಾರ್ಪಾಗಿಬಿಟ್ಟಿತು. ತನ್ನ ಅವಸ್ಥೆಗಾಗಿ ತನಗೇ ನಿರಾಶೆಯೂ ವೊಂದು ಬಗೆಯಾದ ಕರುಣೆಯೂ, ಹುಟ್ಟಿತು. ಯಾವಾತನನ್ನು ತಾನು ಅಷ್ಟು ಕಾಠಿಣ್ಯವಾಗಿ ನಿರಸನ ಮಾಡುತಿರುವಳೋ, ಆತನೇ ತನ್ನ ಮೊಗುವಿಗೆ ತಂದೆಯಾಗಿದ್ದನು. ಯೆಷ್ಟು ಪ್ರಯತ್ನಿಸಿದರೂ ತಾನು ಈ ಬಂಧನವನ್ನು ಬಿಡಿಸಿಕೊಳಲಾರದವಳಾಗಿದ್ದಳು. ಆಕೆಯ ದೌರ್ಭಾಗ್ಯಸ್ಥಿತಿಯು ಯೆಂತಹ ಘೋರತವುವಾದುದೋ ನೋಡಿವಿರಾ? ತಂದೆಯು ಕೆಲವು ಹೂಗಳನ್ನು ಕೊಯ್ದು ಮೊಗುವಿಗೆ ಕೊಟ್ಟನು. ಆಮೊಗು ಅವುಗಳೊಡನೆ ಸ್ವಲ್ಪ ಹೊತ್ತು ಆಟಗಳಾಡಿ, ನೀರಿನ ತೊಟ್ಟಿಯೊಳು ಬಿಸುಟಿತು. ಶಕ್ತಿಯ ಕಣ್ಗಳು ಆಟವಾಡುತಿದ್ದ ಮೊಗುವನ್ನು ನೋಡುತಿದ್ದುವು. ಮನಸ್ಸು ಪರಿತಾಪ ಪಡುತಿದ್ದಿತು. ತಂದೆಯು ಮೊಗುವನ್ನು ಮುದ್ದಾಡಿ ಮುಂದಲೆಯನ್ನು ಮೂಸಿ ತಾಯನ್ನು ನೋಡಿ "ಸಖೀ? ಯಿದಕ್ಕೋಸ್ಕರ ನಾನು ಶತ್ರುಗಳೆಲ್ಲರನ್ನೂ ಕೊಲ್ಲುತಿದೇನೆ. ಯಿಲ್ಲದಿದ್ದರೆ ನನ್ನ ತರುವಾಯ ನಿನ್ನನ್ನೂ ಯಿದನ್ನೂ ಕಾಪಾಡುವರಾರು?" ಯೆಂದನು.

"ಇದು ನಿರ್ದ್ರೋಹಿಯಾದ ಯೆಳೆ ಹುಡುಗನ ಕೊಲೆಯನ್ನು ಸಮರ್ಥಿಸಲಾರದು. ಆತನ ದಿಕ್ಕಿಲ್ಲದಿರುವಿಕೆಯೇ ಆತನಿಗೆ ಬಲವೆಂದು ತಿಳಿ. ಆದರ ದೆಸೆಯಿಂದ ಅನೇಕರು ಅವನ ಪಕ್ಷವನ್ನವಲಂಬಿಸುವರು. ಆದುದರಿಂದ ದೇಶದಲ್ಲಿ ಶಾಂತತೆ ಯಿರಲಾರದು. ಯೆಂದೆಂದಿಗೂ ನಿರ್ದ್ರೋಹಿಗಳನ್ನು ಕೊಲದಿರು. ಅದು ರಾಜಧರ್ಮವಲ್ಲವು. ಪ್ರಾಣಗಳಿಗೆ ಅಂಜಿ ಅವಿತುಕೊಂಡಿರುವುದು ಆ ಹುಡುಗನ ತಪ್ಪಲ್ಲ. ಆತನೇನೂ ತಪ್ಪುಮಾಡಿಲ್ಲ ಶಾಂತತೆಗೆ

ಭಂಗ ಬಂದೀತೆಂಬ ಭಯವಿದ್ದರೆ ತಪ್ಪಿತಸ್ಥನನ್ನು ಕೊಲಿಸು, ನಿನ್ನ ಆಜ್ಞೆಗೆ ವಿರೋಧವಾಗಿ ಆತನಿಗೆ ಸ್ಥಳಕೊಟ್ಟವನನ್ನು ದಂಡಿಸು. ''

ಈ ಮಾತುಗಳನ್ನು ಶಕ್ತಿಯು ನುಡಿಯಲು ಸುಲ್ತಾನನು ವಿಸ್ಮಯ ಚೋದಿತನಾದನು. ಆಕೆಯು ಇನ್ನೂ ಗಣೇಶದೇವನಮೇಲೆ ಪ್ರೀತಿಯುಳ್ಳ ವಳಾಗಿರುವಳೆಂಬುದನ್ನು ಆತನು ಬಲ್ಲನು.

ಆಕೆಯ ಮನಸ್ಸಿನ ಆಳವು ಆತನಿಗೆ ಸಿಕ್ಕಲಿಲ್ಲ. ಸ್ತ್ರೀಯ ಪ್ರೀತಿಗೂ, ಕಾರ್ಪಣ್ಯಕ್ಕೂ, ಯಾವುದು ಸೀಮೆಯೆಂಬುದಾತನಿಗೆ ತಿಳಿಯದೆಹೋಯ್ತು. ಆದರೂ ಆಕೆಯ ಮಾತುಗಳು ಆತನಿಗೆ ಸಂತೋಷಪಡಿಸಿದುವಾದುದರಿಂದ '' ಗಣೇಶದೇವನೂ ಸೆರೆಹಿಡಿಯಲ್ಪಟ್ಟಿರುವನು '' ಯೆಂದು ಮಾರುತ್ತರ ಕೊಟ್ಟನು.

'' ಬಂಧಿಸಲ್ಪಟ್ಟನೇ ? ''

'' ಅಹುದು. ತಿಂಗಳಿಗೆ ಮೇಲೆಯೇ ಆಯ್ತು. ''

ಮೊಗು:-ಆಮಾತನ್ನು ಕೇಳಿ ''ನಾನು ಗಣೇಶನನ್ನು ಮುರಿದು ಹಾಕಿದೆನು. ಸುಂದರಲಾಲನು ನನಗೆ ಕೊಟ್ಟನು. ಅದು ಚೆನ್ನಾಗಿಲ್ಲ. '' ಅಂದಿತು.

ತನ್ನ ತಾಯ ಮನಸು ಯೆಷ್ಟು ಪರಿತಾಪ ಪಡುತಿದ್ದಿತೋ, ಪಾಪ ! ಆ ಮೊಗುವಿಗೇನು ತಾನೇ ತಿಳಿಯುವುದು ? ತೋಟದವನು ಆದಕ್ಕೊಂದು ಮಣ್ಣಿನ ವಿನಾಯಕನನ್ನು ಕೊಟ್ಟಿದ್ದನು. ಚೆನ್ನಾಗಿಲ್ಲವೆಂದು ಅದನ್ನು ಮುರಿದುಬಿಟ್ಟಿತು.



## ಪ್ರಕರಣ ೩೩.

ಸಹಬುದ್ದೀನನು ಖೈದಿಯಾಗಿದ್ದನು. ಅವನ ಗತಿಯನ್ನು ಕುರಿತು ಸಭೆಯಲ್ಲಿ ಚರ್ಚೆ ನಡೆಯಿತು. ಸುಲ್ತಾನನು ಮಾತ್ರ ಆ ಸಭೆಯಲ್ಲಿರಲಿಲ್ಲ.

ಆ ಯೆಳೆ ಹುಡುಗನನ್ನು ಕೊಲಿಸಿದಲ್ಲದೆ ರಾಜ್ಯಕ್ಕೆ ಕ್ಷೇಮವಾಗಲಾರದಾದುದರಿಂದ ಅವನನ್ನು ಕೊಲಲೇಬೇಕೆಂಬುದು ಕುತುಬನ ಅಭಿಪ್ರಾಯವು. ಆದರೆ ವುಳಿದ ಸಭಿಕರಾರೂ ಆತನ ಮಾತನ್ನು ಅಂಗೀಕರಿಸಿದವರಾಗಲಿಲ್ಲ. ಸುಲ್ತಾನಾರಾಣಿಯು ಮಾತಿನ ತರುವಾಯ ಸುಲ್ತಾನನಿಗೆ ಕುತುಬನ ಮಾತೇ ಪಥ್ಯವಾಗಿದ್ದುದರಿಂದ ಅವನನ್ನು ಆ ಯೆಳೆ ಪಸುಳೆಯಾದ ರಾಜಕುಮಾರನ ಪಕ್ಷವಾಗಿ ಸುಲ್ತಾನನೊಡನೆ ಮಾತಾಡಲು ಸಭಿಕರು ಪ್ರಾರ್ಥಿಸಿದರು. ಅದಕ್ಕೆ ಕುತುಬನು ಮುಖದಲ್ಲಿ ದೈನ್ಯವನ್ನು ತೋರುತ ತನ್ನ ಮೇಲೆ ಸುಲ್ತಾನರಿಗೆ ಅನುಗ್ರಹವು ತಪ್ಪಿರುವುದೆಂಬದಾಗಿ ಸಮಯೋಚಿತವಾದ ಪ್ರತ್ಯುತ್ತರವನ್ನು ಹೇಳಿ ತಪ್ಪಿಸಿಕೊಂಡನು. ಅದನ್ನು ನೋಡಿ ನ್ಯಾಯಶೀಲನೂ, ನಿಷ್ಕಪಟಿಯೂ, ಆದ ಅಜೀಂಖಾನನಿಗೆ ಸಹಬುದ್ದೀನನು ತನ್ನ ಪ್ರಾಣವನ್ನು ಕಾಪಾಡಿದವನಾದುದರಿಂದ ಮಹದಾಗ್ರಹ ಬಂದು "ಸಿಕಂದರುಷಾ ಸುಲ್ತಾನನ ಮೇಲೆ ತಿರುಗಿಬಿದ್ದು ಗಯಜುದ್ದೀನನನ್ನು ಸಿಂಹಾಸವನ್ನೇರಿಸಿದವರು ನಾವು. "ಈ ಕಾರ್ಯವನ್ನು ಮಾಣದೆ ಯಿನ್ನೂ ಸಹಬುದ್ದೀನನನ್ನು ಬಿಟ್ಟುಕೊಡದಿದ್ದರೆ ನಾನೇ ಆತನಿಗೋಸ್ಕರ ಯುದ್ಧಮಾಡುವೆನು." ಯೆಂದು ಮಹಾ ಕೋಪಾವೇಶದಿಂದ ನುಡಿದನು.

ಇದಕ್ಕೆ ಕುತುಬನು ನಿರಾಶೆಯುಳ್ಳವನಂತೆ ನಟಿಸುತ "ಅದರಿಂದೇನು ಪ್ರಯೋಜನ? ನಾವೇನು ಮಾಡಿದರೂ ರಾಜಕುಮಾರನ ಪ್ರಾಣಗಳುಳಿಯಲಾರದು, ವುಳಿಸಲಾರೆವು. ನಾವು ಯಿದಿರು ಬಿದ್ದೆವಾದರೆ ನಮಗೂ ಅವನ ಗತಿಯೇ ಆಗುವುದು. ದೇಶವು ಈಗ ಪಾದುಷಾಹನ ಕೈಯೊಳಗಿಲ್ಲ. ಆ ಮಹಾ ತಾಯಿಯಾದ ಸುಲ್ತಾನಾ ಅಲ್ಲವೆ ಈಗ ರಾಜ್ಯವಾಳುತಿರುವಳು." ಅಂದನು.

ಸಭಿಕರೆಲ್ಲರೂ ಅದಕ್ಕೆ ಅಂಗೀಕಾರಕೊಟ್ಟು ಸುಲ್ತಾನನ ಕೈಯಿಂದ ಘೋರಕೃತ್ಯಗಳನ್ನು ಹೊಸ ಸುಲ್ತಾನಿಯೇ ಮಾಡಿಸುತಿರುವಳೆಂದು ಆಕೆಯನ್ನು ಯೆಲ್ಲರೂ ಏಕವಾಕ್ಯತೆಯಿಂದ ನಿಂದಿಸಿದರು. ಈಗ್ಗೆ ಕುತುಬನಿಗೆ ಆಗಬೇಕಾಗಿದ್ದ ಕಾರ್ಯ ನೆರವೇರಿತು. ತಾನು ಮಾಡುವ ಕಾರ್ಯಗಳೆಲ್ಲವೂ ನ್ಯಾಯವಾಗಿರುವಂತೆ ತೋರಿಸುವಿಕೆಯೇ ಆತನಿಗೆ ಬೇಕಾದುದು. ಪತಿಯ ಬಳ

ಯಲ್ಲಿ ಅತ್ಯಂತವಾದ ಸಲಿಗೆ ಇರುವುದೆಂದುಅವನಿಗೆಶಕ್ತಿಯುಮೇಲೆ ಅಸೂಯೆ ಹೆಚ್ಚು. ನಿಜಸ್ಥಿತಿಯಲ್ಲಿ ರಾಜಕೀಯ ವಿದ್ಯಮಾನಗಳಲ್ಲಿ ಶಕ್ತಿಯು ಯೆಂದಿಗೂ ಸಂಬಂಧ ವುಂಟುಮಾಡಿಕೊಳಲಿಲ್ಲವಾದರೂ ಅವನುಮಾತ್ರ ತನಗೆ ಬದುಲಾಗಿ ಆಕೆಯು ರಾಜನಿಗೆ ಉಪದೇಶಿನಿಯಾಗಿರುವುದರಿಂದ ತನ್ನ ಮಾತು ನಡೆಯುವುದಿಲ್ಲೆಂದು ಯೆಣಿಸುತಿದ್ದನು. ಸುಲ್ತಾನನು ಯಾವಾಗಲಾದರೂ ತಾನು ಹೇಳಿದ ಮಾತನ್ನು ಕೇಳದೆ ಹೋದರೋ ಅಷ್ಟೆಲ್ಲಕ್ಕೂ ಶಕ್ತಿಯೇ ಕಾರಣವೆಂದೆಣಿಸಿ ಕುತುಬನು ಆಕೆಯನ್ನು ತನ್ನಲ್ಲಿ ತಾನು ನಿಂದಿಸುತ ಅಸೂಯೆಗೊಳುತಿರುವನು. ಸ್ವಲ್ಪಕಾಲದ ಹಿಂದೆ ಕುತುಬನು ಕೆಲಮಂದಿ ದಾರಿಹೋಕರನ್ನು ತನಗೆ ಸಲಾಮು ಮಾಡಲಿಲ್ಲೆಂಬ ಕಾರಣದಿಂದ ಕಟ್ಟಿಹಾಕಿಸಿ ಸಾಯಬಡಿಸಿದನು. ಇದನ್ನು ನೋಡಿ ಶಕ್ತಿಯ ಮಗಳು ಆಳುತ ತಾಯಿಯಬಳಿಗೈದಿ ನಡೆದುದನ್ನು ನಿವೇದಿಸಿದಳು. ಶಕ್ತಿಯು ಆ ಸಂಗತಿ ಯೇನೆಂದು ವಿಚಾರಿಸಿದಳಾದರೂ ನಿಜಸ್ಥಿತಿಯು ಆಕೆಗೆ ಗೊತ್ತಾಗಲಿಲ್ಲ. ಅವರು ಹೆಂಡಕುಡಿದುಅರಮನೆಯೊಳಕ್ಕೆ ಪ್ರವೇಶಿಸುತಿದ್ದರೆಂದು ಆಕೆಗೆ ವರದಿ ಹೇಳಿಸಿದನು. ಆದರೂ ಚಕ್ರವರ್ತಿನಿಯು ಹೇಗೋ ಅವರನ್ನು ಕ್ಷಮಿಸಲ್ಪಡುವಂತೆ ಮಾಡಿದುದೂ ಅಲ್ಲದೆ ಅವರಲ್ಲೊಬ್ಬನಾದ ಸುಂದರಲಾಲನನ್ನು ತೋಟದ ಕಾವಲುಗಾರನಾಗಿ ನೇಮಿಸಿದಳು. ಕುತುಬನಿಗೆ ಅತ್ಯಾಗ್ರಹ ಬಂದಿತಾದರೂ ಅದನ್ನು ಅಣಗಿಸಿಕೊಂಡು ಸುಲ್ತಾನಾ ಶಕ್ತಿಯ ದಯಾರಸವನ್ನು ಸುಲ್ತಾನರವರ ಬಳಿ ಹೊಗಳಿ ಸಭ್ಯರೊಡನೆ ಸುಲ್ತಾನಾ ಶಕ್ತಿಯು ಹಿಂಸೆಯಿಂದ ಅವರನ್ನು ತಾನೇ ತಪ್ಪಿಸಿದೆನೆಂದು ಹೇಳಿದನು.

ಸುಲ್ತಾನನ ಮಗಳು ಇಂತಹ ಮಾತುಗಳನ್ನು ಹೇಳುವುದರಿಂದ ತನಗೆ ಕೇಡೊದಗುವುದೆಂದರಿತು, ಆಕೆಯು ಬರುತ ಬರುತ ವಯೋವಂತಳಾಗುತಿರುವುದರಿಂದ ಇನ್ನುಮೇಲೆ ಜನಾನಾದಲ್ಲಿರಬೇಕಾದುದೇ ವಿನಾ ಸಭಾಪ್ರವೇಶಮಾಡಲೇಸ ಬಾರದೆಂದು ಚಕ್ರವರ್ತಿಯೊಡನೆ ಹೇಳಿ ಹಾಗೆ ಕಟ್ಟುಮಾಡಿಸಿದನು. ಇವೆಲ್ಲಕ್ಕೂ ಕಾರಣವು ಆಕೆಯ ತಾಯಿ ಯೆಂಬುದು ಬಲ್ಲವನಾದರೂ ಆದಕ್ಕೂ ಹೆಚ್ಚಾಗಿ ಯೇನನ್ನೂ ಮಾಡಲಾರದವನಾದನು. ರಾ

ಜಕೀಯವಿದ್ಯಮಾನಗಳಲ್ಲಿಯೂ ಕೂಡ ಆಕೆಯ ಪ್ರಭಾವವು ಸಾಗುತಿದೆಯೆಂದು ಕುತುಬನ ಮನಸಿಗೆ ಬಂದಬಳಿಕ ತಾಳಲಾರದೆ ಹೋದನು. ಆಕೆಯನ್ನು ಹೇಗಾದರೂ ವಂಚಿಸಬೇಕೆಂದೆಣಿಸಿ ಚಕ್ರವರ್ತಿಯೊಡನೆ ಸಹಬುದ್ದೀನನನ್ನು ಕೊಲಿಸಬೇಕೆಂದು ಬೋಧಿಸುತ ಬಂದನು. ಆದರೆ ಮೊದಮೊದಲು ಸಹಬುದ್ದೀನನನ್ನು ಕೊಲಿಸಲಪೇಕ್ಷಿಸಿದ್ದ ಚಕ್ರವರ್ತಿಯ ಮನೋಧರ್ಮವು ಈಗ ಬದುಲಾಗಿರುವುದನ್ನು ನೋಡಿ ಕುತುಬನಿಗೆ ಆಶ್ಚರ್ಯವುಂಟಾಗಿ ಇದುಕೂಡ ಚಕ್ರವರ್ತಿನಿಯ ಪ್ರಭಾವವೇಸರಿ, ಯೆಂದವನು ನಿರ್ಣೈಸಿದನು. ಈ ಕಾರಣದಿಂದ ಸಹಬುದ್ದೀನನನ್ನು ದೇಶದಲ್ಲಿ ನೆಮ್ಮದಿಯಾಗಿ ಬಿಟ್ಟುದಾದರೆ ಅವನು ಯಾವಾಗಲಾದರೂ ಅಪಾಯವನ್ನುಂಟುಮಾಡುವನೆಂದು ಪಟ್ಟಾಗಿ ಪ್ರಭುವಿಗುಪದೇಶಿಸಿದನು. ಒಂದುವೇಳೆ ಅವಶ್ಯಕವಾದರೆ ದಿನಾಜಪುರಾಧಿನಾಥನೊಡನೆ ಸಂಧಿಮಾಡಬಹುದೆಂದು ಕೂಡ ಹೇಳತೊಡಗಿದನು. ಹೀಗೆ ಹೇಳುವುದಕ್ಕು ಕೂಡ ಅವನಿಗೆ ಚಕ್ರವರ್ತಿನಿಯಲ್ಲಿದ್ದ ಅಸೂಯೆಯೇ ಕಾರಣವು. ಆಕೆಗೆ ಗಣೇಶದೇವನಲ್ಲಿ ವೈರವೆಂದು ಕುತುಬನ ಎಣಿಕೆಯು. ಗಣೇಶದೇವನೊಂದುಸಲ ಮಾತುಕೊಟ್ಟರೆ ಅವನ್ನು ತಪ್ಪುವನಲ್ಲವೆಂದು ಚಕ್ರವರ್ತಿಯೊಡನೆ ಹೇಳಿದನು.

ಚಕ್ರವರ್ತಿಯು "ಆತನು ಹಾಗೆ ಮಾತುಕೊಡದಿರುವಲ್ಲಿ ಆಗಬೇಕಾದುದೇನು? ಅಂತಹ ಸಂದರ್ಭದಲ್ಲಿ ನಾನು ಅವನನ್ನು ಕೂಡ ಶಿಕ್ಷಿಸಬೇಕಾಗುವುದು. ಆತನಿಲ್ಲದಿದ್ದರೆ ಸಹಬುದ್ದೀನನು ಬೆಂಬಲವಿಲ್ಲದವನಾಗುವನು. ಮಹಾರಾಜನು ಮರಣಿಸಿದನಾದರೆ ಅವನನ್ನು ಬಿಟ್ಟುಕೊಡಬಹುದು" ಅಂದನು.

ಮತ್ತೊಂದು ಸಮಯದಲ್ಲಾಗಿದ್ದರೆ ಕುತುಬನು ಅದಕ್ಕೆ ಅಂಗೀಕರಿಸಿಯೇ ಇರುವನು. ಆದರೆ ಈ ಆಲೋಚನೆಯು ಚಕ್ರವರ್ತಿನಿಯು ಹೇಳಿರಬಹುದೆಂದೂಹಿಸಿದ್ದುದರಿಂದ ಯೇನೂ ತೋರದೆ ಕೋಪಾವಿಷ್ಟನಾಗಿ ಸಹಬುದ್ದೀನನನ್ನು ಕೊಂದುತೀರಬೇಕೆಂದು ಪಟ್ಟುಹಿಡಿದು ಹೇಳಿದನು. ತನ್ನೊಳಗಿರುವ ಈರ್ಷ್ಯೆಯನ್ನು ತೀರಿಸಿಕೊಳುವಸಾಗಿ ಮಹಾರಾಣಿಯ ಪ್ರ

ಭಾವವನ್ನು ಅಡಿಗೆ ತುಳಿದು ತನ್ನ ಪ್ರಭಾವವನ್ನು ಪ್ರತಿಷ್ಠಿಸುವುದಕ್ಕೆ ಇದುವೇ ಮಹದುಪಾಯವೆಂದು ಕುತುಬನೆಣಿಸಿದನು. ಗ್ರಹಗತಿಯು ತಪ್ಪಿರುವುದೂ ಶಕ್ತಿಯು ತನ್ನ ಮೇಲೆ ವಕ್ರವಾಗಿ ವಾಲಿರುವ ತಪ್ಪನ್ನೂ ತಿಳಿಯದಾದನು. ಕುತುಬನ ದುರ್ಮಾರ್ಗಗಳನ್ನು ಅರಿಯದವಳಾಗಿ ತನಗವನು ಮಿತ್ರನಂತೆಯೇ ಚಕ್ರವರ್ತಿನಿಯು ಯೆಣಿಸುತಿರುವಳು. ಯುದ್ಧವಾದ ತರುವಾಯ ಆಕೆಯು ಗಣೇಶದೇವನನ್ನು ಕೊಟ್ಟ ಕೊನೆಯಲ್ಲಿ ನೋಡಿದಾಗ ಈತನು ಆಕೆಗೆ ಸಹಾಯುವಮಾಡಿದ್ದವನಾದುದರಿಂದ ಆಗಿನಿಂದಲೂ ಇವನನ್ನು ಅಕುಟಿಲವಾದ ಸ್ನೇಹಿತನೆಂದು ತಿಳಿದಿದ್ದಳು. ಆಗ್ಯೂ ಅವನದು ದುರ್ಮಾರ್ಗವೃತ್ತಿಯೇ ! ಯಾವಾಗ್ಯೂ ದುರ್ವೃತ್ತಿಯೇ ! ಆಕೆಯು ಮರಳಿ ಬರಲಾರಳೆಂದೂ, ಒಂದುವೇಳೆಬಂದರೂ ತನಗೆ ಯಾವಾಗ್ಯೂ ಅಂಜಿಕೆಯಿಂದ ನಡೆಯುತಿರುವಳೆಂದೂ ಯೆಣಿಸಿದನು. ಆದರೆ ಆಕೆ ಪುನಹ ಬಂದುದರಿಂದಲೂ, ರಾಣಿಯಾದುದರಿಂದಲೂ, ಆ ರಹಸ್ಯವನ್ನು ಅರಸನಿಗೆ ಹೇಗೆ ಹೇಳುವುದೆಂದು ಆಲೋಚಿಸುತಿದ್ದನು. ತಾನು ಕೂಡ ಅದರಲ್ಲಿ ಸಿಕ್ಕಿಕೊಂಡಿರುವುದರಿಂದ ಇದುವರೆಗೆ ಹೇಳಲಾರದೆ ಇದ್ದನು. ಅದಕೆ ಈಗ ಅವನಿಗೊಂದು ಸಂಧಿ ದೊರೆಯಿತು.

ನಿಷ್ಕಪಟ ವೃತ್ತಿಯುಳ್ಳ ಚಕ್ರವರ್ತಿನಿಯು ಅನುಮಾನವೇನೂ ಇಲ್ಲದವಳಾಗಿ ಕುತುಬನನ್ನು ಕರೆಯಿಸಿ ತಾನು ಸೆರೆಮನೆಯೊಳಗಿರುವ ಗಣೇಶದೇವನನ್ನು ನೋಡಬೇಕೆಂದು ಹೇಳಿದಳು.

ಈ ಮಾತನ್ನು ಕೇಳುತಲೆ ಆ ಪರಮ ದುರ್ಮಾರ್ಗನ ಮನದಲ್ಲಿ ಯೆಲ್ಲಿಲ್ಲದ ಆನಂದವೂ ಅಂಕುರಿಸಿ ಅತ್ಯಂತವಿಧೇಯನಾಗಿ ಅವಶ್ಯಕವಿದ್ದಲ್ಲಿ ತನ್ನ ಪ್ರಾಣಗಳನ್ನಾದರೂ ಆಕೆಗೆ ಅರ್ಪಿಸತಕ್ಕವನೆಂಬದಾಗಿಯೂ, ಇದೊಂದು ಘನಕಾರ್ಯವಲ್ಲವೆಂಬದಾಗಿಯೂ, ಸಂತೋಷದಿಂದ ನೆರವೇರಿಸುವೆನೆಂಬದಾಗಿಯೂ, ಹೇಳಿಹೋದನು.

---

# ಪ್ರಕರಣ ೩೪.

ಗಣೇಶದೇವನು ಶುಷ್ಕಿಸಿ ದೀನನಾಗಿ ರೂಪವೇ ಬದಲಾಗಿ ಬಿಟ್ಟು ನೆಲನಮೇಲುರುಳಾಡುತ ಸೆರೆಮನೆಯ ಸಂದುಗಳಿಂದ ಆಕಾಶವನ್ನು ನೋಡುತಿದ್ದನು.

ಶಕ್ತಿಯು ರಾಜಾಂತಃಪುರದಲ್ಲಿ ಬೆಲೆಯುಳ್ಳ ಅತ್ಯುತ್ತಮ ತಮವಾದ ವುಡುಪುಗಳಿಂದ ಶೃಂಗಾರವಾದಳು. ತನ್ನ ಮದುವೆಯ ದಿನದಂತೆ ರಾಣಿಗುಚಿತವಾದ ವೇಷವನ್ನು ಧರಿಸಿ ಅನುವಾಗಿದ್ದಳು. ಎಲ್ಲಿಗೆ ಹೋಗುವುದಕ್ಕೇ ಅಣಿ ! ತನ್ನನ್ನು ತಿರಸ್ಕರಿಸಿ, ಅವಮಾನಪಡಿಸಿ, ತನ್ನ ಕೈ ಹಿಡಿಯಲು ನಿರಾಕರಿಸಿ, ತನಗೆ ಅಪಕೀರ್ತಿಯನ್ನು ತಂದೊಡ್ಡಿದ ತನ್ನ ಮೊದಲಿನ ಮನೋಹರನಾದ ಗಣೇಶದೇವನಿರುವ ಸೆರೆಮನೆಗೆ ಹೋಗುವುದಕೆ! ಇನ್ನು ಆತನೆಡೆಗೆ ಸನ್ಯಾಸಿನಿಯ ವೇಷದಿಂದ ಹೋಗಲಿಚ್ಛಿ ಇಲ್ಲದವಳಾದಳು. ಈಗ ತನ್ನ ವಿಭವವನ್ನು ಆತನು ನೋಡಬೇಕು. ಇದರಿಂದ ಆತನನ್ನು ಹಂಗಿಸಬೇಕು.

ಅಹಾ ! ನಿರ್ಮನುಷ್ಯವಾದ ಆ ವನದೊಳು ಅಕೆ ನುಡಿದ ನುಡಿಗಳು ಆತನಿಗಿನ್ನೂ ಜ್ಞಾಪಕವಿರುವುದೇ ! ಬೆಳದಿಂಗಳಿಂದ ಪ್ರಕಾಶಿಸುತಿದ್ದ ತಟಾಕದ ಬಳಿ ಆಕೆಯು ಕಾಪಾಡಬೇಕೆಂದು ಪ್ರಾರ್ಥಿಸುತ ಹೇಳಿದ ಮಾತುಗಳು ಆತನ ಮನದೊಳಗಿರುವುದೇ ! ಗಣೇಶಾ ! ನೋಡು. ನಿನಗೆ ಶಾಪತಗಲಿದೆ. ಪ್ರತಿಕ್ರಿಯೆಗೆ ಸಮಯ ಸಂಧಿಸಿದೆ. ಆ ದೌರ್ಭಾಗ್ಯಳಿಗೆ ಅದೃಷ್ಟವು ಆಶ್ರಯಿಸಿತು. ಅಕೆಯನ್ನು ಕಾಪಾಡಬೇಕೆಂದು ಪ್ರಾರ್ಥಿಸಬೇಕಾದವನು ನೀನಾಗಿರುವೆ! ನಿನ್ನನ್ನು ಕಾಪಾಡುವುದಕ್ಕೂ ಕೊಲುವುದಕ್ಕೂ ಸ್ವಾತಂತ್ರ್ಯವು ಅಕೆಯಲ್ಲಿದೆ.

ಅಲ್ಲಿ ಮಹಾರಾಜನೊಂಟಿಯಾಗಿ ಮಲಗಿರಲು ಆತನ ಮನಸ್ಸು ಅಂಜಿಕೆಯೊಳಿದ್ದಿತು. ಆ ಸಾಯಂಕಾಲದೊಳು ರಾಯಬಾರಿಗಳು ಬಂದು ಆತನ ಬಂಧ ಮುಕ್ತತೆಯನ್ನು ಕುರಿತು ಸಂಧಿಯ ಮಾತುಗಳನ್ನು ಹೇಳಿದ್ದರು. ಆತನು ಯಾವಾಗ್ಲೂ ಚಕ್ರವರ್ತಿಯೊಡನೆ ಯೆದುರಿಸಿ ಯುದ್ಧಮಾಡಲಾಗದೆಂದೂ, ನ್ಯಾಯಾನ್ಯಾಯಗಳನ್ನು ವಿಚಾರಿಸದೆ ಚಕ್ರವರ್ತಿಯು ಕರೆದಾಗ ಆ

ತನ ಪಕ್ಷವಾಗಿ ಯುದ್ಧ ಸನ್ನದ್ಧನಾಗಿರಬೇಕೆಂದೂ, ಇವುಗಳಿಗೆ ಆತನು
ಅಂಗೀಕರಿಸಿದರೆ ಬಂಧವಿಮೋಚನೆಯಾದೀತೆಂದೂ, ಹೇಳಿದರು. ಸತ್ಕುಲ
ಪ್ರಸೂತನಾದೀ ರಾಯನು ಆ ಒಡಂಬಡಿಕೆಗಳಿಗೆ ಅಂಗೀಕರಿಸಲಿಲ್ಲ. ಅದು
ದರಿಂದ ಮುಂದಿನ್ನು ಕೇಡು ಸಿದ್ಧವಾಗಿದ್ದಿತು. ಅಸ್ವಾತಂತ್ರ್ಯದಿಂದ ಬಾಳು
ವುದಕಿಂತಲೂ ಸ್ವಾತಂತ್ರ್ಯ ಮರಣವೇ ಯಾವಾಗ್ಗೂ ಲೇಸು. ಅಂತಹ
ಪದ್ಧತಿಗಳನ್ನು ತನಗೆ ತಿಳಿಯಪಡಿಸುತಲೆ ಗಣೇಶದೇವನಿಗೆ ಅಹಂಕಾ
ರವನ್ನು ಹುಟ್ಟಿಸಿತು. ನ್ಯಾಯಕ್ಕೋಸ್ಕರ ಪ್ರಾಣಗಳನ್ನು ಅರ್ಪಿಸುವುದೊ
ಳ್ಳೆಯದೇ ! ಮರಣವೆಂದರೆ ಆತನಿಗೆ ತುಸವಾದರೂ ಅಂಜಿಕೆಯಿಲ್ಲ. ಆದರೆ
ತನ್ನ ತರುವಾಯದವರ ಗತಿಯೇನೆಂದು ಆತನಿಗೆ ಯೋಚನೆ ಹುಟ್ಟಿತು.

ತಾನು ಗತಿಸಿದ ಕೂಡಲೆ ಕ್ರೂರಾತ್ಮರಾದ ಶತೃಗಳ ವಶವಾಗು
ವ ತನ್ನ ದಾರಾ ಪುತ್ರಾದಿಗಳನ್ನು ಕುರಿತೂ, ತನ್ನ ಮಕ್ಕಳಿಗಿಂತಲೂ ಹೆಚ್ಚಾ
ಗಿ ಪರಿಭಾವಿಸುತಿದ್ದ ಪ್ರಜೆಗಳನ್ನು ಕುರಿತೂ, ಆತನಿಗೆ ಮಹದ್ಯೋಚನೆ ಹು
ಟ್ಟಿತು. ಇದೀಗ ಆತನಿಗೆ ಅವಸಾನದ ಗಳಿಗೆಗಳು. ಆತನನ್ನು ಸಮಾಧಾನ
ಪಡಿಸುವುದಕ್ಕೆ ಒಬ್ಬನಾದರೂ ಸ್ನೇಹಿತನಾಗಲಿ, ಆಪ್ತನಾಗಲಿ, ಯಾರೂ
ಸಮೀಪದಲ್ಲಿಲ್ಲ. ಅವಸಾನವು ಅತಿ ಸಮೀಪಿಸಿ ಬಂದಿದ್ದುದರಿಂದ ಆತನಿಗಾ
ವುದೂ ತೋರಲೆ ಇಲ್ಲವು. ಆತನಿಗೆ ಭಗವಂತನಲ್ಲಿರುವ ನಂಬಿಕೆಗೆಮಿತಿಯಿಲ್ಲ.
ಆದುದರಿಂದ ಈಗಲೂ ಭಗವಂತನನ್ನೇ ನಂಬಿಕೊಂಡಿರುವನು. ತಾನು ಜೀವಿಸಿ
ರುವ ಅವಶ್ಯಕವಾರಿಗಾದರೂ ಇದ್ದಿತೋ, ಹೇಗಾದರೂ ಬಿದ್ದು ಯೆದ್ದು
ತಾನು ಜೀವಿಸಬಹುದೆಂದು ನೊಂದುಕೊಳುತ ಯೇನೊಂದೂ ತೋರದೆ ಆತ
ನುಗೋಡೆಯಮೇಲೊಂದು ಪೆಟ್ಟು ಹೊಡೆದರೆ ಅದರ ಪ್ರತಿಧ್ವನಿಯೇ ಅಲ್ಲ
ದೆ ಬೇರೆ ಯಾವ ಶಬ್ದವೂ ಕೇಳಲಿಲ್ಲವಾಯ್ತು. ತನ್ನ ಮನದೊಳಗಿನ ಬಾ
ಧೆಮಾತ್ರ ತಾನು ಬಂಧನದಲ್ಲಿರುವುದನ್ನು ಜ್ಞಾಪಕ ಕೊಟ್ಟಿತು. ತನ್ನ
ತಪ್ಪಿತವನ್ನು ಯೋಚಿಸಿಕೊಂಡು ಮಂದಹಾಸಮಾಡಿದನು. ಅಷ್ಟರೊಳು
ಆತನಿಗೆ ಯೋಗಿನಿಯು ಜ್ಞಾಪಕಬಂದಿತು. ತನ್ನನ್ನು ಬಿಡಿಸುವುದಕ್ಕೆ ಆಕೆ
ಯು ಪ್ರಯತ್ನಿಸುತಿರುವಳು. ಆಕೆಯು ಹೇಗಾದರೂ ಬಿಡಿಸಲಾರಳೇ ?

ಆತನು ನ್ಯಾಯಕ್ಕೋಸ್ಕರ ಯುದ್ಧವಾಡಿರುವನು. ನ್ಯಾಯೈಕಪರನಾದ ಪರಮೇಶ್ವರನು ಆತನಿಂದ ಸಂರಕ್ಷಿಸಲ್ಪಡತಕ್ಕವರೆಲ್ಲರನ್ನೂ ದಿಕ್ಕಿಲ್ಲದವರನ್ನಾಗಿ ಮಾಡಿ ಆತನನ್ನು ಕೊಂದು ಹಾಕುವನೇ ? ಹೀಗೆ ಯೋಚಿಸುತಿದ್ದಾಗ ಶಕ್ತಿಯು ಆತನ ಮನೋನೇತ್ರಕ್ಕೆ ಗೋಚರವಾದಳು. ಕಾಪಾಡೆಂದು ಆಕೆ ಮೊರೆಯಿಟ್ಟ ಧ್ವನಿಯು ಮರಳಿ ಆತನಿಗೆ ಕೇಳಿಸಿತು. ಆಕೆಯು ನ್ಯಾಯಕ್ಕೋಸ್ಕರವೆ ಅಲ್ಲವೆ ? ತನ್ನನ್ನು ಬೇಡಿಕೊಂಡಳು ! ಆತನಿಗೆ ಅಕುಟಿಲವಾದ ಪಶ್ಚಾತ್ತಾಪವಾರಂಭವಾಯ್ತು. "ಇನ್ನು ಆಶೆಯಿಲ್ಲ. ನನ್ನ ಪಾತಕವು ಬಳೆಯಿತು. ಆರ್ತೆಯಾಗಿ ಕಾಪಾಡೆಂದು ಬೇಡಿಕೊಂಡ ಅಬಲಾರತ್ನವನ್ನು ನಿಷ್ಕರುಣೆಯಿಂದ ತಿರಸ್ಕರಿಸಿದೆನು." ಯೆಂದು ಅಂದು ಕೊಳುತಿದ್ದನು. ಆತನ ಆಸೆಗಳೆಲ್ಲವೂ ನಾಶಗೊಂಡುವು. ನಿತ್ರಾಣ ಹುಟ್ಟಿತು. ಅದರೊಡನೆ ನಿದ್ರೆಯೂ ಬಂದಿತು. ಅದರೊಳಗೊಂದು ಕನಸೂ ಬಂದಿತು. ಸೆರೆಮನೆಯ ಗೋಡೆಗಳೆಲ್ಲವೂ ಒಂದೇಬಾರಿ ಮಾಯವಾಗಿ ಹೋದಂತೆಯು. ಒಟ್ಟಬಯಲಾದ ನಕ್ಷತ್ರಕಾಂತಿಯಿಂದೊಡಗೂಡಿದ ನಭೋಮಂಡಲದ ಕೆಳಭಾಗದಲ್ಲಿ ಒಂದು ದೇವತೆಯು ತನಗೆ ಪ್ರತ್ಯಕ್ಷವಾದಂತೆಯು, ಆತನಿಗೆ ಕಾಣಿಸಿತು. ಆತನ ಅಂತರಂಗವು ಆನಂದ ಪರವಶವಾಯ್ತು. ಆ ದೇವತೆಯ ಪಾದತಲಗಳಲ್ಲಿ ಬಿದ್ದು ವಂದಿಸುವುದಕ್ಕೆ ಸಿದ್ಧವಾಗಿದ್ದನು. ಕೂಡಲೆ ಒಂದು ಧ್ವನಿಯು ಆತನ ನಿದ್ರೆಗೆ ಭಂಗವುಂಟುಮಾಡಿತು. ಇದೇನು ಭೂತವೊ? ತನ್ನನ್ನು ಹಿಡಿಬಂದ ದೇವತೆಯೊ ? ಯೆಂದು ಮೆಲ್ಲನೆ ಕಣ್ತೆರೆದು ಆ ಕತ್ತಲೆಯ ಕೋಣೆಯನ್ನು ತನ್ನ ವಸ್ತ್ರಾಭರಣಾದಿಗಳ ಕಾಂತಿಯಿಂದ ಪ್ರಕಾಶ ಪಡಿಸುತಿರುವ ಒಂದು ಸ್ತ್ರೀವಿಗ್ರಹವನ್ನು ಆತನು ಕಂಡನು. ಅದನ್ನು ನೋಡಿದ ಕೂಡಲೆ ಆತನ ಮನಸಿನಲ್ಲಿ ಪವಿತ್ರವಾದ ಭಯಭಕ್ತಿಗಳಂಕುರಿಸಿತು. ಅದು ಕನಸೋ ನಿಶ್ಚಯವೊ ಆ ಸಮಯದಲ್ಲಿ ಆತನಿಗೆ ತಿಳಿಯಲಿಲ್ಲ.



# ಪ್ರಕರಣ ೩೫.

ಸೆರೆಮನೆಯಲ್ಲಿ ಕತ್ತಲೆ ಕವಿದಿದ್ದಿತು. ಶಕ್ತಿಯು ಅಲ್ಲಿ ಪ್ರವೇಶಿಸು ವಾಗ್ಗೆ ಕತ್ತಲೆಯು ವಿನಾ ಬೇರೆ ಯಾವುದೂ ಕಾಣಲಿಲ್ಲ. ಆಕೆಯು ಅಲ್ಲಾಡದೆ ನಿಂತು ಕಾವಲುಗಾರನನ್ನು ದೀಪ ತರುವಂತೆ ಆಜ್ಞೆಮಾಡಿದಳು. ಗೋಡೆಯ ಸಂದಿನಿಂದ ಮಿಣುಮಿಣುಗುಟ್ಟುವ ಒಂದು ದೀಪದ ಬೆಳಕು ಕಾಣಿಸಿ ನೆಲದಮೇಲೆ ನಿಲುವಿಗೂ ಬಿದ್ದಿರುವ ವಿಗ್ರಹವೊಂದು ಆಕೆಗೆ ಗೋಚರವಾಯಿತು. ಅಷ್ಟರೊಳು ಆಖೈದಿಯು "ಶಕ್ತೀ" ಯೆಂದು ಅದ್ಭುತವಾಗಿ ಬೆಚ್ಚಿಬಿದ್ದು ನುಡಿದನು. ಆ ಮಾತು ಬಾವಿಯೊಳಗೆ ಬಿದ್ದಿರುವನವಾತಿನಂತೆ ಕೇಳಿಸಿ ಹೃದಯದಲ್ಲಿರುವ ಮಿತಿಮೀರಿದ ದುಃಖವನ್ನು ಸೂಚಿಸುತ್ತಿದ್ದಿತು. " ಶಕ್ತಿ, ಅಲ್ಲ. ಚಕ್ರವರ್ತಿನಿ " ಯೆಂದು ಸ್ಪಷ್ಟವಾಗಿಯು, ಕಟುವಾಗಿಯು, ಆಕೆಯು ನಿರ್ದಯದಿಂದ ನುಡಿದ ಆ ಶ್ರುತಿಕಟುಗಳಾದ ಮಾತುಗಳನ್ನು ಪ್ರತಿಧ್ವನಿಸುವ ಗೋಡೆಗಳು ಕೂಡ ಹಿಂಸೆಪಟ್ಟುವೋ ಎಂಬಂತೆ ತೋರಿತು. ಆ ಮಾತುಗಳು ಯಾವಾತನಿಗೋಸ್ಕರ ಉದ್ದೇಶಿಸಲ್ಪಟ್ಟುವೋ, ಆತನು ಅಲ್ಲಾಡದೆ ಮೌನಮುದ್ರೆಯೊಳು ಬಿದ್ದಿದ್ದನು. ಚಕ್ರವರ್ತಿನಿಯು ಕೂಡ ಮೌನಧಾರಿಯಾಗಿದ್ದು ರಾಜನ ಮುಖವನ್ನು ಹೇಗಾದರೂ ನೋಡಬೇಕೆಂದು ಪ್ರಯತ್ನಿಸಿದಳು. ತನ್ನ ಮಾತುಗಳು ಆತನಿಗೆಂತಹ ಬದಲಾವಣೆಯನ್ನುಂಟುಮಾಡಿತೋ ನೋಡಬೇಕೆಂಬ ಬಯಕೆಯೊಂದು ಆಕೆಯಲ್ಲಿ ಹುಟ್ಟಿತು. ಆದರೆ ಕತ್ತಲೆಗೆ ಕನಿಕರಹುಟ್ಟಿ, ಆತನ ರಾಜಲಕ್ಷಣಗಳನ್ನು ವಿಕಾರಪಡಿಸಿರುವ ದುಃಖವನ್ನು ಆಕೆಗೆ ತೋರ್ಪಡಿಸಲಾರದಾಯಿತು.

ಅಷ್ಟರೊಳು ಕೈದೀವಿಗೆಯೊಂದನ್ನು ಹಿಡಿದುಕೊಂಡು ಕಾವಲುಗಾರನು ಬಂದನು. ಈಗ ಕೈದಿಯು ಆಕೆಗೆ ಸ್ಪಷ್ಟವಾಗಿ ಕಾಣಿಸಿದನು. ಆದರೆ ಹರೆಯದಲ್ಲಿದ್ದ ಆತನ ಅಂದವೂ, ವಿಲಾಸ ಯೋಗ್ಯವಾದ ವುಡುಪುಗಳನ್ನು ಧರಿಸಿ ಅರಸಿನ ವೇಷದಿಂದಿದ್ದ ಆಕಾರವೂ, ಆಕೆಗೆ ಗೋಚರಿಸಲಿಲ್ಲ. ಈಗ ಆಕೆ ಕಂಡುಕೊಂಡದ್ದು ವ್ಯಸನಕರವಾದ ವಿಗ್ರಹವನ್ನು. ಜೀರ್ಣವಸ್ತ್ರಗ

ಳನ್ನುಟ್ಟಿರುವ ಕೈದಿಯನ್ನು ಕೋಮಲವಾಗಿ ಬೆಳೆದ ವೃದ್ಧವಾದ ಜುಟ್ಟು ಬಿಚ್ಚಿ ಹೋಗಿ ಮುಖವು ಬಾಡಿದ್ದಿತು. ಕಣ್ಣುಗಳು ಕುಳಿಬಿದ್ದು ಶುಷ್ಕಿಸಿದ ಶರೀರವುಳ್ಳವನಾಗಿದ್ದನು. ಆದರೂ ಆತನ ಕಣ್ಣುಗಳಲ್ಲಿ ಕ್ಷಾತ್ರತೇಜಸ್ಸು ಮಟ್ಟಿಗೆ ಕಡಮೆಯಾಗಲಿಲ್ಲ. ಅದು ಆತನು ಕ್ಷತ್ರಿಯ ವಂಶಸ್ಥನೆಂಬುದನ್ನು ದೃಢಪಡಿಸುತಿದ್ದಿತು.

ಮಾತನಾಡದೆ ಆತನನ್ನು ಆಕೆಯು ತನ್ನ ಮನಸಿನೊಳಿರುವ ವಿಕಾರವಾವುದನ್ನೂ ಹೊರಪಡಿಸದಂತೆ ನೋಡುತಿದ್ದಳು. ಈಗ ಆಕೆಯು ಹಗೆಯನ್ನು ತೀರಿಸಿಕೊಳುವುದಕ್ಕೆ ತಕ್ಕತರುಣವು. ಆಕೆಗೆ ಸಂತೋಷವುಂಟಾಯಿತ್ತೆ? ಆತನನ್ನು ನೋಡಿದ ಕೂಡಲೆ ಆಕೆಯ ಮುಖವು ಅತ್ಯಾಶ್ಚರ್ಯಕರವಾಗಿ ಕ್ಷಣಮಾತ್ರದಲ್ಲಿ ಬಿಳುಪೇರಿತು. ಕಣ್ಣುಗಳಲ್ಲಿ ನೀರು ತುಂಬಿದುವು. ಕೆಂದುಟಿಗಳದರಲಾರಂಭಿಸಿತು. ಆಕೆಯು ಕದಲಿ ಮೊದಲದೆ ಸ್ಥಿರವಾಗಿ ನಿಂತು ಸ್ಫಟಿಕ ಶಿಲಾವಿಗ್ರಹದಂತಾದಳು. ಆತನ ವಿಪತ್ತನ್ನು ನೋಡಿ ಆಕೆಯ ಹೃದಯದಲ್ಲಿ ಪರಿತಾಪವು ಬೇರೂರಿ ಬಿಟ್ಟಿತು. ಎಲೆ ದೇವತೆಗಳಿರಾ! ಆಕೆಯ ಹೃದಯವನ್ನು ನೋಡಿರಿ; ಎಷ್ಟು ವಿಸ್ಮಯವಾಗಿ ಕಾಣುವುದೊ? ಒಂದೇ ಕ್ಷಣಕ್ಕೆ ಯಾವುದೋ ಇಂದ್ರಜಾಲದಂತೆ ಆಕೆಯ ಮನಸೆಲ್ಲವೂ ಬದುಲಾಗಿಬಿಟ್ಟಿತು. ಬದಲಾದುದೇ ಅಲ್ಲ. ಆಕೆಯ ಸಹಜ ಘನಸ್ವಭಾವವನ್ನು ಆವರಿಸಿದ್ದ ಕಾಠಿಣ್ಯವು ಯೆಲ್ಲಿಯೋ ಓಡಿಹೋಯಿತ್ತು.

ಆಕೆಗೀಗ ಯೋಗಿನಿಯು ಹೇಳಿದ್ದ ಮಾತುಗಳೆಲ್ಲವೂ ಬೋಧೆಗೆ ಬಂಧಿತು. ಆಕೆಯ ಧೋರಣೆಯು ಕುದುರಿತು. ಆಕೆಗೆ ನಿಶ್ಚಯವಾದ ಆನಂದ ಸಮಯವಿದುವೆ! ಆಕೆಯ ಸಹಜವಾದ ಉದಾರ ಬುದ್ಧಿಯು ಮರಳಿ ಸ್ಥಿರಪಟ್ಟಿತು. ಕೊನೆಗೆ ಆಕೆಯು "ರಾಜಕುಮಾರಾ! ಏಳು." ಎಂದು ನುಡಿದಳು. ಈಗ ಆಕೆಯ ನುಡಿಯು ಮಾರ್ದವವಾಗಿಯೂ, ಕನಿಕರ ಉಳ್ಳುದಾಗಿಯು, ಮಧುರವಾಗಿಯು, ಇದ್ದಿತು. ಈ ಬದಲಾವಣೆಗೆ ಗಣೇಶದೇವನು ಆಶ್ಚರ್ಯ ಚಕಿತನಾದನು, "ಭಗವಂತನಾದರೂ ತಿಳಿದುಕೊಳಲಾ

ರದ ಸ್ತ್ರೀಯು ಮನಸಿನ ಆಳವನ್ನು, ಮಾನವ ಮಾತ್ರದವನಾದ ಅತನೆಂತ ತಾನೆ ತಿಳಿದುಕೊಂಡಾನು.'' ಹೀಗೆಂದುಕೊಳುತಿರುವಾಗ ಮರಳಿ ಶಕ್ತಿಯು ''ಯೇಳು, ಹೊತ್ತುಮೀರಿ ಹೋಗುತಿದೆ. ಈ ಬಟ್ಟೆಗಳನ್ನು ತೆಗೆದುಕೊಂಡು ಬೇಗನೆ ಇವುಗಳನ್ನು ಧರಿಸಿಕೊಳುವನಾಗು'' ಯೆಂದಳು.

ಗಣೇಶದೇವನಿಗೆ ತಿಳಿಯಿತು. ಆಕೆಯು ತನ್ನನ್ನು ಬಿಡಿಸುವುದಕ್ಕೋಸ್ಕರ ಬಂದ ಕನಸು ನಿಶ್ಚಯವಾಯ್ತೋ? ಎಂಬ ಅನುಮಾನಹುಟ್ಟಿತು. ಸ್ವೇಚ್ಛ ಯೆಂದರೆ ಹೀಗಿರುವುದಲ್ಲವೆ ! ನಾವು ಪ್ರೀತಿಸಿದವರೊಡನೆ ಸುಖವಾಗಿರಬಹುದಲ್ಲವೇ ? ಯೆಂಬ ವ್ಯೂಹಯು ಅತನ ಮನದೊಳಗಂಕುರಿಸಿತು. ಇಂತಹ ಮನಸಿನೊಡನೆ ಯೇನೂ ತಿಳಿಯದೆಯೇ ಮೇಲಕ್ಕೆದ್ದು ''ನಾನೆಲ್ಲಿಗೆ ಹೋಗಬೇಕು.'' ಯೆಂದು ಕೇಳಿದನು.

ಶಕ್ತಿಯು ದೀವಿಗೆಯನ್ನು ನಂದಿಸಿ ಬಿಟ್ಟು ತನ್ನ ಉದ್ದವಾದ ಸೀರೆಯ ಸೆರಗಲ್ಲಿ ಕೆಲಭಾಗವನ್ನು ಗಾಬರಿಯಿಂದ ಹರಿದು ತನ್ನ ತಲೆಯಮೇಲಿರುವ ಬಂಗಾರದ ಸರಿಗೆಯ ಶಾಲುಗಳನ್ನು ತೆಗೆದು ಹಾಕಿ ಆ ರಾಜಕುಮಾರನಿಗಿತ್ತು ಈವಸ್ತ್ರಗಳನ್ನು ತೆಗೆದುಕೊಂಡು ಶರೀರವೆಲ್ಲಕ್ಕೂ ಹೊದ್ದುಕೊಳ್ಳು. ಬಾಗಿಲನ್ನು ತಟ್ಟು. ಕಾವಲುಗಾರನು ಬಾಗಿಲನ್ನು ತೆರೆಯುವನು. ಹೊರಕ್ಕೆ ಅವನೊಡನೆ ಹೋಗು. ಸೆರೆಮನೆಯನ್ನು ದಾಟಿದ ತರುವಾಯ ಈ ಉಂಗುರವನ್ನು ಅವನಿಗೆ ಕೊಡು. ಅವನದನ್ನು ತೆಗೆದುಕೊಂಡು ನಿನ್ನನ್ನು ತಡೆಯದೆ ನಿನ್ನ ಇಚ್ಛೆ ಬಂದಲ್ಲಿಗೆ ಹೋಗಲು ಬಿಡುವನು'' ಯೆಂದು ನುಡಿದಳು.

ರಾಜನು ಇನ್ನೂ ಕಲವರಿಸುತಿದ್ದವನಂತೆ ''ಮತ್ತೆನೀನು'' ಎಂದು ಕೇಳಿದನು. ಅದಕ್ಕೆ ಚಕ್ರವರ್ತಿನಿಯು ''ನನಗೋಸ್ಕರ ನೀನು ಯೋಚಿಸಬೇಕಾದುದಿಲ್ಲ. ಅದಕ್ಕೆಲ್ಲವೂ ತಕ್ಕ ಏರ್ಪಾಡುಗಳು ನಡೆದಿವೆ. ಸಮಯಕ್ಕೆ ತಕ್ಕಂತೆ ನನಗೋಸ್ಕರ ಕುಶುಬನು ಬರುವನು.'' ಯೆಂದು ಹೇಳಿದಳು.

ರಾಜ "ಆಗಲಿ ನೀನು ಇದುವರೆಗೆ ಹೊರಟು ಹೋಗಿರುವಂತೆ ಕಾವಲುಗಾರನು ಕುತುಬನೊಡನೆ ಹೇಳುವನು."

ಶಕ್ತಿ. " ನಿನ್ನೊಡನೆ ಬರುವ ಕಾವಲುಗಾರನು ಹೊರಟುಹೋಗಿ ಅವನ ಬದುಲು ಮತ್ತೊಬ್ಬನು ಬರುವನು. ಅವನಿಗೆ ಈ ಸಂಗತಿಯೊಂದೂ ತಿಳಿಯದು. ರಾಜ " ಅವನ ಸ್ನೇಹಿತನು ಅವನಿಗೆ ಹೇಳನೆ ? " "ಹೇಳಲಾರನು ನನ್ನ ಮಾತನ್ನು ನಂಬು. ತಕ್ಕ ಯೇರ್ಪಾಡುಗಳೆಲ್ಲವೂ ನಡೆದಿವೆ. ತ್ವರೆಯಾಗಿ ಹೊರಡು ಇಲ್ಲದಿದ್ದರೆ ಯೆಲ್ಲವೂ ನಿಷ್ಫಲವಾಗುವುದು. "

" ಎಲ್ಲವೂ ಏರ್ಪಾಡಾದುವೆ ? ಓ ನಿರ್ಭೀಕ ಮನಸ್ಕಳಾದ ಘನವಾತಿಯೇ ! ಈ ನಿನ್ನ ಅಸತ್ಯವನ್ನು ಕುರಿತು ದೇವತೆಗಳು ನಿನ್ನನ್ನು ರಕ್ಷಿಸಲಿ ! " ಆಕೆಗೆ ಆತನ ಚಿಂತೆಯೇವಿನಾ ಬೇರೆ ಚಿಂತೆಯಿಲ್ಲ. ತನಗೆ ಬರುವುದಕ್ಕಿರುವ ಮುಪ್ಪು ಈ ಕ್ಷಣದಲ್ಲಿ ತನಗೆ ಸನ್ನಿಹಿತವಾಗುವ ಅಪಾಯ, ಆಕೆಯ ಮನಸಿಗೆ ತೋರಲೇ ಇಲ್ಲ.

ಸ್ವೇಚ್ಛಾ ಜನ್ಮನಾದ ರಾಜಕುಮಾರನಿಗೆ ಮಗಳಿ ಸ್ವೇಚ್ಛೆಯಾದ ವುಸಿರೇ ತಿರುಗಿತು. ಆದರೂ ಆಕಸ್ಮಿಕವಾಗಿ ದೈವಮಾಯೆ ಯಿಂದಲೋ ಯೆಂಬಂತೆ ಆ ಸ್ವೇಚ್ಛೆ ಯೆಂಬ ಬೆಳಕು ಮಾಯವಾಗಿ ಬಿಟ್ಟು.

" ಚಕ್ರವರ್ತಿನೀ ! ನಾನು ತಪ್ಪಿಸಿಕೊಂಡು ಹೋಗಲಾರೆನು. ನಿನ್ನ ವಸ್ತ್ರಗಳನ್ನೂ, ಪುಂಗುರವನ್ನೂ, ನೀನು ತೆಗೆದುಕೊಳ್ಳು. ನನಗೆ ಅವಶ್ಯವಿಲ್ಲ" ಯೆಂದು ಕೃತನಿಶ್ಚಯನಾಗಿ ನುಡಿದನು.

ಚಕ್ರವರ್ತಿನಿಗೆ ವಿಚಾರವೂ. ವಿಸ್ಮಯವೂ, ಉಂಟಾಗಿ? " ಮಹಾರಾಜನೇ ? ಅದೇತಕೆ ? " ಯೆಂದು ಕೇಳಿದಳು.

ರಾಜ " ನಾನು ನಿನ್ನಿಂದ ಯೆಂತಹ ಉಪಕಾರ ಜೊಂದುವುದಕ್ಕೆ ತಕ್ಕವನಲ್ಲ. ನಿನ್ನ ಮೂಲಕವಾಗಿ ನಾನು ಬಂಧಮುಕ್ತನಾಗಲಾರೆನು." ಯೆಂದು ಹೇಳುವಾಗ ಆತನ ವಾಕ್ಯಗಳು ಸ್ಥಿರವಾಗಿಯು, ನಿಶ್ಚಯವಾಗಿಯೂ ಇದ್ದಿತು. ಆತನು ಕೃತ ನಿಶ್ಚಯನಾದನೆಂಬದಾಗಿಯು, ಯೆನ್ನು

ತನ್ನ ಬಲಿಗೆ ಸಿಕ್ಕುವುದಿಲ್ಲೆಂಬದಾಗಿಯೂ, ಶಕ್ತಿಯರಿತು ತನ್ನ ಕೊನೆಯು ದಾದ ಈ ಆಸೆಯು ಕೂಡ ತೀರಿ ಹೋಯ್ತಲ್ಲ ! ಯೆಂದು ಖಿನ್ನಮಾನಸ ಳಾಗಿ ಕೆಳಗುರುಳಿಕೊಳ್ಳದೆ ಮೆಲ್ಲನೆ ಮರದ ಗೊಂಬೆಯಂತೆ ವೊಂದು ಗೋ ಡೆಗೆ ಬಿದ್ದಳು.

ಬಂದೀಖಾನೆಯಲ್ಲಿ ಈ ಸಮಾಚಾರವು ನಡೆಯುತಿರಲು ಅಲ್ಲಿ ಕುತು ಬನು ತನ್ನ ಹಗೆಯನ್ನು ತೀರಿಸಿಕೊಳುವುದಕ್ಕೆ ತಕ್ಕ ಕುತಂತ್ರಗಳನ್ನು ಚಕ್ರ ವರ್ತಿಯೊಡನೆ ಸಿದ್ಧಪಡಿಸಿದನು. ಅನೇಕವಾದ ಆಣೆ ಬಾಸೆಗಳಿಂದ ತನ್ನ ದುರ್ಬುದ್ಧಿಯಲ್ಲಿ ವ್ರೋಡಿದಷ್ಟು ಯೋಚನೆಗಳೆಲ್ಲವನ್ನೂ ಕಲ್ಪನೆಮಾಡಿ ಚಕ್ರ ವರ್ತಿಗೆ ಅರೆದು ಸುರಿದನು.

ಚಕ್ರವರ್ತಿಗೆ ಅಗ್ರಹದಿಂದಲೂ, ಈರ್ಷ್ಯೆಯಿಂದಲೂ, ಮತಿಗೆಟ್ಟಂ ತಾಗಿ "ಕುತುಬ್ ! ಇದು ಯೆಷ್ಟುಮಟ್ಟಿಗೂ ನಿಜವಾಗಿರಲಾರದು. ನೀನು ಸುಳ್ಳು ಹೇಳುತಿರುವೆ. ಇಷ್ಟು ನಡೆಯಲಾರದು." ಯೆಂದು ಹೇಳಿ ವಿವೇಕ ಕೆಟ್ಟವನಂತಿದ್ದನು.

ಆದರೂ ಕುತುಬನು "ಮಹಾಸ್ವಾಮಿಯು ಪ್ರತ್ಯಕ್ಷವಾಗಿ ನೋಡಿ ತಮ್ಮ ಕಣ್ಗಳ ಸಾಕ್ಷ್ಯವನ್ನೇ ಮನ್ನಿಸುವರಾಗಬಹುದು ! ತಾವು ಚಿತ್ತೈ ಸಿದರೆ ನಾನು ಶೃತಪಡಿಸಿದುದು ನಿಜವೆಂದು ರುಜುವಾಡಿಕೊಡುವೆನು." ಯೆಂದು ವ್ಯಕ್ತವಾಗಿ ನುಡಿದನು.

ಚಕ್ರವರ್ತಿ "ಅದು ನನ್ನಿಂದಾಗದು. ನಿಜವಾದಲ್ಲಿ ತಲೆಯನ್ನಿ ಲ್ಲಿಗೆ ತರಿಸು."

"ಯಾರ ತಲೆಯನ್ನು ಮಹಾ ಪ್ರಭುವೇ ?"

"ಯಾರ ತಲೆಯನ್ನೆ ? ಆ ಮಹಾ ಪಾತಕಿ ಗಣೇಶದೇವನದು ?"

"ನಾನು ಚಕ್ರವರ್ತಿನಿಯೊಡನೆ ಯೇನನ್ನೂ ಅರಿಕೆ ಮಾಡಲಾರೆನು."

"ಆಕೆಯೊಡನೆ ಯೇನನ್ನೂ ಹೇಳಬೇಕಾದುದಿಲ್ಲ, ಅದು ನನ್ನ ಕೆಲಸವು"

ಅದರೊಡನೆ ಕುತುಬನ ಜಂಘಾಬಲವು ಉಡುಗಿತು. ಚಕ್ರವರ್ತಿನಿಯನ್ನು ಕೊಲಿಸುವುದೋ ಗಡೀಪಾರು ಮಾಡಿಸುವುದೋ, ಸಂಭವಿಸುವುದೆಂದು ಆಸೆಗೊಂಡಿದ್ದನು. ಆದರೆ ಅವನ ದಾಯವು ಬೀಳಲಿಲ್ಲ. ಹೀಗೆ ನಿರಾಶಾವಶನಾಗಿ ಪ್ರಭುವಿನ ಅನುಜ್ಞೆಯನ್ನು ನೆರವೇರಿಸಲು ಹೋಗುತ್ತಿರಲು ಮರಳಿ ಹಿಂದಕ್ಕೆ ಕರೆದು "ಚಕ್ರವರ್ತಿನಿಯು ಇನ್ನೂ ಸೆರೆ ಮನೆಯಲ್ಲಿದ್ದ ಪಕ್ಷದಲ್ಲಿ ಖೈದಿಯನ್ನು ಕೊಲ್ಲಬೇಡಯ್ಯಾ. ತಿಳಿಯಿತೇ?" ಯೆಂದು ಹೇಳಿದನು.

"ಮಹಾ ಪ್ರಭುವಿನ ಚಿತ್ತವೊಪ್ಪಿದಂತೆ" ಯೆಂದು ವಿಷಣ್ಣವದನನಾಗಿ ಕುತುಬ ಖಾನನು ಹೊರಟು ಹೋದನು.



## ಪ್ರಕರಣ ೩೬.

ಶಕ್ತಿಯು ವಿವಶೆಯಾದಳು. ಆಕೆಯ ಕೊನೆಯ ಆಸೆಯು ಕೂಡ ಭಗ್ನವಾಯ್ತು. ಗಣೇಶದೇವನು ನಿರಾಕರಿಸಿದ ಈದಿನದ ರಾತ್ರಿಯುಂಟಾದ ವ್ಯಸನವು ಇದುವರೆಗೆ ಶಕ್ತಿಗೆಂದೂ ಉಂಟಾಗಿಲ್ಲ. ಆಕೆಗೆ ಅನೇಕ ವೇಳೆಯಲ್ಲಿ ಆಶಾಭಂಗಗಳಾಗುತ ಬಂದುವು. ಇದು ಅವೆಲ್ಲಕಿಂತಲೂ ಹೆಚ್ಚಾದುದು. ಇದು ಚಿಕ್ಕಂದಿನ ಕೋರಿಕೆಯಂತಹುದಲ್ಲ. ಆಗ ಕೋಪವೂ, ಕಾರ್ಪಣ್ಯವೂ, ಆಕೆಗೆ ಸಹಾಯವಾಗುತ ಬಂದಿತು. ಈದಿನ ರಾತ್ರಿ ಆಕೆಯ ಮನಸಿನೊಳು ಸ್ವಾರ್ಥ ಪರತೆಯೆಂಬುದು ಲೇಶವೂ ಇಲ್ಲ. ವೊಂದು ದೊಡ್ಡ ಬೆಟ್ಟವು ತನ್ನಮೇಲೆ ಕವಿತಂತಾಯ್ತು. ಆಕೆಗೆ ಲೋಕದೊಡನೆ ಸಂಬಂಧವು ತಪ್ಪಿದಂತಾಯ್ತು. ಆಕೆಯ ಇಂದ್ರಿಯಗಳನ್ನು ಆಕೆಯು ನಂಬಲಾರದವಳಾದಳು.

ಆಕೆಯು ಆ ಸೆರೆಮನೆಯನ್ನು ಬಿಟ್ಟು ಹೊರಬಂದು ನಭೋಮಂಡಲ

ವನ್ನು ನೋಡಿದಳು. ವೊಂದು ನಕ್ಷತ್ರವಾದರೂ ಇಲ್ಲ. ಯೆಲ್ಲಿ ನೋಡಿದರೂ ಕತ್ತಲೆ ಮಾತ್ರವಲ್ಲದೆ ಬೇರೆ ಯಾವುದೂ ಕಾಣುವುದಿಲ್ಲ. ತನ್ನಸ್ಥಿತಿಯು ತನಗೇ ತಿಳಿಯುವ ಹಾಗಿಲ್ಲ. ಮೈಮರೆತಂತಿದ್ದಳು. ಕಾವಲುಗಾರನು ಆಕೆ ಭಯಪಟ್ಟಿರ ಬಹುದೆಂದೂಹಿಸಿ, ದೀವಿಗೆಯನ್ನು ತರುವುದಕ್ಕೆ ಹೋದನು. ಆಕೆಯು ಅವನನ್ನು ತಡೆದು ಬೆಚ್ಚು ಬಿದ್ದಂತೆ "ಬೇಡ, ನಾವು ಹೋಗೋಣ" ವೆಂದು ಮೆಲ್ಲನೆ ನುಡಿದಳು.

ಜವಾದಾರನಾದ ಗುಲಾಮಲೀಖಾನನು ಸುತ್ತು ಕುಡಿಯುತ ವೊಂದು ನಾಗಾಲಿನಮೇಲೆ ಕುಳಿತಿದ್ದನು. ಆಕೆಯು ಹೊರಗಿನ ಅಂಗಳವನ್ನು ಸೇರುತಲೆ ಅಲ್ಲಿನ ಕಾವಲು ಗಾರರು "ನಿನ್ನ ಹೆಸರೇನು" ಯೆಂದು ಯೆಚ್ಚರಿಸಿದರು. ಆದರೆ ಜವಾದಾರನು ಅವರನ್ನು ತಡೆದುದರಿಂದ ಅವರು ಆಕೆಯನ್ನು ಬಿಟ್ಟುಕೊಟ್ಟರು. ಜವಾದಾರನು ಆಕೆಯನ್ನು ಹಿಂಬಾಲಿಸಿ "ಉಂಗುರವೆಲ್ಲಿ" ಯೆಂದು ಕೇಳಿದನು.

ಶಕ್ತಿಯು ಸೆರೆಮನೆಯಲ್ಲಿ ಪ್ರವೇಶಿಸುವುದಕ್ಕೆ ಕುತುಬಖಾನನು ವೊಂದುಂಗುರವನ್ನು ಕೊಟ್ಟಿದ್ದನು. ಕುತುಬನು ಅಲ್ಲಿಗೆ ಸಮೀಪದ ಕಾವಲಿನವರ ಮನೆಯೊಳು ಕಾದಿರುವುದಕ್ಕೂ, ಶಕ್ತಿಯು ವುಂಗುರವನ್ನು ಜವಾದಾರನ ಮೂಲಕ ಅವನ ಬಳಿಗೆ ಕಳಿಸುವುದಕ್ಕೂ, ಕುತುಬನು ಬಂದು ಆಕೆಯನ್ನು ಭದ್ರವಾಗಿ ಅಂತಃಪುರಕ್ಕೆ ಸೇರಿಸುವುದಕ್ಕೂ, ನಿರ್ಣಯವಾಗಿದ್ದಿತು. ಈ ಸಮಯದಲ್ಲಿ ಕುತುಬನು ಕಾವಲುಗಾರರ ಮನೆಯಲ್ಲಿದ್ದು ವ್ಯರ್ಥವಾಗಿ ಕಾಲ ಕಳೆಯುವುದಿಲ್ಲೆಂಬುದು ಪಾಠಕರಿಗೆ ತಿಳಿದೆ ಯಿರಬಹುದು. ಆದರೆ ಶಕ್ತಿಯು ಸೆರೆ ಮನೆಯನ್ನು ಬಿಟ್ಟು ಯಾವಾಗ ಹೊರಡುವಳೋ, ತಿಳಿದುಕೊಳಬೇಕೆಂದು ಮಾತ್ರ ತಕ್ಕ ಯೇರ್ಪಾಡು ಮಾಡಿಕೊಂಡಿದ್ದನು. ತಾನು ಬರುವುದು ತಡವಾದಲ್ಲಿ ವೊಬ್ಬ ನೌಕರನ ಮೂಲಕ ವೊಡನೆಯೇ ಆ ವುಂಗರವನ್ನು ತನ್ನ ಬಳಿಗೆ ಕಳುಹತಕ್ಕುದೆಂದು ಗುಲಾಮಲೀ ಖಾನನಿಗೆ ಕಟ್ಟುಮಾಡಿದ್ದನು. ಅವನು ಚಕ್ರವರ್ತಿನಿಯು ಸೆರೆ ಮನೆಯನ್ನು ಬಿಡುವುದಕ್ಕೆ

ವುುಂಚಿತವಾಗಿಯೆ ಅಲ್ಲಿಗೆ ಕರೆತರಬೇಕೆಂದು ನಿಶ್ಚೈಸಿಕೊಂಡನು. ಆದರೆ ಚಕ್ರವರ್ತಿಯುು ಯೇಳುವಿಕೆಗೂ ತಾನು ಆತನೊಡನೆ ಹೇಳುವ ಸಂಗತಿಗಳೆಲ್ಲವೂ ಹೇಳುವಿಕೆಗೂ, ಕೊಂಚ ಸಾವಕಾಶವಾಗ ಬಹುದಾದುದರಿಂದ ಕುತುಬನು ಯಿವೆಲ್ಲವನ್ನು ಯೋಚಿಸಿ ಜಾಗ್ರತೆಗೊಂಡನು. ಆದರೂ ಸೆರೆ ವುನೆಯೊಳಗೆ ಪ್ರವೇಶಿಸಿದಾಕೆಯುು ಚಕ್ರವರ್ತಿನಿಯೆಂದು ವಾತ್ರ ಕಾವಲುಗಾರರೊಡನೆ ಹೇಳಿರಲಿಲ್ಲ. ಜವಾದಾರನು ಕೇಳಿದರೆ “ನಿನಗೆ ಕೊಡುವುದಕ್ಕೆ ವುಂಗರವಿಲ್ಲ.” ಯೆಂದು ಶಕ್ತಿಯುು ಬದುಲು ಹೇಳಿದಳು. ಅವನು ಕೇಳದೆ ಕುತುಬನ ಅಜ್ಞೆಯಂತೆ ವುಂಗುರವನ್ನು ಕೊಟ್ಟು ವುುಗಿಯಬೇಕೆಂದು ತಡೆದನು. ಅವಕ್ಕೆ ಶಕ್ತಿಯುು “ತೊಲಗೆಲವೊ! ಇದು ಚಕ್ರವರ್ತಿನಿಯುವರ ಆಜ್ಞೆಗಳೆಂದು ತಿಳಿ” ಯೆಂದಳು.

ಅದಕ್ಕೆ ಅವನು ಬೆಚ್ಚು ಬಿದ್ದು ಹಿಂದಕ್ಕೆ ಹೋದನು. ಆಕೆಯುು ನಿರಾತಂಕವಾಗಿ ಹೊರಟುಹೋದಳು. ಜವಾದಾರನಿಗೆ ವಾತ್ರ ಗುಂಡಿಗೆ ಕುವುರದೆ “ಖೈದಿಯುನ್ನು ನೋಡುವುದಕ್ಕೆ ಬಂದುದು ಆತನಪತ್ನಿಯೆಂದು ಕೊಂಡೆನು, ಆಹಾ! ಚಕ್ರವರ್ತಿನಿಯೇ! ನವುಗೊಂದು ಬಹುವಾನ ದೊರೆಯಬೇಕಾಗಿದ್ದಿತಲ್ಲವೆ! ನನ್ನ ಅದೃಷ್ಟವೆಂತಹುದಾಗಿದ್ದಿತು? ಚಕ್ರವರ್ತಿಯನ್ನೂ, ಚಕ್ರವರ್ತಿನಿಯುನ್ನೂ ಕೂಪ ಜೇಬಿನಲ್ಲಿಟ್ಟುಕೊಂಡಿರುವನು. ಕುತುಬನೆಂತಹ ಅದೃಷ್ಟಶಾಲಿಯೊ?” ಎಂಬದಾಗಿ ತನ್ನಲ್ಲಿ ತಾನು ಹೇಳಿಕೊಳುತ ಅಲ್ಲಿ ವೊಂದು ಗಿಡದಕೆಳಗೆ ನಿದ್ರಿಸುತಿರುವ ಪ್ರತೀಜಾನನೆಂಬ ಕುತುಬನ ಸೇವಕನನ್ನು ತಟ್ಟಿಯೆಬ್ಬಿಸಿದನು. ಅವನು ನಿದ್ರೆಯ ವುತ್ತಿನಿಂದಿದ್ದು ವುಂಗುರವನ್ನು ಕೊಡಲಿಲ್ಲವೆಂದು ಹೇಳುತಲೆ ವುರಳಿ ನಿದ್ರಿಸಿದನು. ಗುಲಾವುಲೀಖಾನನು ತುಸಹೊತ್ತು ಬೇರೆಯೊಂದುಕಡೆ ಕುಳಿತಾಲೋಚಿಸಿ ಕಳಿಸುವುದಕ್ಕೆ ವುಂಗುರವಿಲ್ಲದ್ದರಿಂದ ಸಾವಕಾಶವಾಗಿ ಇನ್ನೊಂದು ಸುತ್ರನ್ನು ಹತ್ತಿಸಿದನು



# ಪ್ರಕರಣ ೩೭.

ಆಗ ಅರ್ಧರಾತ್ರಿಯ ಸಮಯವಾಗಿದ್ದಿತು. ಶಕ್ತಿಯು ನಿರ್ಭಯ ವಾಗಿ ನಡೆದುಹೋಗುತಿದ್ದಳು. ಆಕೆಯು ಅಂತಹ ನಿಶೀಥ ಸಮಯಗಳಲ್ಲಿ ಪ್ರಯಾಣಮಾಡುವಿಕೆಯಲ್ಲಿ ಅಭ್ಯಾಸವುಳ್ಳವಳು. ತೀರ್ಥ ಯಾತ್ರೆಗಳನ್ನು ಮಾಡಿದ ಆರುವರುಷಗಳಲ್ಲಿ ಯೆಷ್ಟೋಸಲ ಅಂತಹ ಪ್ರಯಾಣಗಳನ್ನು ಮಾಡಿದ್ದಳು. ಆಕೆಗೆ ಚೆನ್ನಾಗಿ ನೆಪ್ಪು ಇದ್ದುದರಿಂದ ಆ ಅಡವಿಗಳೆಲ್ಲ ವನ್ನೂ ದಾಟಿಹೋಗುತಿದ್ದಳು. ಆ ವನದ ವೃಕ್ಷಶಾಖೆಗಳು ತಮ್ಮ ಹಳೆಯ ಸ್ನೇಹಿತೆಯಾದ ಶಕ್ತಿಗೆ ಸ್ವಾಗತವೀಯುತಿರುವ ಬಾಹುಗಳೋ ಯೆಂಬಂತೆ ವಿಸ್ತರಿಸಿ ತೂಗುತಿದ್ದುವು. ತುಸಹೊತ್ತು ಕಳೆಯಲಾಕೆಯು ನದೀ ತೀರವನ್ನು ಸೇರಿದಳು. ಅಲ್ಲಿ ಮೊದಲು ತಾನೂ ಗಣೇಶದೇವನೂ ಕುಳಿ ತಿದ್ದ ಹುಳಿಮರವು ಕಾಣಿಸಿತು. ಅದರ ಕೊಂಬೆಗಳೆಲ್ಲವೂ ಹೋಗಿ ಬುಡ ಮಾತ್ರ ಉಳಿದಿದ್ದಿತು. ಆಕೆಯ ಜೀವನವು ಕೂಡ ಅದರಂತೆಯೇ ಇದ್ದಿತು. ಆಕೆಯ ಸೌಂದರ್ಯವೆಲ್ಲವೂ ಹೋಗಿ ಕೇವಲ ದೇಹ ಮಾತ್ರ ನಿಂತಿದ್ದಿತು.

ಈಗ ಆಕೆಯು ತನಗೆ ಪರೀಕ್ಷಾಸ್ಥಳವಾದ ಅಲ್ಲಿಗೆ ಬಂದುಸೇರಿದಳು. ತಾನು ಪುಷ್ಪಮಾಲೆಯನ್ನು ತುಳಿದುಹಾಕಿದ ಗಿಡದಬಳಿಗೆ ಬಂದಳು. ಅ ಲ್ಲೊಂದು ನಿಮಿಷವಿದ್ದಳು. ಅಲ್ಲಿದ್ದ ಪ್ರತಿ ರಜೋರೇಣುವೂ ಕೂಡ ಆಕೆ ಗೆ ಯೆಷ್ಟೋ ಪವಿತ್ರಮಯವಾಗಿ ಕಾಣುತಿದ್ದಿತು. ಆಕೆಯು ಅಲ್ಲಿನಿಂತು ಒಂದುಹಿಡಿ ಮಣ್ಣನ್ನು ತೆಗೆದು ತನ್ನ ಸೆರಗಿನೊಳು ಗಂಟಿಕ್ಕಿ ಮುಂದೆ ಸಾಗಿದಳು.

ತರುವಾಯ ಬಲುಬೇಗನೆ ತನ್ನ ಸೋದರತ್ತೆಯು ಅರ್ಚಿಸುತಿರುವ ಕಾಳಿಕಾಲಯವನ್ನು ಸೇರಿದಳು. ಮೊದಲಿನಂತೆಯೇ ವೊಂದು ಸಣ್ಣದೀಪವು ಬಾಗಿಲ ಸಂದಿನೊಳಗಿಂದ ಕಾಣುತಿದ್ದಿತು. ತನ್ನ ಮುದಿ ಸೋದರತ್ತೆಯು ಯಣ್ಣೆಯ ದೀವಿಗೆಯ ಬಳಿ ಧ್ಯಾನಿಸುತ ಕುಳಿತಿರುವಿಕೆಯು ಆಕೆಯ

ಮನೋನೇತ್ರ ಗೋಚರವಾಯಿತು. ತರುವಾಯ ಬಾಗಿಲಬಳಿಗೆ ಬಂದು ಅದನ್ನು ಮೆಲ್ಲನೆ ತೆರೆದಳು. ಅಲ್ಲಿ ಆ ಯೋಗಿನಿಯು ಕಣ್ಣನ್ನು ಮುಚ್ಚಿಕೊಂಡು ಶಕ್ತ್ಯೆಯೆಣಿಸಿದಂತೆ ಧ್ಯಾನಮಾಡುತಲೆ ಇದ್ದಳು. ಆದರೆ ಅಲ್ಲಿದ್ದ ಬೆಳಕುಮಾತ್ರ ಯೆಣ್ಣೆಯದೀವಿಗೆಯದಲ್ಲ. ಅಲ್ಲಿ ಹೋಮ ಮಾಡುತಿದ್ದ ಅಗ್ನಿಹೋತ್ರ ಜ್ವಾಲೆಯದು. ಗರ್ಭಗೃಹಕ್ಕೂ ಮುಖಮಂಟಪಕ್ಕೂ ನಡುವೆ ಇದ್ದ ಬಾಗಿಲು ತೆಗೆಯಲ್ಪಟ್ಟಿತ್ತು. ಕಾಳಿಯಮುಂದೆ ಬೆಂಕಿಯುರಿಯುತಿದ್ದಿತು.

ಶಕ್ತಿಯು ಸದ್ದುಮಾಡದೆ ನಿಂತಿರುವುದರಿಂದ ಸನ್ಯಾಸಿನಿಯು ಆಕೆಯನ್ನು ನೋಡಲಿಲ್ಲ. ಆಕೆಯು ಗದ್ಗದಸ್ವರದಿಂದ ಮಂತ್ರಗಳನ್ನುಚ್ಚರಿಸುತ ಹೋಮಮಾಡುತಿರಲು ಅಗ್ನಿಜ್ವಾಲೆಯು ಆ ಗುಡಿಯ ಮಾಳಿಗೆಯನ್ನು ಸೋಕುತಿದ್ದಿತು. ಅದನ್ನು ನೋಡಿದ ಶಕ್ತಿಗೆ ರಕ್ತವು ಮೊಬ್ಬಿ ಮೇಲಕ್ಕೆ ಹಾರಿಬಿದ್ದ ತಲೆಗಳು ಕೆಳಗೆ ಬೀಳುತಿರುವಹಾಗೆ ಕಾಣಿಸಿತು.. ಅಷ್ಟರೊಳು ಅಗ್ನಿಜ್ವಾಲೆಯು ತಗ್ಗಿ ತಲೆಗಳೆಲ್ಲವೂ ಚತುರಾಕಾರವಾಗಿ ಯೇರ್ಪಟ್ಟು ಅದರ ಮೇಲೊಂದು ಸಿಂಹಾಸನವೆದ್ದಂತೆ ಗೋಚರಿಸಿತು. ಅಷ್ಟರೊಳು ಚಕ್ರವರ್ತಿನಿಯು ಕಾಣಿಸಿಕೊಳಬೇಕೆಂದಂದುಕೊಂಡಳು. ಕೂಡಲೆ ಯೋಗಿನಿಯು ಹೀಗೆ ಪ್ರಾರಂಭಿಸಿದಳು.

“ ಓ ಸರ್ವಶಕ್ತಿಮಯಿ ! ದಯಾಮಯೀ ! ಜೀವನವಾರಿಧಿಯೇ! ಸ್ಮರಿಸು ! ಸಮಸ್ತವನ್ನೂ ನೀನು ಸೃಜಿಸುವೆ. ಕರುಣಾಮಯಳಾಗಿ ಪೋಷಿಸುವೆ. ಕೋಪದಿಂದ ಹಾಳುಮಾಡುವೆ. ಅಂತಹ ಕೋಪದಿಂದ ನಮ್ಮ ಜನ್ಮಭೂಮಿಗೆ ದುಃಖವನ್ನುಂಟುಮಾಡಿರುವೆ. ಆಗಲಿ, ಈಗ ಓ ಕರುಣಾಕರಳೇ ! ಕರುಣಿಸಿ ನಮ್ಮ ದುಃಖಗಳನ್ನು ತೊಲಗಿಸಿ ಬಂಧನದಲ್ಲಿರುವ ಆ ರಾಜಕುಮಾರನನ್ನು ಬಿಡಿಸುವಳಾಗು. ಆತನ ಹೃದಯದೊಳು ಪ್ರಸಾದವನ್ನು ತುಂಬಿ ದೇಶದಲ್ಲಿ ಪ್ರಜಾಪೀಡೆ ಇಲ್ಲದಿರುವಂತೆ ಆತನಿಂದಮಾಡಿಸು ” ಯೆಂದು ಪ್ರಾರ್ಥಿಸಿದಳು.

ಸಮೀಪದಲ್ಲಿ ನಿಂತಿದ್ದ ಶಕ್ತಿಗೆ ಅದನ್ನು ನೋಡಿ ಆವೇಶದಿಂದ ಗುಂ

ಡಿಗೆಯು ಹೊಡೆಮುಕೊಳ್ಳಲಾರಂಭವಾಯಿತು. ಮೇಲಿಂದ ದೇವತೆಗಳು ಆಕೆಗೆ ಯಾವುದೋ ಹೇಳಿದಂತೆ ಕೇಳಿಸಿ ಆಕೆಯು “ ಹಾಗಾದರೆ ನಿನ್ನ ಕೆಲಸವನ್ನು ನೆರವೇರಿಸುವುದಕ್ಕೆ, ದೇವತೆಗಳು ನನ್ನನ್ನು ಕಳಿಸಿರುವರು ” ಯೆಂದು ಹೇಳಿದಳು.

ಅದನ್ನು ಯೋಗಿನಿಯು ಕೇಳಿ “ ಶಕ್ತೀ ! ಚಕ್ರವರ್ತಿನೀ ! ನೀನು ಆತನನ್ನು ಬಿಡಿಸುವೆಯಾ ? ” “ ಇದುವರೆಗೆ ನಾನು ಬಿಡಿಸಿಯೇ ಇದ್ದನು, ಆದರೆ ಆತನು ನನ್ನಿಂದ ಬಿಡಿಸಲ್ಪಡಲು ಒಪ್ಪಲಿಲ್ಲ. ತಾಯೇ! ನೀನು ನನ್ನನ್ನು ಹಿಂಬಾಲಿಸುವಳಾಗು. ಆತನು ನೀನು ವಿಮುಕ್ತನನ್ನಾಗಿಸಲು ಅಂಗೀಕರಿಸುವನು. ಈ ಉಂಗುರವನ್ನು ತೋರಿದರೆ ವೊಳಕ್ಕೆ ಹೋಗಬಲ್ಲೆವು. ತರುವಾಯ ನೀನು ಆತನನ್ನು ಕರೆದುಕೊಂಡು ಹೋಗಬಹುದು.”

ಆ ಮಾತುಗಳನ್ನು ಕೇಳಿ ಮಾತಾಜಿಯು ದಡಕ್ಕನೆ ಮೇಲಕ್ಕೆದ್ದು ಹೊರಹೊರಡಲು ಶಕ್ತಿಯು “ ತಾಯೇ ! ನನಗೆ ಇನ್ನೊಂದು ಬಗೆಯ ಉಡುಪುಗಳನ್ನು ಕೊಡು ” ಯೆಂದು ಕೇಳಿದಳು.

ಯೋಗಿನಿಯು ಕಾಷಾಯ ವಸ್ತ್ರಗಳನ್ನು ತಂದುಕೊಟ್ಟುದನ್ನು ಶಕ್ತಿಯು ಧರಿಸಿ ತಾನುತಂದಿದ್ದ ಬೂದಿಯನ್ನು ಮೈಯೆಲ್ಲಕ್ಕೂ ಬಳಿದುಕೊಂಡಳು. ಆಕೆಯು ಧರಿಸಿದ ವೇಷದಮೇಲೆ ತಾನು ಅದುವರೆಗೆ ತಂದಿದ್ದ ಬೆಲೆಮೀರಿದ ಸೀರೆಯೊಳರ್ಧವನ್ನು ಹೊದ್ದುಕೊಂಡಳು. ತನ್ನ ದೊಡ್ಡ ಶಾಲುವಿನಲ್ಲಿ ಅರ್ಧವನ್ನು ಹರಿದು ತಾನಿಟ್ಟುಕೊಂಡು ಉಳಿದ ಅರ್ಧವನ್ನು ಯೋಗಿನಿಗೆ ಕೊಟ್ಟಳು. ತನ್ನ ಬೆಲೆಯುಳ್ಳ ವಸ್ತ್ರದಲ್ಲಿ ಸೆರೆಮನೆಯೊಳು ಹರಿದ ಅರ್ಧವನ್ನು ಕೂಡ ಆ ಯೋಗಿನಿಗೆ ಕೊಟ್ಟು “ ತಾಯೇ! ಈ ಶಾಲನ್ನು ತಲೆಯತುಂಬ ಹೊದ್ದು ಈ ವಸ್ತ್ರವನ್ನುಟ್ಟುಕೊಳುವಳಾಗು. ಬಂದೀಖಾನೆಯಲ್ಲಿ ಪ್ರವೇಶಿಸಿದ ತರುವಾಯ ನನ್ನ ಶಾಲುವನ್ನೂ, ಸೀರೆಯನ್ನೂ ನಿನಗೆ ಕೊಡುವೆನು. ಅದನ್ನು ನಾನು ಧರಿಸಿದಂತೆಯೇ ಗಣೇಶದೇವನನ್ನು ಧರಿಸುವಂತೆ ಮಾಡಿ ತಲೆತುಂಬ ಹೊದ್ದುಕೊಳುವಂತೆ

ಹೇಳು. ಆಗ ನಾವು ಹೋಗುವಾಗ್ಗ ಹೇಗಿರುವೆವೋ ಬರುವಾಗಲೂ ಹಾಗೆಯೇ ಆಗಿ ಕಾವಲುಗಾರರಿಗೆ ಅನುಮಾನವುಂಟಾಗದು."

"ಹಾಗಾದರೆ ನೀನೋ ?" ಯೆಂದು ಯೋಗಿನಿಯು ಕೇಳಿದಳು.

"ನಾನು ಹಿಂದೆ ಇರುವೆನು. ತರುವಾಯ ನನಗೋಸ್ಕರ ಕುತು ಬನು ಬರುವನು" ಯೆಂದು ಶಕ್ತಿಯು ಸಮಾಧಾನಹೇಳಿದಳು. ಆ ಸಮ ಯದಲ್ಲಿ ಶಕ್ತಿಗೆ ಬರುವುದಕ್ಕಿರುವ ವಿಪತ್ತು ಯೋಗಿನಿಗೆ ಬೋಧೆಗೆ ಬಂದಿ ತಾದರೂ ಅದನ್ನು ಪರಿಹರಿಸಲು ಆಕೆಯು ಪ್ರಯತ್ನಿಸಲಿಲ್ಲ. ಆಕೆಗೆ ಕಿರುನಗೆಯು ಬಂದಿತು. ಯೇಕೆಂದರೆ ಪರಬ್ರಂಹವನ್ನು ನೋಡಿದ ಯೋಗಿನಿಗೆ ಮೃತಿಯೆಂದರೇನು ? ಮಾನವನಿಗೆ ಬೇಕಾದುದು ನಶ್ವರವಾದ ಈ ಪ್ರಾಣವಲ್ಲ; ಧರ್ಮಸಂಸ್ಥಾಪನಾರಕ್ಷಣೆಗೋಸ್ಕರ ಅದನ್ನು ಬಲಿ ಕೊಡುವಿಕೆಯೇ ಅವನಿಗೆ ಪರಮಪದವು.

ನಂತರ ಶಕ್ತಿಯು "ತಾಯೇ ! ಇನ್ನೊಂದು ಕಾರ್ಯವಿರುವುದು ನನ್ನ ತಲೆಗೂದಲನ್ನು ಕತ್ತರಿಸು," ಎಂದು ಹೇಳಲು ಯೋಗಿನಿಯು ಹಾ ಗೆಯೇ ಮಾಡಿದಳು.

ಶಕ್ತಿಯು ಕಪ್ಪಾಗಿ ಪಟ್ಟನಂತಿರುವ ಬಲು ಮೃದುವಾದ, ತನ್ನ ತಲೆ ಗೂದಲನ್ನು ಆಕೆಗಕೊಟ್ಟು "ಗುಲ್‌ಬಹಾರು ತಾಯಿಯಿಲ್ಲದವಳಾದ ಪಕ್ಷ ದಲ್ಲಿ ಆಕೆಗೆ ನನ್ನ ಕೊನೆಯ ಗುರುತಾಗಿ ಇದನ್ನು ಕೊಟ್ಟು ಈಕ್ಷಣದಿಂದ ಲೂ ಅವಳನ್ನು ನಿನ್ನ ಮಗುವಿನಂತೆ ನೋಡಿಕೊಳುತ ಕಾಪಾಡುವಳಾ ಗು" ಎಂದು ನುಡಿದಳು.

ಯೋಗಿನಿಯು ಆ ಕುರುಳ್ಗಳನ್ನು ಕಾಳಿಕಾಂಬೆಯ ಪಾದ ಸರೋಜ ಗಳಲ್ಲಿಟ್ಟು ಒಂದುಬಾರಿ ಪ್ರಾರ್ಥಿಸುತಿರಲು ಶಕ್ತಿಯು ಹೊರಗೆ ಹೊರಟಳು.

ಯೋಗಿನಿಯು ಕಾರಾಗೃಹಕ್ಕೆ ಪ್ರವೇಶಿಸಿ "ಮಹಾರಾಜನೆ ! ಮಹಾ ರಾಜನೇ ! ಎಂದು ಕರೆದಳು. ಗಣೇಶದೇವನು ಬೆಚ್ಚಿಬಿದ್ದು "ಶಕ್ತೀ ! ನಾನು ಅಂಗೀಕರಿಸಲಾರೆನು. ನನ್ನನ್ನು ಭ್ರಾಂತಿಗೊಳಿಸದಿರು. ನಾನು ಇದನ್ನು ಬಿಟ್ಟು ಹೋಗತಕ್ಕವನಲ್ಲ." ಎಂದು ಹೇಳಿದನು.

ಸನ್ಯಾಸಿನಿಯು—"ಕುವರನೇ ! ನಾನು, ನಿನ್ನನ್ನು ಬಿಡಿಸಲೋಸುಗ ಬಂದವಳು." ಎಂದು ನುಡಿದ ಕೂಡಲೆ ಗಣೇಶದೇವನು ಯೋಗಿನಿಯನ್ನು ಕಂಡುಕೊಂಡನು. ಆಕೆಯು ಬಿಡಿಸಿದರೆ ಅತನಿಗೆ ಒಪ್ಪಿಕೆಯೆ. ಆಕೆಗೋಸ್ಕರವೇ ಆತನು ಶಾಂತತೆಯಿಂದ ನಿರೀಕ್ಷಿಸುತಿದ್ದನು. ಆದುದರಿಂದ ಮಾತಾಜಿಯು ಹೇಳಿದಂತೆ ವೇಷವನ್ನು ಹಾಕಿಕೊಂಡನು.

ನಂತರ ಮಾತಾಜಿಯು ಬಾಗಿಲು ತಟ್ಟಲು ದಾರಿ ತೆರೆಯಲ್ಪಟ್ಟಿತು. ಅವರಿಬ್ಬರೂ ದಾಟಿ ಹೋದರು. ಬಾಗಿಲುಗಳು ಮರಳಿ ಮುಚ್ಚಲ್ಪಟ್ಟುವು. ಚಕ್ರವರ್ತಿನಿಯೋರ್ವಳೇ ಕಾರಾಗಾರದಲ್ಲಿದ್ದಳು. ಆಕೆಯೂ ಯೋಗಿನಿಯೊಡನೆಯೇ ಅಲ್ಲಿ ಪ್ರವೇಶಿಸಿದಳು. ಆದರೂ ಗಣೇಶದೇವನು ತನ್ನನ್ನು ನೋಡುವನೋ ಏನೋ ಎಂಬ ಅಂಜಿಕೆಯಿಂದ ಒಂದು ಮಾಲೆಯೊಳು ನಡನಡುಗುತ ಬಚ್ಚಿಟ್ಟುಕೊಂಡಿದ್ದಳು. ಈಗ ಆತನು ತಪ್ಪಿಸಿಕೊಂಡು ಹೋದನು. ಆದುದರಿಂದ ಆಕೆಗೆ ಭಾರವು ತಗ್ಗಿಹೋಗಿ, "ಉಫ್, ಅಮ್ಮಯ್ಯ" ಎಂದು ಒಂದು ನಿಟ್ಟುಸಿರು ಬಿಟ್ಟಳು. ಆಕೆಗೆ ಬೇಕಾದ ಕೆಲಸವಾಗಿ ಮುಗಿಯಿತು. ಗಣೇಶದೇವನು ವಿಮುಕ್ತನಾದನು. ಇದುವೇನೆ ಮಹಾತ್ಮಳಾದ ಶಕ್ತಿಯು ಹಗೆಯನ್ನು ಸಾಧಿಸಿದ ರೀತಿಯು ? ಆಕೆಯು ಜನ್ಮವೆತ್ತಿದನಂತರ ಆಕೆಗುಂಟಾದ ಕೋರಿಕೆಯೊಂದಾದರೂ ತೀರಿರಲಿಲ್ಲ. ಆದರೂ ಕೊಟ್ಟಕೊನೆಯಲ್ಲಿ ದೇವತೆಗಳಾಕೆಯೊಳು ಕರುಣೆಯಿಟ್ಟು ಆಕೆ ಕೇಳಿಕೊಂಡ ವರವನ್ನು ದಯೆಪಾಲಿಸಿದರು. ಇದರೊಡನೆ ಆಕೆಯು ಅಪೇಕ್ಷಿಸಿದ ಕೋರಿಕೆಗಳೆಲ್ಲವೂ ಫಲಿಸಿದುವು. ಎಷ್ಟುಕೋರಿಕೆಗಳು ವಿಫಲವಾದರೂ ಇದು ಲಭಿಸಿತಾದುದರಿಂದ ಅವೆಲ್ಲವೂ ಲೆಕ್ಕವಿಲ್ಲದೆ ಹೋದುವು. ಇದರಿಂದ ಆಕೆಗೆ ಅಮಿತವಾದ ಆನಂದೋದಯವಾಯ್ತು. ಆಕೆಯ ಅಂತರಾತ್ಮನಿಗೆ ಅಪಾರವಾದ ತೃಪ್ತಿಯುಂಟಾಯ್ತು. ಆಕೆಯು ತನ್ನಲ್ಲಿ ಇಂತಹ ಅನುಗ್ರಹವನ್ನು ಪ್ರಸಾದಿಸಿದುದಕ್ಕೋಸ್ಕರ ಭಗವಂತನಿಗೆ ಅನೇಕ ವಂದನೆಗಳನ್ನರ್ಪಿಸಿದಳು. ಭಗವನ್ಮಾಯೆಯು ಈಗ ಆಕೆಗೆ ಬೋಧೆಯಾಯ್ತು. ಆಕೆಯ ದುಃಖಗಳೆಲ್ಲವೂ ಅಣುಮಾತ್ರವಾಗಿ ತೋರಿತು. ಇವೆಲ್ಲವು ಯಾವುದೋ ಒಂದು ಮಹತ್ತರವಾದ ಉದ್ದೇಶ್ಯಕ್ಕೆ ಮಾಗೋಪಾಯಗಳೆಂದೆಣಿಸಿದಳು. ನಂತರ ಆಕೆಗೆ ಪವಿ

ತ್ರತಮವಾದ ಆಶೆಯೊಂದು ಜನಿಸಿ ಗಣೇಶದೇವನು ಕೈದಿಯಾಗಿದ್ದು ಬಿದ್ದಿದ್ದ ಸ್ಥಳಕ್ಕೆ ಹೋಗಿ ಆ ಒರಟು ನೆಲನಮೇಲೆ ಸುಕುಮಾರ ಶರೀರಿಣಿಯು ವಿಶ್ರ ಮಿಸಿ ಆತನು ಹೊದ್ದುಕೊಳ್ಳುತಿದ್ದ ಜೀರ್ಣಕಂಬಳವನ್ನು ತಾನು ಹೊದ್ದು ಕೊಂಡಳು. ಅದೊಂದೇ ಆತನು ಆಕೆಗೆ ಬಿಟ್ಟ ಕೊನೆಯ ಪದಾರ್ಥವು. ತುಂಬುಬೆಳದಿಂಗಳೊಳು ಉದ್ಯಾನವನದಲ್ಲಿ ಹಂಸತೂಲಿಕಾ ತಲ್ಪದೊಳ್ ಶಯನಿಸಿದಾಗ ಆಕೆಗೆ ಇಂತಹ ಸುಖಾನುಭವವಿಲ್ಲ. ಆಕೆಯ ಮನಸ್ಸಿಗೆ ಈ ಗ ಎಷ್ಟೋ ಶಾಂತತೆಯುಂಟಾಗಿ ಕೃತಜ್ಞಳಾಗಿ ಭಗವಂತನನ್ನು ಸ್ಮರಿಸುತ ಭಕ್ತಿಯಿಂದ ಹೀಗೆ ಪ್ರಾರ್ಥಿಸತೊಡಗಿದಳು.

"ಎಲೈ ಸರ್ವದಯಾಪರನಾದ ಭಗವಂತನೆ! ನೀನೆಲ್ಲರಲ್ಲಿಯೂ ಸರ್ವದಾ ದಯಾಮಯನಾಗಿರುವೆ. ಸದಾ ಸೇವಿಸುತಿರುವರಿಗೆ ಸಹ ನಿನ್ನ ಅನುಗ್ರಹವು ದೊರೆಯುವುದಿಲ್ಲ. ನಾನು ನಿನ್ನನ್ನು ಸೇವಿಸಿದಾಗ್ಗ್ಯೂ ಕರುಣಾಳುವಾಗಿ ನನ್ನಲ್ಲಿ ನಿನ್ನ ಪ್ರಸಾದವನ್ನು ತೋರ್ಪಡಿಸಿರು ವೆ. ನನ್ನ ದುಃಖಗಳಲ್ಲಿ ನನ್ನ ಕಣ್ಣೀರೆಲ್ಲವೂ ವೊಂದೊಂದಾಗಿ ಬೈತಿ ಟ್ಟು ಅವೆಲ್ಲವನ್ನೂ ಕಲೆಸಿ ಆನಂದ ಸಮುದ್ರವಾಗಿ ನನಗೆ ದಯೆಪಾಲಿಸಿರು ವೆ. ಅನರ್ಥಗಳೆಂದೆಣಿಸದೆ ನನ್ನಲ್ಲಿ ಯಿಂತಹ ಅಕ್ವ್ಯಾಜಕರುಣೆಯನ್ನು ತೋ ರ್ಪಡಿಸಿರುವೆ. ಆದುದರಿಂದ ನನಗೆ ಯಿನ್ನೊಂದು ವರವನ್ನು ದಯೆಪಾಲಿ ಸು. ಈ ಶಾಂತಸ್ಥಿತಿಯು ಹೋಗದಿರುವಾಗಲೇ ನನಗೆ ಈ ದೇಹಬಂಧವನ್ನು ತೊಲಗಿಸಿ ಈ ಆನಂದದೊಡನೆಯೇ ಮರಣ ಉಂಟಾಗುವಂತೆ ಅನುಗ್ರಹಿಸು."

ಆ ಸಮಯದಲ್ಲಿ ಆಕೆಯ ರೆಪ್ಪೆಗಳು ಮೆಲ್ಲಮೆಲ್ಲನೆ ಕಣ್ಣುಗಳನ್ನು ಮುಚ್ಚಲು ಗುರ್ತುಗಳುಂಟಾದವು. ಈ ಸ್ವಪ್ನಾವಸ್ಥೆಯೊಳು ಆಕೆಗುಂಟಾದ ಆನಂದ ಮಾತ್ರವೇ ಉಳಿದಿದ್ದಿತು. ಅದರಲ್ಲಿ ಚಿಕ್ಕಂದು ರಾಜಕುಮಾರನು ವೇಣುವಿನ ಮೇಲೆ ಬಾರಿಸಿ ಹಾಡಿದ ಗೀತವು ಕೇಳಿಸಿತು. ಆಕೆಯು ಮಹೀ ಪಾಲ ಪುಷ್ಕರಿಣೀ ತೀರದೊಳಿದ್ದ ಹೂದೋಟದೊಳು ಸಂಚರಿಸುತಿದ್ದಳು. ಅಲ್ಲಿಗೆ ತನ್ನ ಬಾಲ್ಯ ಸ್ನೇಹಿತನಾದ ಗಣೇಶದೇವನು ಬಂದನು. ಅವನನ್ನು ತಾನು ಪ್ರೀತಿಸಿದಳು. ಆಕೆಯ ಕೊರಳಲ್ಲಿ ಹೊಸದಾಗಿ ಪೋಣಿಸಿದ ಶೃಂಗಾ

ರ ವಕುಳ ಪುಷ್ಪ ಮಾಲೆ ಯೂಲಾಡುತ್ತಿದ್ದಿತು. ರಾಜಕುಮಾರನ ವೇಣುನಾದವು ಅಷ್ಟಕ್ಕಷ್ಟು ಯಿಂಪಾಗಿ ಕೇಳಿಸುತ್ತಿದ್ದಿತು. ತಣ್ಣಗಿರುವ ಬೆಳ್ದಿಂಗಳು ಮನ ಮೊಪ್ಪಲು ಬೀರುತ್ತಿದ್ದಿತು. ಮಲಯಮಾರುತಗಳು ಚಂಪಕಾದಿಸುಮ್ಮನೊ ಮನೋಜ್ಞ ಸೌರಭವನ್ನೆಲ್ಲೆಡೆಯಲ್ಲಿಯೂ ಪ್ರಸರಿಸುತ್ತಿದ್ದಿತು. ಶುಕಪಿಕಶಾರಿಕಾದಿಗಳು ಮನೋಹರವಾಗಿ ಹಾಡುತ್ತಿದ್ದುವು. ಆದರೆ ಈಗಲಾಕೆಯ ಆನಂದವನ್ನು ನೋಡುವರಾರೂ ಇಲ್ಲವಾದತು. ರಾಜಕುಮಾರನೊಬ್ಬನೇ ಆಕೆಯೊಡನೆ ಇದ್ದನು. ಅವರ ಅಂತರಾತ್ಮಗಳು ಆನಂದಮಯಗಳಾದ ಸ್ವರ್ಗಾದಿ ಲೋಕಗಳಿಗೇರಿ ಹೋಗುತ್ತಿದ್ದವು. ಅಲ್ಲಿ ಅಚ್ಚರಿಯ ಮಧುರಗಾನವು ಕಿವಿಗಳಿಗಿಂಪಾಗಿ ಕೇಳಿಸುತ್ತಿದ್ದಿತು. ಆಕೆಯ ಆತ್ಮವು ಅನಂತವಾದ ಪರಮಾತ್ಮನೊಳು ಐಕ್ಯವಾಗಿದ್ದಿತು. ಹೀಗಿರಲು ಆಕೆಯು ಗಾಢನಿದ್ರೆಯೊಳು ಮುಳುಗಿ ಹೋದಳು.

ಆಗಲಿ! ಕಾರಾಗಾರ ದ್ವಾರಕ್ಕೆ ಹೊರಗೆ ಕೇಳಿಸುವ ಆ ಪಿಶಾಚಗಳ ಮಾತುಗಳಿಗರ್ಥವೇನೋ ಕೇಳಿರಿ, ಯೆರಡು ಕರೀ ವಿಗ್ರಹಗಳು ಸೆರೆಮನೆಯೊಳಗೆ ಪ್ರವೇಶಿಸುತ್ತಿದ್ದುವು ಅದರೊಳೊಬ್ಬನು "ಎಲಾ! ಕೈದಿಯು ಗುರ್ಕೆಗಳ ಹೊಡೆಯುತ್ತ ನಿದ್ರೆಮಾಡುತ್ತಿದಾನೆಯೋ?" ಅಂದನು.

ಎರಡನೆ ಯುವನು "ಹಾಗಾದರೆ ಮತ್ತೂ ಮೊಳ್ಳೆಯದೆ!"

"ಅವನು ಮಹಾಶಕ್ತನು. ಧೂರ್ತನು. ಅವನನ್ನು ನಿದ್ರಿಸುತ್ತಿರುವಾಗಲೆ ಕಡೆ ಗಾಣಿಸಿದೆವೋ; ಗೆದ್ದೆವು. ಅದಿಲ್ಲದಿದ್ದರೆ ಹೋರಾಡಬೇಕಾಗುವುದು."

ಮೊದಲನೆಯವನು "ಅಯ್ಯಾ! ನೀವು ಲಾಂದರವನ್ನು ಆ ಪಕ್ಕದಲ್ಲಿಟ್ಟು ಬಾಗಿಲ ಬಳಿ ನಿಂತಿರಬಹುದು. ಕತ್ತಲಲ್ಲಿ ನಾನು ಆ ಕೆಲಸವನ್ನು ಪೂರೈಸಿ ಬಿಡುವೆನು." ಈ ಮಾತುಗಳು ಕುತುಬನೊಡನೆ ಹೇಳಲ್ಪಟ್ಟಿತು. ಅವನು ಈ ಕ್ರೂರ ಕರ್ಮ ನಡೆಯುವ ವರೆಗೂ ಹೊರಗೆ ಕಾದಿದ್ದನು. ಅಷ್ಟರೊಳು ಆಕಸ್ಮಿಕವಾಗಿ ಹುಚ್ಚು ಹಿಡಿದವನಂತೆ ಸುಲ್ತಾನನು (ಚಕ್ರವರ್ತಿ)

ಅಲ್ಲಿಗೆ ಬಂದನು. ಕುತುಬನಿಗೋಸ್ಕರ ಕಾದಿರಲಾರದೆ ತನ್ನ ಗೌರವನ್ನು ತೊರೆದು ಆ ಕ್ರೂರನ ಹಿಂದೆ ಕಾರಾಗೃಹದ ಬಳಿಗೆ ಬಂದು "ನೀನು ನನ ಆಜ್ಞೆಯನ್ನು ಇನ್ನೂ ನಡೆಸಿರುವಂತೆ ಕಾಣಲಿಲ್ಲ. ನಡೆಸಿದ್ದರೆ ಯೆಲ್ಲಿ? ಅವನ ತಲೆಯೆಲ್ಲಿ? ಚಕ್ರವರ್ತಿನಿಯೆಲ್ಲಿರುವಳು?" ಯೆಂದು ಕೂಗಿದನು.

ಆ ಕ್ರೂರಕಾರ್ಯವು ನಡೆದುಹೋಯಿತ್ತು. ಭಟರೊಳೊಬ್ಬನು ವೊಂದು ಬಟ್ಟೆಯೊಳು ಸುತ್ತಿ ಸೆರೆಮನೆಯೊಳಗಿಂದ ಹೊರಗೆ ಬಂದು ಕುತುಬನಕೈಗೆ ಕೊಟ್ಟನು. ಬಟ್ಟೆಯನ್ನು ತೆಗೆದುಹಾಕಿ ತನ್ನ ಪ್ರತಾಪ ಚಿಹ್ನವಾದ ಆ ಮಸ್ತಕವನ್ನು ಚಕ್ರವರ್ತಿಯ ಕೈಗೆ ಕೊಟ್ಟು "ಮಹಾ ಪ್ರಭುವಿಗೆ ಬೇಕಾದ ವುತ್ತಮಾಂಗವಿದೋ" ಯೆಂದು ಘೋರಶಾಂತತೆಯಿಂದ ನುಡಿದನು.

ರಕ್ತ ಪರಿಷಿಕ್ತವಾಗಿದ್ದ ಆ ಮುಖದಮೇಲೆ ದೀವಿಗೆಯ ಬೆಳಕು ಪ್ರಸರಿಸಿತು. ಅದನ್ನು ನೋಡಿ "ಪಾಪೀ! ಚಂಡಾಲಾ! ಏನಮಾಡಿದೆ! ಯಾರತಲೆ ಯಿದು? ಯೆಂದು ಗಟ್ಟಿಯಾಗಿ ವೊಂದು ಕೂಗಿಟ್ಟು ಚಕ್ರವರ್ತಿಯು ಕೆಳಗುರುಳಿದನು.



## ಉಪಸಂಹಾರವು.

ಶಕ್ತಿಯು ಕೊಲಲ್ಪಟ್ಟ ಸಂಗತಿಯು ತಿಳಿದಕೂಡಲೆ ಗಯಜುದ್ದೀನನಿಗೆ ಶುದ್ಧಾಂಗವಾಗಿ ಬುದ್ಧಿಗೆಟ್ಟಿತು. ಕುತುಬನನ್ನೂ ಸಹಬುದ್ದೀನನನ್ನೂ ಕಾರಾಗೃಹ ರಕ್ಷಕ ಭಟರೆಲ್ಲರನ್ನೂ ಕೊಲಿಸಿದನು. ಅನೇಕರು ಯುಕ್ತಾಯುಕ್ತ ವಿವೇಚನೆಯಿಲ್ಲದೆ ಕೊಲಲ್ಪಡುತಿದ್ದರು. ಪ್ರಾಣಗಳನ್ನುಳಿಸಿ ಕೊಳುವುದಕ್ಕೋಸ್ಕರ ಪ್ರಜೆಗಳೆಲ್ಲರೂ ವೋಡಿ ಹೋಗುತಿದ್ದರು. ಅನೇಕರು ರಹಸ್ಯವಾಗಿಯೂ, ಬಹಿರಂಗವಾಗಿಯೂ, ದಿನಾಜಪುರದರಸನ ಸನ್ನಿಧಿಯನ್ನು ಸೇರಿದರು. ದಿನಾಜಪುರಾಧಿನಾಥನಿಗೂ ಗಯಜುದ್ದೀನನಿಗೂ ಯುದ್ಧವು ವೊದಗಿ ಅದರಲ್ಲಿ ನಿರ್ಭಾಗ್ಯನಾದ ಗಯಜುದ್ದೀನನು ಹತನಾದನು. ಹಿಂದು

ಗಳೂ ಮಹಮದೀಯರೂ ಏಕವಾಗಿ ಗಣೇಶದೇವನನ್ನು ಸಿಂಹಾಸನದ ಮೇಲೆಕುಳ್ಳಿರಿಸಿದರು. ವಂಗದೇಶ ಚಾರಿತ್ರದಲ್ಲಿ ಯೆಂದೆಂದಿಗೂ ಅರಿಯದ "ಹಿಂದೂ ಸಾಮಂತರಾಜನು ಮಹಮದೀಯ ಸಿಂಹಾಸನವನ್ನೇರಿದನು." ಎಂಬ ಅಚ್ಚರಿಯಾದ ಪ್ರವಾದವು ಸ್ಥಿರವಾಗಿಬಿಟ್ಟಿತು.

ಶಕ್ತಿಯು ಸ್ವರ್ಗವಾಸಿನಿಯಾದುದರಿಂದ ನಿರುಪಮೆಯ ಅದೃಷ್ಟವು ಹೆಚ್ಚಿ ಆಕೆಯು ಬಿಟ್ಟುಕೊಟ್ಟ ಸಿಂಹಾಸನವನ್ನು ತಾನಧಿಷ್ಠಿಸಿ ರಾಷ್ಟ್ರಕ್ಕೆ ಚಕ್ರವರ್ತಿನಿಯಾದಳು. ಶಕ್ತಿಯ ಉದ್ಯಾನವನದೊಳು ಮೊದಲಿನ ಪುಷ್ಪಗಳೇ ಯೀಗಲೂ ಪುಷ್ಪಿಸುತಿವೆ. ಮೊದಲಿನ ಹಕ್ಕಿಗಳೇ ಯೀಗಲೂ ಧ್ವನಿಯೆತ್ತಿ ಹಾಡುತಿವೆ. ಮೊದಲಿನ ಮಂದ ಮಾರುತಗಳೇ ಈಗಳೂ ಬೀರುತಿವೆ; ಆದರೂ ಅಭಿಜಾತ್ಯ ಲಕ್ಷಣಗಳುಳ್ಳ ಚಕ್ರವರ್ತಿನಿ ಶಕ್ತಿಯ ವಿಹಾರಮಾತ್ರ ಅಲ್ಲಿ ಯಿಲ್ಲವಾಯ್ತು. ಬೆಳತಿಂಗಳ ರಾತ್ರಿಯಲ್ಲಿ ಭರ್ತೃ ಸಹಿತಳಾಗಿ ನಿರುಪಮೆಯು ನೈಜವಾದ ಅನುರಾಗದೊಡನೆ ಅಲ್ಲಿ ವಿಹರಿಸುತ ಸರಸಮಾಡುತಿದ್ದಳು.

ಆಕೆಯ ಕುಮಾರನಾದ ಯಾದವ ದೇವನು ವೊಬ್ಬ ಬಾಲಿಕೆಯ ಕೈಹಿಡಿದುಕೊಂಡು ಅಲ್ಲಿಗೆ ಬಂದು "ಅಮ್ಮಾ! ನಾನು ದೊಡ್ಡವನಾದ ತರುವಾಯ ಈ ಗುಲ್‌ಬಹಾರನ್ನು ಮದುವೆಯಾಗುವೆನು." ಯೆಂದು ಹೇಳಿ ಅವಳನ್ನು ಮುದ್ದಿಟ್ಟುಕೊಂಡು "ನೀನು ನನ್ನ ರಾಣಿಯು. ಅಳದಿರು, ನಾನು ನಿನಗೆ ಹೂಗಳನ್ನು ಕೊಯ್ದು ತರುವೆನು." ಯೆಂದು ಆ ಬಾಲಿಕಾಮಣಿಯನ್ನು ಸಮಾಧಾನ ಪಡಿಸಿದನು.

ನಿರುಪಮೆಯು ತನ್ನ ಮುದ್ದು ಮಗನ ಮಾತುಗಳಿಗೆ ರೇಗಿ "ಕುಮರಾ! ನೀನು ಅಂತಹ ಮಾತುಗಳಾಡಬಾರದು. ಅವಳು ಮಹಮದೀಯ ಬಾಲಿಕೆಯೆಂಬುದನ್ನು ಅರಿಯೆಯಾ?" ಯೆಂದು ಮೂದಲಿಸಿದಳು.

ಅದನ್ನು ಕೇಳಿ ಸಮೀಪದಲ್ಲಿದ್ದ ಯೋಗಿನಿಯು "ಆ ಬಾಲಿಕೆಯನ್ನು ಹಾಗೆ ನಿರಸನ ಮಾಡದಿರು. ಆಕೆಯ ತಾಯೇ ನಿಮ್ಮೆಲ್ಲರಿಗೆ ಪ್ರಾಣದಾನ

ಮಾಡಿರುವಳೆಂಬದನ್ನು ಜ್ಞಾಪಕದಲ್ಲಿಡುವಳಾಗು." ಯೆಂದು ಬದುಲು ಹೇಳಿದಳು.

ಗಣೇಶದೇವನು ನಿಟ್ಟುಸಿರು ಬಿಟ್ಟು ಆ ಬಾಲಿಕೆಯನ್ನೆತ್ತಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮುಂಗುರುಳು ಮೂಸಿ ಮುದ್ದಾಡುತಿದ್ದನು. ಆದರೆ ನಿರುಪಮೆಗೆ ಮಾತ್ರ ಯಾವುದೋ ಕೇಡು ಮೂಡುವುದೆಂದು ಅಂಜಿಕೆ ಹುಟ್ಟಿತು. ಅಷ್ಟರೊಳಗೆ ತೋಟದವನು ವೊಂದು ಪುಷ್ಪ ಮಾಲಿಕೆಯನ್ನು ತರಲು ಯಾದವ ದೇವನು ಅದನ್ನು ತೆಗೆದುಕೊಂಡು ಆಬಾಲಿಕೆಯ ಕೊರಲೊಳಿಟ್ಟು "ರಾಜಕುಮರೀ! ನಾನು ನಿನ್ನನ್ನು ಮದುವೆ ಮಾಡಿಕೊಳುವೆನು. ನೀನು ನನ್ನ ರಾಣಿಯು." ಯೆಂದು ಹೇಳಿದನು.

ನಿರುಪಮೆಯ ಅನುಮಾನವು ನಿಶ್ಚಯವಾಗಿ ಬಿಟ್ಟಿತು. ಆ ಬಾಲಕನು ಹೇಳಿದಂತೆ ಆಚರಿಸಿ ಬಿಟ್ಟನು. ಶಕ್ತಿಯ ಶಾಪವು ಫಲಿಸಿಬಿಟ್ಟಿತು. ಯಾದವ ದೇವನು ವಯಸ್ಕನಾದ ತರುವಾಯ ಮಹಮದೀಯರಲ್ಲಿ ಕಲೆತು ಗುಲ್ ಬಹರನ್ನು ಮದುವೆಯಾದನು. ಆತನು ದೇಶಚಾರಿತ್ರದೊಳು ವಂಗದೇಶದ ಸುಲ್ತಾನನಾದ ಜಲಾಲುದ್ದೀನನಾಗಿ ವ್ಯವಹರಿಸಲ್ಪಟ್ಟನು.

ಸಂಪೂರ್ಣವು.

---